ಪ್ರತಿಭಾವಂತ ಸಂಸದೀಯ ಪಟು ಪುಸ್ತಕ ಮಾಲಿಕೆ

# ಎಸ್.ವೈ.ಪಾಟೀಲ

ಪಡಗಾನೂರಶಂಕರಗೌಡರು

ಡಾ. ಎಂ.ಎಸ್. ಪಾಟೀಲ

ಪ್ರಕಟಣೆ

ಕರ್ನಾಟಕ ವಿಧಾನ ಮಂಡಲದ ಗ್ರಂಥಾಲಯ ಸಮಿತಿ

ವಿಧಾನಸೌಧ, ಬೆಂಗಳೂರು

**S.Y. PATIL**
Eminent Parlimentarian Series
Written by **DR. M.S. PATIL**
Reader, Kannada Dept
Gulbarga University, Gulbarga
**Published** by
Karnataka Legislature Library Committee
Vidhana Soudha, Bangalore-560001.
Page: 231 + xi Price: 20-00 Rs.

First Edition: 2008 Copies: 2000
**Printed & Designed by**
Government Press, Bangalore.

**ಎಸ್.ವೈ. ಪಾಟೀಲ್**
ಪ್ರತಿಭಾವಂತ ಸಂಸದೀಯ ಪಟು ಪುಸ್ತಕ ಮಾಲಿಕೆ
**ಲೇಖಕರು: ಡಾ. ಎಂ.ಎಸ್. ಪಾಟೀಲ**
ಪ್ರವಾಚಕರು ಕನ್ನಡ ವಿಭಾಗ,
ಗುಲ್ಬರ್ಗಾ ವಿಶ್ವವಿದ್ಯಾಲಯ, ಗುಲ್ಬರ್ಗಾ
**ಪ್ರಕಾಶನ**
ಗ್ರಂಥಾಲಯ ಸಮಿತಿ
ಕರ್ನಾಟಕ ವಿಧಾನ ಮಂಡಲ
ವಿಧಾನಸೌಧ, ಬೆಂಗಳೂರು-560 001.
ಪುಟ: 231 + xi ಬೆಲೆ: 20/- ರೂ.

ಮೊದಲ ಮುದ್ರಣ: 2008 ಪ್ರತಿಗಳು: 2,000
**ಮುದ್ರಣ ಮತ್ತು ವಿನ್ಯಾಸ**
ಸರ್ಕಾರಿ ಮುದ್ರಣಾಲಯ, ಬೆಂಗಳೂರು-560 001.

# ವಿಧಾನ ಮಂಡಲ ಗ್ರಂಥಾಲಯ ಸಮಿತಿ
## 2008-2009

ಅಧ್ಯಕ್ಷರು

**ಶ್ರೀ ವೀರಣ್ಣ ಮತ್ತಿಕಟ್ಟಿ**

ಸಭಾಪತಿಗಳು, ಕರ್ನಾಟಕ ವಿಧಾನ ಪರಿಷತ್ತು

ಸದಸ್ಯರು

**ಶ್ರೀ ಜಗದೀಶ ಶೆಟ್ಟರ್**

ಸಭಾಧ್ಯಕ್ಷರು, ಕರ್ನಾಟಕ ವಿಧಾನ ಸಭೆ

**ಶ್ರೀ ಎಂ. ನಾರಾಯಣಸ್ವಾಮಿ**

ವಿಧಾನಸಭಾ ಸದಸ್ಯರು ಹಾಗೂ ಉಪ ಸಮಿತಿಯ ಅಧ್ಯಕ್ಷರು

**ಶ್ರೀ ಕೆ. ಲಕ್ಷ್ಮೀನಾರಾಯಣ**

ವಿಧಾನಸಭಾ ಸದಸ್ಯರು

**ಶ್ರೀ ಎಸ್.ವಿ. ರಾಮಚಂದ್ರ**

ವಿಧಾನಸಭಾ ಸದಸ್ಯರು

**ಶ್ರೀ ಎನ್.ಎ. ಹ್ಯಾರೀಸ್**

ವಿಧಾನಸಭಾ ಸದಸ್ಯರು

**ಶ್ರೀ ಹೆಚ್.ಎಸ್. ಪ್ರಕಾಶ್**

ವಿಧಾನಸಭಾ ಸದಸ್ಯರು

**ಡಾ|| ಚಂದ್ರಶೇಖರ ಬಿ.ಕಂಬಾರ**

ವಿಧಾನ ಪರಿಷತ್ ಸದಸ್ಯರು

**ಶ್ರೀ ಮುಖ್ಯಮಂತ್ರಿ ಚಂದ್ರು**

ವಿಧಾನ ಪರಿಷತ್ ಸದಸ್ಯರು

**ಡಾ|| ಶ್ರೀನಾಥ್**

ವಿಧಾನ ಪರಿಷತ್ ಸದಸ್ಯರು

# ಪ್ರತಿಭಾವಂತ ಸಂಸದೀಯ ಪಟು ಪುಸ್ತಕ ಮಾಲಿಕೆ

## ಅಧಿಕಾರಿ – ಸಂಪಾದಕ ವರ್ಗ

---

### ಕರ್ನಾಟಕ ವಿಧಾನ ಮಂಡಲ

ಡಿ'ಸೋಜ ರಾಬಿನ್‌ಸನ್ ಪ್ರಧಾನ ಕಾರ್ಯದರ್ಶಿ

### ಕರ್ನಾಟಕ ವಿಧಾನಸಭೆ ಸಚಿವಾಲಯ

| | |
|---|---|
| ಎಸ್.ಬಿ. ಪಾಟೀಲ್ | ಕಾರ್ಯದರ್ಶಿ |
| ಟಿ.ಎನ್. ಧ್ರುವಕುಮಾರ್ | ಅಪರ ಕಾರ್ಯದರ್ಶಿ (ಪ್ರ) |
| ಎಂ. ಗುರುರಾಜ | ಉಪ ಕಾರ್ಯದರ್ಶಿ |
| ಮುನೀರುನ್ನಿಸಾ | ಅಧೀನ ಕಾರ್ಯದರ್ಶಿ (ಪ್ರ) |
| ಅನಸೂಯ ಎನ್.ದೇವಗಿರಿ | ಸಹಾಯಕ ಗ್ರಂಥಪಾಲಕಿ |

### ಕರ್ನಾಟಕ ವಿಧಾನ ಪರಿಷತ್ತಿನ ಸಚಿವಾಲಯ

| | |
|---|---|
| ವಿ. ಶ್ರೀಶ್ | ಕಾರ್ಯದರ್ಶಿ |
| ಟಿ. ಕೃಷ್ಣೆಗೌಡ | ಅಪರ ಕಾರ್ಯದರ್ಶಿ |

# ಮುನ್ನುಡಿ

24 ನವೆಂಬರ್ 2008

ಸುವರ್ಣ ಮಹೋತ್ಸವ ಆಚರಣೆಯ ಅಂಗವಾಗಿ ಈ ದೇಶಕ್ಕಾಗಿ ದುಡಿದ, ಅಗ್ರಮಾನ್ಯ ಸಂಸದೀಯ ಪಟುಗಳಾಗಿ ಕೊಡುಗೆಯನ್ನು ನೀಡಿದ ಮಹನೀಯರನ್ನು ಸ್ಮರಿಸುವುದು ನಮ್ಮ ಆದ್ಯ ಕರ್ತವ್ಯವಾಗಿದೆ. ಈಗಾಗಲೇ ಲೋಕಸಭಾ ಕಾರ್ಯಾಲಯದವರು ಇಂತಹ ಪ್ರತಿಭಾವಂತ ಸಂಸದೀಯ ಪಟುಗಳ ಬಗ್ಗೆ ಅನೇಕ ಹೊತ್ತಿಗೆಗಳನ್ನು ಹಿಂದಿ ಹಾಗೂ ಆಂಗ್ಲ ಭಾಷೆಯಲ್ಲಿ ಹೊರತಂದಿರುತ್ತಾರೆ. ಅವುಗಳಲ್ಲಿ ಡಾ|| ರಾಮಮನೋಹರ ಲೋಹಿಯಾ, ಡಾ|| ಬಿ.ಆರ್. ಅಂಬೇಡ್ಕರ್, ಡಾ|| ಶಾಂಪ್ರಸಾದ್ ಮುಖರ್ಜಿ, ಡಾ|| ರಾಜೇಂದ್ರ ಪ್ರಸಾದ್ ಮೊದಲಾದ ಗಣ್ಯರ ಪುಸ್ತಕಗಳನ್ನು ನಾವು ಕನ್ನಡದಲ್ಲಿ ಭಾಷಾಂತರಿಸಿ ಹೊರತಂದಿರುವ ಸಂತೋಷಕರ ವಿಷಯವನ್ನು ಉಲ್ಲೇಖಿಸಬಯಸುತ್ತೇವೆ.

ರಾಜ್ಯದ ಸಂಸದೀಯ ಪಟುಗಳಾದ ಅನೇಕ ಮಹನೀಯರನ್ನು ಕುರಿತು ಹೊತ್ತಿಗೆಗಳನ್ನು ಸಿದ್ಧಪಡಿಸಿ ಪ್ರಕಟಿಸುವ ಯೋಜನೆಯನ್ನು ಕರ್ನಾಟಕ ವಿಧಾನ ಮಂಡಲವು ಹಮ್ಮಿಕೊಂಡಿದ್ದು, ವಿಧಾನ ಮಂಡಲದ ಗ್ರಂಥಾಲಯ ಸಮಿತಿಯು ಈಗಾಗಲೇ ಪ್ರಕಟಿಸುತ್ತಿದೆ. ಈ ಉಪ ಸಮಿತಿಯು ಕಾರ್ಯಪ್ರವೃತ್ತವಾಗಿ ರಾಜ್ಯದ ಲೇಖಕರ, ವಿದ್ವಾಂಸರ ಸಹಕಾರದಿಂದ ಈ ಯೋಜನೆಯನ್ನು ಕಾರ್ಯಗತಗೊಳಿಸುತ್ತಿದೆ. ನಮ್ಮ ನಾಡಿನ ಪ್ರಗತಿಪರ ಚಿಂತಕರು, ರಾಜಕೀಯ ಮುತ್ಸದ್ದಿಗಳ ಆಶಯಗಳನ್ನು ದಾಖಲಿಸಿ ಈ ಮೂಲಕ ಅವರ ಜೀವನ ಚಿತ್ರಣವನ್ನು ಪುಸ್ತಕ ರೂಪದಲ್ಲಿ ತರುತ್ತಿದೆ.

ಪ್ರತಿಭಾವಂತ ಸಂಸದೀಯ ಪಟುಗಳ ಮಾಲಿಕೆಯಲ್ಲಿ ಈಗಾಗಲೇ ಶ್ರೀ ಕೆಂಗಲ್ ಹನುಮಂತಯ್ಯ, ಶ್ರೀ ಶಾಂತವೇರಿ ಗೋಪಾಲಗೌಡ, ಶ್ರೀ ಎಸ್. ನಿಜಲಿಂಗಪ್ಪ, ಶ್ರೀ ಕೆ.ಸಿ. ರೆಡ್ಡಿ, ಶ್ರೀ ಡಿ. ದೇವರಾಜ ಅರಸು, ಶ್ರೀ ಜೆ.ಹೆಚ್. ಪಟೇಲ್, ಶ್ರೀ ಟಿ.ಆರ್. ಶಾಮಣ್ಣ, ಶ್ರೀ ಎಸ್.ಡಿ. ಗಾಂವಕರ್, ಶ್ರೀಮತಿ ಬಿ.ಎಲ್. ಸುಬ್ಬಮ್ಮ, ಡಾ|| ಲಂಕಾ ಸುಂದರಂ, ಸರದಾರ ಶರಣಗೌಡ ಇನಾಂದಾರ್, ಕೆ.ಹೆಚ್. ರಂಗನಾಥ್ ಮತ್ತಿತರ ಹಲವು ಗಣ್ಯರ ಬಗೆಗಿನ ಪುಸ್ತಕಗಳನ್ನು ಹೊರತರಲಾಗಿದೆ.

**ಡಾ|| ಎಂ.ಎಸ್. ಪಾಟೀಲ** ಅವರು ರಚಿಸಿರುವ ರಾಜ್ಯದ ಹಿರಿಯ ಸಂಸದೀಯ ಪಟುವಾಗಿದ್ದ **ಎಸ್.ವೈ. ಪಾಟೀಲ** ಅವರ ಬಗೆಗಿನ ಈ ಪುಸ್ತಕವನ್ನು ತಮ್ಮ ಮುಂದಿಡಲು ಹೆಮ್ಮೆಯೆನಿಸುತ್ತದೆ. ಇವರ ಸದನದ ಭಾಷಣಗಳು ಸಾಮಾಜಿಕ ಸಮಸ್ಯೆಗಳ ಮೇಲೆ ಬೆಳಕು ಚೆಲ್ಲುತ್ತವೆ. ಈ ನಾಡಿನ ರಾಜಕೀಯ, ಸಾಮಾಜಿಕ, ಸಾಂಸ್ಕೃತಿಕ ಆಶಯಗಳನ್ನು ಬಿಂಬಿಸುತ್ತವೆ.

ಈ ಪುಸ್ತಕವನ್ನು ರಚಿಸಿದ ಲೇಖಕರಿಗೆ ಹಾಗೂ ಪುಸ್ತಕವನ್ನು ಅಂದವಾಗಿ ಮುದ್ರಿಸಿಕೊಟ್ಟ ಸರ್ಕಾರಿ ಮುದ್ರಣಾಲಯದ ನಿರ್ದೇಶಕರಿಗೆ ಹಾಗೂ ಉಪ ಸಮಿತಿಯ ಅಧ್ಯಕ್ಷರಿಗೆ ಹಾಗೂ ಸದಸ್ಯರಿಗೆ ಧನ್ಯವಾದಗಳನ್ನು ಅರ್ಪಿಸುತ್ತೇವೆ.

ರಾಜ್ಯದ ಪ್ರತಿಭಾವಂತ ಸಂಸದೀಯ ಪಟುಗಳ ಬಗೆಗಿನ ಈ ಪುಸ್ತಕವು ಮಾನ್ಯ ಸದಸ್ಯರುಗಳಿಗೆ, ಸಂಶೋಧಕರಿಗೆ ಹಾಗೂ ಸಾಮಾನ್ಯ ಓದುಗರಿಗೆ ಸಂಸದೀಯ ವಿಷಯಗಳಲ್ಲಿ ಹೆಚ್ಚಿನ ಅನುಭವ ನೀಡುತ್ತದೆ ಮತ್ತು ಉಪಯುಕ್ತವಾಗುತ್ತದೆಂದು ಭಾವಿಸುತ್ತೇವೆ.

**ವೀರಣ್ಣ ಮತ್ತಿಕಟ್ಟಿ**
ಸಭಾಪತಿ
ಕರ್ನಾಟಕ ವಿಧಾನ ಪರಿಷತ್ತು

**ಜಗದೀಶ್ ಶೆಟ್ಟರ್**
ಸಭಾಧ್ಯಕ್ಷರು
ಕರ್ನಾಟಕ ವಿಧಾನ ಸಭೆ

# ಲೇಖಕರ ಮಾತು

ಕರ್ನಾಟಕ ವಿಧಾನ ಮಂಡಲದ ಗ್ರಂಥಾಲಯದ ಸಮಿತಿ ಪ್ರತಿಭಾವಂತ ಸಂಸದೀಯ ಪಟುಗಳ ಪುಸ್ತಕ ಮಾಲಿಕೆಗಾಗಿ ಹಿರಿಯ ರಾಜಕೀಯ ಮುತ್ಸದ್ದಿ ಶ್ರೀ ಎಸ್.ವೈ. ಪಾಟೀಲ ಅವರನ್ನು ಕುರಿತು ಪುಸ್ತಕ ಬರೆಸಲು ತೀರ್ಮಾನ ಕೈಗೊಂಡು, ಆ ಕೆಲಸವನ್ನು ನನಗೆ ವಹಿಸಿದ್ದು ನಿಜಕ್ಕೂ ಅಭಿಮಾನ ಹಾಗೂ ಸಂತೋಷದ ವಿಷಯ.

ಶ್ರೀ ಎಸ್.ವೈ. ಪಾಟೀಲರವಂತಹ ಪ್ರಾಮಾಣಿಕ ಮುತ್ಸದ್ದಿಯ ಕುರಿತು ಯೋಚಿಸುವುದು ಹಾಗೂ ಬರೆಯುವುದು ಸುಲಭದ ಮಾತಲ್ಲ. ಅವರು ನನಗೆ ವೈಯಕ್ತಿಕವಾಗಿ ಪರಿಚಿತರು. 1977 ರಲ್ಲಿ ನಾನು ಅವರನ್ನು ಕಂಡದ್ದುಂಟು. ವಿಜಾಪೂರದ ಪ್ರಖ್ಯಾತ ಕೇಸರಿ ಶ್ರೀ ಮಲ್ಲಿಕಾರ್ಜುನ ಮಹಾಸ್ವಾಮಿಗಳ ಪ್ರವಚನ ಸಂದರ್ಭದಲ್ಲಿ ಅವರು ನನಗೆ ಪರಿಚಯವಾದರು. ಸರಳ ವ್ಯಕ್ತಿತ್ವದ ಪಡಗಾನೂರು ಶಂಕರಗೌಡರು ನನಗೆ ಆತ್ಮೀಯರು. ನಿರ್ಮಲವಾದ ಅವರು ಮಾತು ವಿಶೇಷ ಆಕರ್ಷಕವಾಗಿದ್ದವು.

ಸಂಸದೀಯ ಪಟು ಪುಸ್ತಕ ಮಾಲಿಕೆಯಲ್ಲಿ ಈ ಪುಸ್ತಕ ರಚಿಸುವ ಹೊಣೆ ಹೊರಿಸಿದ ವಿಧಾನ ಪರಿಷತ್ತಿನ ಗೌರವಾನ್ವಿತ ಸಭಾಪತಿಗಳಿಗೆ ಮೊದಲ ಕೃತಜ್ಞತೆ ಸಲ್ಲಿಸಬೇಕು. ಹಿಂದಿನ ಉಪಸಮಿತಿಯ ಅಧ್ಯಕ್ಷರಾದ ಮಾನ್ಯ ಶ್ರೀ ವಿಶ್ವನಾಥ ಪಾಟೀಲ ಹೆಬ್ಬಾಳ ಅವರಿಗೂ ಮಾನ್ಯ ಈಗಿನ ಶ್ರೀ ರಘುಪತಿ ಭಟ್ ಅವರಿಗೂ ಹಿರಿಯರಾದ ಕವಿ ಡಾ. ಚಂದ್ರಶೇಖರ ಕಂಬಾರ, ಯಾದಗಿರಿಯ ಶಾಸಕರಾದ ಡಾ. ವೀರಬಸವರೆಡ್ಡಿ ಮುದ್ನಾಳರಿಗೆ ಮತ್ತಿತರ ಸಮಿತಿಯ ಎಲ್ಲ ಸನ್ಮಾನ್ಯ ಸದಸ್ಯರಿಗೂ ನಾನು ಋಣಿಯಾಗಿದ್ದೇನೆ.

ಈ ಪುಸ್ತಕ ರಚನೆಗೆ ಒತ್ತಾಸೆಯಾಗಿ ನಿಂತ ಎಲ್.ಎನ್. ಮುಕುಂದರಾಜ್, ವಿ॥ ದಯಾನಂದ, ಶ್ರೀ ಮಂಜುನಾಥ ಅವರನ್ನು ನೆನೆಯುವುದು ನನ್ನ ಕರ್ತವ್ಯ. ಶ್ರೀ ಎಸ್.ವೈ. ಪಾಟೀಲರವರ ಪುಸ್ತಕ ರಚನೆಗೆ ಬೇಕಾದ ಮಾಹಿತಿ ಹಾಗೂ ಭಾವಚಿತ್ರಗಳನ್ನು ನೀಡಿ ಸಹಕರಿಸಿದ ಡಾ. ಸಾಹೇಬಗೌಡ ಎಸ್. ಪಾಟೀಲ, ಪಡಗಾನೂರರವನ್ನು ತುಂಬು ಹೃದಯದಿಂದ ಸ್ಮರಿಸುತ್ತೇನೆ. ಶ್ರೀ ಎಸ್.ಎ. ಬಿರಾದಾರ ನಿವೃತ್ತ ಇಂಜಿನಿಯರ್ ಪಡಗಾನೂರ ಅವರು ಈ ಕೆಲಸದಲ್ಲಿ ನನಗೆ ಸಹಾಯಕರಾಗಿ ನೀಡಿದ ಮಾಹಿತಿಗಳನ್ನು ಮರೆಯುವಂತಿಲ್ಲ. ಕ್ಷೇತ್ರಕಾರ್ಯಕ್ಕಾಗಿ ನಾನು ಪಡಗಾನೂರಿಗೆ ಹೋದಾಗ ತಮ್ಮ ಅನುಭವಗಳನ್ನು ಹಂಚಿಕೊಂಡ ಪಡಗಾನೂರಿನ ಹಿರಿಯರನ್ನು ನಾನು ಈ ಸಂದರ್ಭದಲ್ಲಿ ಸ್ಮರಿಸಬೇಕು. ಶಂಕರಗೌಡರ ಕುರಿತು ಅವರ ಅಭಿಮಾನಿಗಳಿಗೆ, ತಮ್ಮ ಅನಿಸಿಕೆಗಳ ಕುರಿತು ಬರೆದು ತಿಳಿಸಬೇಕೆಂದು ಕೇಳಿಕೊಂಡಾಗ ಬರೆದುಕೊಟ್ಟ ಎಲ್ಲ ಮಹನೀಯರಿಗೆ ನನ್ನ ನಮನಗಳು.

ಕಾಲಬದ್ಧ ಮಿತಿಯಲ್ಲಿಯೇ ಪುಸ್ತಕ ರಚಿಸುವ ಸಂದರ್ಭದಲ್ಲಿ, ಎಲ್ಲಂದದಲ್ಲಿ ಸಹಕರಿಸಿದ ಗುಲಬರ್ಗಾ ವಿಶ್ವವಿದ್ಯಾಲಯದ ಕುಲಪತಿಗಳಾದ ಪ್ರೊ. ಬಿ.ಜಿ. ಮೂಲಿಮನಿ ಹಾಗೂ ಕುಲಸಚಿವರಾದ ಶ್ರೀ ಎಸ್. ರಾಜಣ್ಣ ಅವರನ್ನು ನೆನೆಯಲೇಬೇಕು. ಉಪಕುಲಸಚಿವರಾದ ಎಸ್.ಟಿ. ರಾಠೋಡ, ಶ್ರೀ ಸಿದ್ಧಣ್ಣ ಆಲಗೂರ, ಶ್ರೀ ಎಚ್.ಟಿ. ಸಂಗಣ್ಣ ಇವರು ನೀಡಿದ ಸಹಕಾರ ಸ್ಮರಣೀಯ.

ದಿನಾಂಕ:22.12.2006
ಗುಲ್ಬರ್ಗಾ

**ಡಾ. ಎಂ.ಎಸ್. ಪಾಟೀಲ**
ಕನ್ನಡ ಅಧ್ಯಯನ ಸಂಸ್ಥೆ
ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ

# ಪರಿವಿಡಿ

## ಎರಡನೇ ಅವಧಿಯ ಚರ್ಚೆಗಳು 1957-62



## ಮೂರನೇ ಅವಧಿಯ ಚರ್ಚೆಗಳು 1972-77

# ಶ್ರೀ ಶಂಕರಗೌಡ ಯಶವಂತಪ್ಪಗೌಡ ಪಾಟೀಲ (ಪಡಗಾನೂರ)

ಶ್ರೀ ಶಂಕರಗೌಡ ಯಶವಂತಪ್ಪಗೌಡ ಪಾಟೀಲರು ೧೯೧೧ ರಲ್ಲಿ ವಿಜಾಪೂರ ಜಿಲ್ಲೆಯ ಇಂಡಿ ತಾಲೂಕಿನ ಲಚ್ಯಾಣದಲ್ಲಿ ಜನಿಸಿದರು. ಇವರು ಮೂಲತಃ ಬಂಥನಾಳ ಸಮೀಪದ ಸುರಗಿಹಳ್ಳಿಯವರು. ತಂದೆ ಅಣ್ಣಪ್ಪಗೌಡರು ತಾಯಿ ತಾರಮ್ಮ ಗೌಡತಿ. ತದನಂತರ ಸಿಂದಗಿ ತಾಲೂಕಿನ ಪಡಗಾನೂರಿನ ಶ್ರೀ ಯಶವಂತಪ್ಪಗೌಡರಿಗೆ ಮಕ್ಕಳಿರಲಿಲ್ಲ. ಶ್ರೀ ಶಂಕರಗೌಡರು ಅವರಿಗೆ ದತ್ತು ಪುತ್ರರಾಗಿ ಬರುವುದರ ಮೂಲಕ, ಪಡಗಾನೂರಿನ ಯಶವಂತಪ್ಪಗೌಡರ ಮಗ ಶಂಕರಗೌಡರೆಂದೇ ಪ್ರಸಿದ್ಧರಾದರು.

ಇಂಡಿ ತಾಲೂಕಿನ ಲಚ್ಯಾಣ ಅನೇಕ ಮಹಿಮಾ ಪುರುಷರನ್ನು ರಾಜ್ಯಕ್ಕೆ ನೀಡಿದ ಪವಿತ್ರ ಸ್ಥಳ ಅಂತಹ ಸ್ಥಳದಲ್ಲಿ ಹುಟ್ಟಿದ ಶಂಕರಗೌಡರು ವಿಜಾಪೂರ ಜಿಲ್ಲೆಯ ರಾಜಕೀಯದಲ್ಲಿ ಕರ್ನಾಟಕ ರಾಜ್ಯದ ರಾಜಕೀಯದಲ್ಲಿ ತಾವಿರುವಷ್ಟು ಕಾಲ ಜನಪ್ರಿಯ ಶಾಸಕರಾಗಿ ಬದುಕಿದರು.

ದೇವರ ಹಿಪ್ಪರಗಿಯ ಸಮೀಪದ ಬಿದರಗಿಯಲ್ಲಿ ೧ ನೇಯ ವರ್ಗದಿಂದ ೪ ನೇಯ ವರ್ಗದವರೆಗೆ, ೪ ನೇಯ ವರ್ಗದಿಂದ ೭ ನೇಯ ವರ್ಗದವರೆಗೆ ಮನಗೂಳಿದ ಮಹಾಂತೇಶ್ವರ (ಬೋರ್ಡಿಂಗ್) ಪ್ರಸಾದ ನಿಲಯದಲ್ಲಿದ್ದುಕೊಂಡು ಅಜನ್ಮ ಬ್ರಹ್ಮಚಾರಿಗಳಾದ, ನಿಷ್ಠಾವಂತ ಹಾಗೂ ಪ್ರಾಮಾಣಿಕರಾದ ಮಠ ಮಾಸ್ತರರ ಅಚ್ಚು ಮೆಚ್ಚಿನ ಶಿಷ್ಯರಾಗಿ, ಅಲ್ಲಿಯೇ ಪ್ರಾಥಮಿಕ ಶಿಕ್ಷಣ ಮುಗಿಸಿದರು. ಶಂಕರಗೌಡರು ಭಾಷಾ ಜ್ಞಾನವನ್ನು ಮಠ ಮಾಸ್ತರರಿಂದಲೇ ಕಲಿತದ್ದು ಛಂದಸ್ಸು, ಭಾಷೆಯ ಬಳಕೆ, ತಪ್ಪಿಲ್ಲದಂತೆಯೇ ಗಳಿಸಿಕೊಂಡಿದ್ದು ಬುದ್ಧಿಯನ್ನೇ. ಏಕೆಂದರೆ ಶಂಕರಗೌಡರು ಪ್ರಬುದ್ಧರಾದಾಗ ಅವರ ಮಾತೆಂದರೆ ಜನ ಸಹಜವಾಗಿಯೇ ಜಮಾಯಿಸುತ್ತಿದ್ದರು. ಅಂತಹ ಮಾತುಗಾರರು. ಅದನ್ನೊಂದು ಕಲೆಯನ್ನಾಗಿ ಗೌಡರಲ್ಲಿ ತುಂಬಿದವರು ಮಠ ಮಾಸ್ತರರು. ತದನಂತರ ಲಚ್ಯಾಣದಲ್ಲಿ ೭ ನೇಯ ವರ್ಗದವರೆಗೆ ಓದಿದರು. ಅಂದಿನ ಪ್ರತಿಷ್ಠಿತ ಮುಲ್ಕಿ ಪರೀಕ್ಷೆಯನ್ನು ಪಾಸು ಮಾಡಿದರು.

ಅತ್ಯಂತ ಚುರುಕು ಬುದ್ಧಿಯವರಾದ ಶಂಕರಗೌಡರದ್ದು ನಿಂತಲ್ಲಿ ನಿಲ್ಲದ ಪಾದರಸದಂತಹ ವ್ಯಕ್ತಿತ್ವ. ಒಂದು ಕಡೆಗೆ ಕುಳಿತು ಬದುಕಿದವರೇ ಅಲ್ಲ. ಅತ್ಯಂತ ಉಡಾಳರೆಂದೇ ಪ್ರಸಿದ್ಧರು. ಕುದುರೆ ಸವಾರಿಯಂತೂ ಅವರಿಗೆ ಅತ್ಯಂತ ಪ್ರೀತಿಯ ಆಸಕ್ತಿ. ಇಂತಹ ಕ್ರಿಯಾಶೀಲ ಚೇತನ ಸ್ವಾತಂತ್ರ ಹೋರಾಟದ ವೀರಗಾಥೆಯಲ್ಲಿ ತಮ್ಮನ್ನು ತಾವು ಸಕ್ರಿಯವಾಗಿ ತೊಡಗಿಸಿಕೊಂಡರು. ಆಗ ವಿಜಾಪೂರ ಜಿಲ್ಲೆಯ ನಾಗಠಾಣ ಹಾಗೂ ಚಿಕ್ಕರೂಗಿಗಳು ಸ್ವಾತಂತ್ರ ಹೋರಾಟದ ಕೇಂದ್ರಗಳಾಗಿದ್ದವು. ಅಲ್ಲಿ ಸೇರಿಕೊಂಡ ಇವರು ಎರಡು ಸಲ ಜೈಲುವಾಸವನ್ನು ಅನುಭವಿಸಿದರು. ಅಲ್ಲಿ ನೀಡುವ ಪಠಗಿ ಶಿಕ್ಷೆ ಎಂದರೆ ನಡುಕ ಹುಟ್ಟಿಸುವಂತಹದು. ಪಠಗಿ ಶಿಕ್ಷೆಯೆಂದರೆ ಎರಡೂ ಕಾಲನ್ನು ಕಟ್ಟಿ ಮೊಣಕಾಲಿನ ಕೆಳಗಿನ ಭಾಗದ ಮೀನ ಖಂಡಗಳಿಗೆ ಹೊಡೆಯುವುದು. ಈ

ಶಿಕ್ಷೆಯನ್ನು ಶಂಕರಗೌಡರು ಬಹಳಷ್ಟು ಸಲ ಅನುಭವಿಸಿದ್ದಾರೆ. ಮಹಾರಾಷ್ಟ್ರದ ವಿಜಾಪೂರ ಜೈಲಿನಲ್ಲಿ ೬ ತಿಂಗಳು, ಮಹಾರಾಷ್ಟ್ರದ ವರಾಡದಲ್ಲಿ ೬ ತಿಂಗಳು ಸ್ವಾತಂತ್ರ್ಯ ಹೋರಾಟಗಾರರಾಗಿ, ಜೈಲು ವಾಸ ಅನುಭವಿಸಿದ ಶಂಕರಗೌಡರು ಅಂದು ಆದರ್ಶದ ಕನಸುಗಳುಳ್ಳ ಕನಸುಗಾರರು.

ಜನರ ಮಧ್ಯೆ ಇರುವುದು, ಅವರೊಂದಿಗೆ ಆತ್ಮೀಯವಾಗಿ ಬದುಕುವುದು ಶಂಕರಗೌಡರಿಗೆ ಒಂದು ಆಸಕ್ತಿಯ ವಿಷಯವೇ ಆಗಿತ್ತು. ಅವರ ಪಾಲಿಗೆ ಮನೆ, ಅದು ಸಮ್ಮನೆ ಹೊರಗಿನ ಪ್ರಪಂಚವೇ ಅವರಿಗೆ ಮನೆಯಾಗಿತ್ತು. ಆ ಸಂದರ್ಭದಲ್ಲಿ ಅವರಿಗೆ ಮುಂಬಯಿ ಸರಕಾರದ ಶಾಸಕರಾಗಿ ಸ್ಪರ್ಧಿಸುವ ಸದವಕಾಶ ದೊರೆಯಿತು. ೧೯೫೨ ರಿಂದ ೧೯೫೬ ರ ವರೆಗೆ ಅವರು ಶಾಸಕರಾಗಿ ಕೆಲಸ ನಿರ್ವಹಿಸಿದರು. ಸಿಂದಗಿ ತಾಲೂಕಿನ ಪ್ರತಿ ಗ್ರಾಮಗಳ ಹಾಗೂ ಗ್ರಾಮಸ್ಥರು ಅವರಿಗೆ ಚಿರಪರಿಚಿತ. ಪ್ರತಿಯೊಬ್ಬರ ಮನೆ ಮನೆಗೆ ಭೇಟ್ಟಿಕೊಟ್ಟು ಅವರ ಕಷ್ಟ ಸುಖಗಳಲ್ಲಿ ಸ್ಪಂದಿಸುತ್ತಿದ್ದರು. ಆಗಲೇ ಇವರು, ಎಲ್ಲರ ಮನೆಯವರಾಗಿ ಬೆಳೆದರು. ಈ ಸಂದರ್ಭದಲ್ಲಿಯೇ ಅವರು ಮರಾಠಿ ಹಾಗೂ ಹಿಂದಿಯನ್ನು ತಮ್ಮ ಅಂಗೈನೆಲ್ಲಿಕಾಯಿ ಮಾಡಿಕೊಂಡಿದ್ದು, ಮರಾಠಿಯಂತೂ ಅವರಿಗೆ ಕರತಲಾಮಲಕವಾಗಿತ್ತು. ಮರಾಠಿಯಲ್ಲಿ ಪ್ರವಚನ ಮಾಡಿದರೆ ಎಂತಹವರೂ ತಲೆದೂಗುತ್ತಿದ್ದರು, ನಿಂತು ಕೇಳುತ್ತಿದ್ದರು.

ಅತ್ಯಂತ ಮಹತ್ವಕಾಂಕ್ಷೆಯ ವ್ಯಕ್ತಿಯಾದ ಇವರು ಎಸ್.ಎಸ್.ಎಲ್.ಸಿ ಪಾಸು ಮಾಡದೇ ಬಾಂಬೆ ಸರಕಾರದ ಶಾಸಕರಾಗಿ ಆರಿಸಿ ಬಂದರು. ಆದರೆ ಇವರಿಗೆ ಒಂದು ಸಂಶಯ ವೆಂದರೆ ಎಂದಾದರೂ ಸರಕಾರ ಪದವಿ ಮಾಡಿಕೊಂಡವರು ಮಾತ್ರ ಶಾಸಕರಾಗಿರಬೇಕೆಂಬ ಕಾನೂನು ಮಾಡಿದರೆ ಹೇಗೆ ಎಂದು ತಮ್ಮ ಮಗನೊಂದಿಗೇನೆ ೧೯೬೮ ರಲ್ಲಿ ಎಸ್.ಎಸ್.ಎಲ್.ಸಿ. ಪರೀಕ್ಷೆಗೆ ಕೂತು, ಇಬ್ಬರೂ ಏಕಕಾಲಕ್ಕೆ ಪಾಸಾದದ್ದು ವಿಜಾಪೂರ ಜಿಲ್ಲೆಯಲ್ಲಿಯೇ ನಗುವ ರೀತಿಯದಾಗಿತ್ತು. ಅಂದಿನ ಪ್ರಮುಖ ಪತ್ರಿಕೆಗಳಲ್ಲಿ ಇದೊಂದು ದೊಡ್ಡ ಸುದ್ದಿಯಾಗಿ ಜನ ಮಾತನಾಡಿಕೊಂಡು ನಗುವಂತಾಗಿತ್ತು. ಅದೂ ಅಲ್ಲದೆ ಎಸ್.ಎಸ್.ಎಲ್.ಸಿ. ಅದು ಒಂದು ಡಿಗ್ರಿಯೇ? ಅಲ್ಲವೇ ಅಲ್ಲ! ಬಿ.ಎ. ಎಂದರೆ ಅದೊಂದು ಡಿಗ್ರಿ ಎಂಬ ಕಲ್ಪನೆ ಅವರಲ್ಲಿ. ಹೀಗಾಗಿ ತಾವು ಸಿಂದಗಿ ತಾಲೂಕಿನಿಂದ ಕರ್ನಾಟಕದ ಎರಡನೇಯ ವಿಧಾನ ಸಭೆಯ ಶಾಸಕರಾಗಿ ಚುನಾಯಿತರಾದ ನಂತರವೂ ಅವರಿಗ ಬಿ.ಎ. ಡಿಗ್ರಿ ಮಾಡಿಕೊಳ್ಳಬೇಕೆಂಬ ಆಶಯ ಮೂಡಿತು. ವಿಜಾಪೂರದ ಅಂದಿನ ಪ್ರತಿಷ್ಠಿತ ವಿಜಯ ಕಾಲೇಜಿನಲ್ಲಿ ಪ್ರವೇಶ ಪಡೆದುಕೊಂಡರು. ಪ್ರೊ. ಗಣಾಚಾರಿ, ಪ್ರೊ. ಬಿ. ಟಿ. ಸಾಸನೂರ, ಪ್ರೊ. ಎಚ್. ಟಿ. ಸಾಸನೂರ ಹಾಗೂ ಪ್ರೊ. ರಾಮಾಚಾರಿಯವರು ಇವರಿಗೆ ಗುರುಗಳು. ಅವ್ಯಾಹತ ತಿರುಗಾಟದ ಮಧ್ಯದಲ್ಲೂ ಬಿಡುವು ಮಾಡಿಕೊಂಡು ರಾತ್ರಿ ತಮ್ಮ ಗುರುಗಳಲ್ಲಿ ಹೋಗಿ ಪಾಠ ಹೇಳಿಸಿಕೊಳ್ಳುತ್ತಿದ್ದರು. ತಾನೊಬ್ಬ ಶಾಸಕನಾಗಿ 'ಶಾಸನ ರೂಪಿಸುವವನೇ, ಶಾಸನ ಮುರಿದರೆ ಹೇಗೆ' ಎಂಬ ತಳಮಳ ಇವರಲ್ಲಿತ್ತು. ಸಮಾಜ ನಮ್ಮನ್ನು ನೋಡುತ್ತಿರುತ್ತದೆ. ಜನ ಪ್ರತಿನಿಧಿಗಳಾದ ನಾವು ಸಮಾಜ ಮೆಚ್ಚುವಂತೆ ಬದುಕಬೇಕೆಂಬ ಆಶಯವಿತ್ತು. ಈ ಮಾತಿಗೆ

ಸಾಕ್ಷಿಯನ್ನುವಂತೆ ಒಂದು ಘಟನೆಯನ್ನು ಮಾತ್ರ ಇಲ್ಲಿ ಉದಾಹರಿಸಬಹುದು. ಇವರು ಶಾಸಕರಾಗಿದ್ದು, ಬಿ.ಎ. ಓದುತ್ತಿರುವಾಗ, ರಾತ್ರಿ ಪ್ರೊ. ರಾಮಾಚಾರಿಯವರಲ್ಲಿ ಪಾಠಕ್ಕೆ ಸೈಕಲ್ಲನ್ನು ಹತ್ತಿ ಹೋಗುತ್ತಿದ್ದರು. ದೀಪವಿಲ್ಲದೆ ಸೈಕಲ್ಲು ಹತ್ತಬಾರದಲ್ಲಾ, ಹತ್ತಿದರೆ ಪೋಲಿಸರು ಹಿಡಿಯುತ್ತಾರೆ. ಹೀಗಾಗಿ ಶಂಕರಗೌಡರು ಸೈಕಲ್ಲಿಗೆ ಒಂದು ಕಂದೀಲು ಕಟ್ಟಿಕೊಂಡು ಹೋಗುತ್ತಿದ್ದರು. ಒಬ್ಬ ಶಾಸಕ, ಪ್ರಜಾ ಪ್ರತಿನಿಧಿ ಒಬ್ಬ ಪೋಲಿಸನಿಗೆ ಹೆದರುವುದೇ? ಇಲ್ಲಾ! ಕಾನೂನಿಗೆ ಹೆದರುತ್ತಿದ್ದರು. 'ಯಾರು ಕಾನೂನನ್ನು ಗೌರವಿಸುವರೊ ಅವರನ್ನು ಕಾನೂನು ಗೌರವಿಸುತ್ತದೆ' ಎಂಬ ತಿಳುವಳಿಕೆ ಶಂಕರಗೌಡರಲ್ಲಿತ್ತು. ಹೀಗಾಗಿ ಶಂಕರಗೌಡರು ತಮ್ಮ ಬದುಕಿನುದ್ದಕ್ಕೂ ತಪ್ಪಿ ನಡೆಯಲಿಲ್ಲ, ಹಾದಿ ಬಿಟ್ಟು ಬದುಕಲಿಲ್ಲ. ಕಲಿಯುವದರಲ್ಲಿ ಅವರಿಗೆ ಎಷ್ಟು ಆಸಕ್ತಿಯಿತ್ತೆಂದರೆ, ಪ್ರೊ. ರಾಮಾಚಾರಿಯವರಲ್ಲಿ ಪದೆ ಪದೆ ರಾತ್ರಿ ಪಾಠಕ್ಕೆ ಹೋಗುತ್ತಿರುವದರಿಂದ, ಪ್ರೊ. ರಾಮಾಚಾರಿಯವರೇ ಈ ಪಡಗಾನೂರ ಶಂಕರಗೌಡ ಎಂದಾದರೂ ಬಿ.ಎ. ಮುಗಿಸಿಯಾನು? ಎಂದು ಹೇಳುತ್ತಿದ್ದಾರಂತೆ ಹಿಡಿದದ್ದನ್ನು ಸಾಧಿಸುವ ಶಂಕರಗೌಡರು ಬಿ.ಎ. ಪದವಿಯನ್ನು ಪಡೆದುಕೊಂಡರು. ಅಷ್ಟಕ್ಕೂ ಇವರ ಓದಿನ ಹಸಿವು ತೀರಲಿಲ್ಲ. ಸೋಲಾಪೂರದಲ್ಲಿ ಎಲ್.ಎಲ್.ಬಿ ಅಧ್ಯಯನಕ್ಕೆ ಪ್ರವೇಶ ಪಡೆದರು. ಒಂದು ವರ್ಷ ಮಾತ್ರ ಓದಿ ಅದನ್ನು ಅಲ್ಲಿಗೆ ಕೈಬಿಟ್ಟರು. ಕಲಿಯುವ ಬಯಕೆ, ಇನ್ನೊಬ್ಬರಿಗೆ ಕಲಿಸುವ ಆಶಯ ಅವರಲ್ಲಿ ನಿರಂತರವಾಗಿತ್ತು.

ಬಸವಾಭಿಮಾನಿಯಾದ ಶಂಕರಗೌಡರು, ಮಠ ಹಾಗೂ ಮಠಾಧಿಪತಿಗಳೆಂದರೆ ಬಹಳ ಅಭಿಮಾನ. ವಚನ ಸಾಹಿತ್ಯ ಅಧ್ಯಯನ ಮಾಡಿಕೊಂಡ ಇವರಿಗೆ ಮಹಾರಾಷ್ಟ್ರದ ಭಕ್ತ ಪರಂಪರೆಯ ಪ್ರಭಾವ ವಿಶೇಷವಾಗಿತ್ತು. ಇದೆಲ್ಲದಕ್ಕಿಂತ ಮಿಗಿಲಾಗಿ ಅವರು ಒಬ್ಬ ಒಳ್ಳೆಯ ಮಾತುಗಾರರು. ವಿಜಾಪೂರ ಜಿಲ್ಲೆಯ ಯಾವುದೇ ಭಾಗದಲ್ಲಿ ಆಧ್ಯಾತ್ಮಿಕ ಕಾರ್ಯ ಚಟುವಟಿಕೆ ನಡೆದರೆ ಅಲ್ಲಿ ಶಂಕರಗೌಡರು ಕರೆಯಲಿ, ಬಿಡಲಿ ಗೌಡರ ಹಾಜರಾತಿ ಇದ್ದೇ ಇರುತ್ತಿತ್ತು. ಇಡೀ ವಿಜಾಪೂರ ಜಿಲ್ಲೆಯಲ್ಲಿಯೇ ಅಂದು ಅವರೊಬ್ಬ ಅದ್ಭುತ ಸಂಘಟನಾ ಚತುರರು.

"ಮಧ್ಯ ರಾತ್ರಿ ಎದ್ದು ಹೋಗುವವರೆಲ್ಲ
ಗೌತಮಬುದ್ಧರಾಗುವದಿಲ್ಲ
ಖಾವಿ ತೊಟ್ಟವರೆಲ್ಲ ಬಂಥನಾಳ
ಸಂಗನಬಸನ ಶಿವಯೋಗಿಗಳಾಗುವುದಿಲ್ಲ
ವಚನ ಪ್ರವಚನ ಹೇಳುವರೆಲ್ಲ
ಸಿದ್ಧೇಶ್ವರ ಸ್ವಾಮಿಗಳಾವುದಿಲ್ಲ
ಸಭೆ ಸಮ್ಮೇಳನ ಮಾಡುವವರೆಲ್ಲ
ಪಡಗಾನೂರ ಶಂಕರಗೌಡರಾಗುವುದಿಲ್ಲ."

ಎಂಬ ಜನೋಕ್ತಿ ಜನಜನಿತವಾಗಿತ್ತು. ಒಂದು ಸಮಾರಂಭ ಹಮ್ಮಿಕೊಂಡರೆ ಜನರನ್ನು ಕೂಡಿಸಬೇಕಲ್ಲ! ದುಡಿಯುವದನ್ನೇ ನಂಬಿಕೊಂಡ ಜನರಿಗೆ ಸಭೆ ಸಮಾರಂಭಗಳಿಗೆ ಹೋದರೆ, ಹೊಟ್ಟೆಗೆ ಹಿಟ್ಟು ಬೇಕಲ್ಲ? ಆದರೆ ಪಡಗಾನೂರ ಶಂಕರಗೌಡರು ದುಡಿಯುವ ಜನರಿಗೆ ಅಂದಿನ ಪಗಾರದ ಜೋಳ ಕೊಟ್ಟು ಈ ಜನರನ್ನು ಕರೆಸುತ್ತಿದ್ದರು. ಸಮಾರಂಭಗಳು ಇಂತಹವೇ ಎಂಬುದರಿಲಿಲ್ಲ. ಅದು ರಾಜಕೀಯವಾಗಿರಬಹುದು, ಸಮಾಜಿಕವಾಗಿರಬಹುದು, ಧಾರ್ಮಿಕವಾಗಿರಬಹುದು ಅಲ್ಲಿ ಗೌಡರಿರಬೇಕು, ಮೈಕ ಅವರ ಕೈಯಲ್ಲಿರಬೇಕು ಅಂದರೆ ಅದು ಸಮಾರಂಭ. ಅಂದಿನ ಗ್ರಾಮೀಣ ಪರಿಸರದಲ್ಲಿ ಲಗ್ನಗಳೆಂದರೆ ಒಂದು ವಿಶೇಷ ಸಮಾರಂಭವಿದ್ದಂತೆ ತಮ್ಮ ಮನೆಯ ಲಗ್ನವಿರಲಿ, ಅನ್ಯರ ಮನೆಯ ಲಗ್ನವಿರಲಿ ಗೌಡರ ಉಸ್ತುವಾರಿಯಲ್ಲಿ ಆ ಲಗ್ನವೇನಾದರೂ ನಡೆಯುತ್ತಿದ್ದರೆ ಊರಿನ ಎಲ್ಲ ಮನೆಗಳಿಗೂ ಹೊಸ್ತಲ ಭಿನ್ನಾ. ಅಂದಿನ ಲಗ್ನಗಳು ಮೂರು ದಿನಗಳವರೆಗೆ ನಡೆಯುತ್ತಿದ್ದವು. ಅಂದರೆ ಮೂರು ದಿನ ಆ ಊರಿನವರು ತಮ್ಮ ಮನೆಯಲ್ಲಿ ಊಟ ಸಿದ್ಧಪಡಿಸುವಂತಿಲ್ಲ. ಲಗ್ನದ ಮನೆಯಲ್ಲಿಯೇ ಊಟ ಮಾಡಬೇಕು. ಇನ್ನೊಬ್ಬರಿಗೆ ಒಳ್ಳೆಯದನ್ನು ಮಾಡಬೇಕೆನ್ನುವ ಗೌಡರ ಮನಸ್ಸು, ಮಗುವಿನಂತಹ ಮುಗ್ಧ ಮನಸ್ಸು. ತಾನೊಬ್ಬ ಶಾಸಕ ಈ ಕೆಲಸ ಮಾಡಬೇಕು ಮಾಡಬಾರದು ಎನ್ನುವರಲ್ಲ, ಎಲ್ಲ ಕೆಲಸಗಳನ್ನು ಮಾಡುವವರೆ. ಒಬ್ಬ ಶಾಸಕ ಎಂದರೆ ಆ ಮತಕ್ಷೇತ್ರದ ಹಿರಿಯ ಮಗನು. ಅವನು ಜವಾಬ್ದಾರಿಯಿಂದ ಎಲ್ಲರ ಎಲ್ಲ ಕೆಲಸಗಳನ್ನು ಮಾಡಬೇಕೆಂದು ಬದುಕಿದ ರೀತಿ ಇವತ್ತಿಗೂ ನೆನೆಯಬೇಕು. ತಮ್ಮ ಮತಕ್ಷೇತ್ರದ ಜನಸಾಮಾನ್ಯರ ಯಾವುದೇ ಕೆಲಸವಿರಲಿ ಅದನ್ನು ಪೂರೈಸಿ, ಅದನ್ನು ಅವರಿಗೆ ತಿಳಿಸುತ್ತಿದ್ದರು. ಅವರು ಎಷ್ಟೋ ಜನ ಕಲಿತವರಿಗೆ ನೌಕರಿ ಕೊಡಿಸುವದರ ಮೂಲಕ, ಅವರ ಬದುಕಿಗೊಂದು ಆಸರೆಯನ್ನು ಕಲ್ಪಿಸಿಕೊಡುತ್ತಿದ್ದರು. ಇಂದು ಎಷ್ಟೋ ಜನ ಗೌಡರನ್ನು ಸ್ಮರಿಸುವದನ್ನು ನೋಡಿದರೆ, ನಮಗೆ ಆಶ್ಚರ್ಯವಾಗುವಷ್ಟರ ಮಟ್ಟಿಗೆ ಗೌಡರ ಬದುಕು ರೂಪಿತವಾಗಿತ್ತು. ತಮ್ಮ ಕೆಲಸಗಳಿಗಿಂತ, ಇನ್ನೊಬ್ಬರ ಕೆಲಸ ಮಾಡುವದಲ್ಲಿಯೇ ಅವರಿಗೆ ಆನಂದವಿತ್ತು, ಧನ್ಯತೆಯಿತ್ತು.

ಜನಪದ ಗಾಯಕ ಹುಕ್ಕೇರಿ ಬಾಳಪ್ಪನವರು ಹಾಗೂ ಪಡಗಾನೂರ ಶಂಕರಗೌಡರು ಆತ್ಮೀಯರು. ಯಾವುದಾದರೂ ಸಭೆ ಸಮಾರಂಭದಲ್ಲಿ ಹಾಡಬೇಕೆಂದರೆ ಬಾಳಪ್ಪನವರು ಅಲ್ಲಿರಬೇಕು. ಬಾಳಪ್ಪನವರು ಬಂದೇ ಬಂದಿರುತ್ತಾರೆ ಎನ್ನುವುದು ಗೌಡರ ಗಟ್ಟಿ ನಂಬಿಕೆ. ಒಮ್ಮೆಲಿ ವೇದಿಕೆಯಿಂದ ಹಾಡಿಗಾಗಿ ಶಂಕರಗೌಡರಿಂದ ಬಾಳಪ್ಪನವರಿಗೆ ಕರೆ, ಒಂದು ವೇಳೆ ಬೇಗನೆ ಬಾಳಪ್ಪನವರು ವೇದಿಕೆಗೆ ಬರದಿದ್ದರೆ, ಗೌಡರು, ಈ ಸಭಾದಾಗ ಬಾಳಪ್ಪ ಇಲ್ಲಂದರ, ಅಂವ ಸತ್ತಿರಬೇಕು ಎಂದು ಹೇಳುವುವರು. ಅಷ್ಟರಲ್ಲಿ ಬಾಳಪ್ಪನವರು ನಾ ಅದೀನಿ, ಎಂದು ಎದ್ದು ಹೋಗುವವರು ಇಂತಹ ಹೃದಯಸ್ಪರ್ಶಿ ಗಳೆತನ ಅವರದು ಹುಕ್ಕೇರಿ ಬಾಳಪ್ಪನವರನ್ನು ಸೋಲಾಪುರ, ಬಾಂಬೆ, ದಿಲ್ಲಿಗಳವರೆಗೂ ಕರೆದುಕೊಂಡು ಹೋಗುವುದು ಅಲ್ಲಿ ಅವರಿಗೆ ಪ್ರಶಸ್ತಿಗಳನ್ನು ಕೊಡಿಸುವದೆಂದರೆ ಶಂಕರಗೌಡರಿಗೆ ಎಲ್ಲಿಲ್ಲದ ಆನಂದ. ಮೂರಾರ್ಜಿ ದೇಸಾಯಿ, ಜವಹರ ಲಾಲ ನೆಹರೂ ಇವರಿಂದ ಹುಕ್ಕೇರಿ ಬಾಳಪ್ಪನವರಿಗೆ ಪ್ರಶಸ್ತಿ ಕೊಡಿಸಿದ್ದಾರೆ. ಇನ್ನೊಬ್ಬರ ಆನಂದವೇ ತಮ್ಮ ಆನಂದವೆಂದು ಬದುಕಿದ ಜನಪ್ರಿಯ ಶಾಸಕರವರು.

ಇವತ್ತು ನಾವು ನೋಡುವ ಬಸವನ ಬಾಗೇವಾಡಿಯ ಬಸವೇಶ್ವರ ದೇವಾಲಯ ಅದು ಪಡಗಾನೂರ ಶಂಕರಗೌಡರ ಪ್ರಯತ್ನದ ಫಲ. ಅಂದು ಅಲ್ಲಿದ್ದ ತಹಶಿಲ್ದಾರರ ಹಾಗೂ ಶಂಕರಗೌಡರ ಪ್ರಯತ್ನದ ಸ್ಮಾರಕ. ಗುಡಿ ಪಟ್ಟೆ ಎತ್ತಿ ಆ ದೇವಾಲಯವನ್ನು ನಿರ್ಮಿಸಿದ್ದು ಒಂದು ಐತಿಹಾಸಿಕ ದಾಖಲೆ.

ಅಂದು ಶಾಸಕರವರಿಗೆ ೭೫ ರೂಪಾಯಿ ಮಾಸಿಕ ವೇತನ. ಅಷ್ಟರಲ್ಲಿಯೇ ಬದುಕನ್ನು ಸಾಗಿಸಬೇಕು. ಕೃಷಿ ಸಂಸ್ಕೃತಿಯ ಮನೆತನ ಅವರದು. ಆದರೂ ಒಬ್ಬರಿಂದ ಒಂದು ಪೈಸೆ ತಿಂದವರಲ್ಲ ಪ್ರಾಮಾಣಿಕ ಶಾಸಕರು. ಹಣವೇ ಅವರ ಬದುಕಾಗಿರಲಿಲ್ಲ, ಗುಣವೇ ಅವರ ಬದುಕಾಗಿತ್ತು. ಅಂತೆಯೇ ಅವರೊಬ್ಬ ಕಾಸಿಲ್ಲದ ಫಕೀರ. ಸೈಕಲ್ಲು ಅವರ ಪ್ರಿಯವಾದ ಅಂದಿನ ಶ್ರೀಮಂತ ವಾಹನ. ಎಲ್ಲಿಯೇ ಹೋಗಲಿ ಅವರ ಜೊತೆ ಸೈಕಲ್ಲಿರಬೇಕು.

ರಾಜ್ಯದ ಕಟ್ಟಕಡೆಯ ೨೨೪ ನೇಯ ಮತಕ್ಷೇತ್ರವೆಂದರೆ ಸಿಂದಗಿ. ಕಟ್ಟಕಡೆಯ ಶಾಸಕರಾಗಿ ಶಾಸನ ಸಭೆಯಲ್ಲಿ ಯಾವಾಗಲೂ ಮುಂದು. ಉತ್ತರ ಕರ್ನಾಟಕವೆಂದರೆ ಸಾಕು, ಅದರ ಅಭಿವೃದ್ಧಿಗಾಗಿ ಎದ್ದು ನಿಲ್ಲುವವರೆ. ಶಾಸನ ಸಭೆಯಲ್ಲಿ ಏನೇನೋ ಮಾಡಿದವರು ಬಹುಜನ ಶಾಸಕರಿರಬಹುದು ಆದರೆ 'ಹೊಯ್ಕೊಂಡವರು' ಯಾರೂ ಇರಲಿಕ್ಕಿಲ್ಲ! ಶಂಕರಗೌಡರು ಮೊಟ್ಟ ಮೊದಲು 'ಹೊಯ್ಕೊಂಡರು' ಆ ಘಟನೆ ಹೀಗಿದೆ. ಭಯಂಕರ ಬರಗಾಲದಿಂದ ವಿಜಾಪೂರ ಜಿಲ್ಲೆ ತತ್ತರಿಸಿದಾಗ, ಬರಗಾಲದ ಭೀಕರ ಸ್ವರೂಪ ಹಾಗೂ ಕೈಗೆತ್ತಿಗೊಳ್ಳಬೇಕಾದ ಪರಿಹಾರ ಕಾರ್ಯದ ಕುರಿತು ಕರಳು ಬಗೆದು ಶಂಕರಗೌಡರು ವಿಧಾನ ಸಭೆಯಲ್ಲಿ ಮಾತನಾಡುತ್ತಿರುವಾಗ, ತಮ್ಮ ಮಾತಿಗೆ ಒಂದು ಗಂಭೀರವಾದ ಪ್ರತಿಕ್ರಿಯೇ ಸಿಗದೇ ಹೋದಾಗ ಶಂಕರಗೌಡರು 'ಹೊಯ್ಕೊಳ್ಳುವುದರ' ಮೂಲಕ ಪ್ರತಿಭಟಿಸಿದ್ದು ಒಂದು ದಾಖಲೇಯೇ ಸರಿ. ಅದೂ ಅಲ್ಲದೆ ಅಂದಿನ ರಾಜಕೀಯ ನಾಯಕರಾದ ಶ್ರೀ ನಿಜಲಿಂಗಪ್ಪನವರನ್ನು ಎದುರು ಹಾಕಿಕೊಂಡು ಅಂದಿನ ಇಂಡಿ ಶಾಸಕ ಸುರಪುರ ಮಲ್ಲಪ್ಪನವರೊಂದಿಗೆ ಕೂಡಿ ಶ್ರೀಮಾನ ಬಿ.ಡಿ ಜತ್ತಿಯವರನ್ನು ಮುಖ್ಯಮಂತ್ರಿಗಳನ್ನಾಗಿ ಮಾಡಿದರು. ಯಾಕೆ ನಮ್ಮವರು ಮುಖ್ಯಮಂತ್ರಿಗಳಾಗಬಾರದು ಎನ್ನುವ ತುಡಿತ ಅವರಿಗೆ.

ಚುನಾವಣೆಗಳೆಂದರೆ ಗೌಡರು ಹಸಿದ ಹುಲಿಯಾಗುತ್ತಿದ್ದರು. ಚುನಾವಣೆಯೆಂದರೆ ಅವರಿಗೆ ಎಲ್ಲಿಲ್ಲದ ಪ್ರೀತಿ. ಒಮ್ಮೆ ಇಂದಿರಾಗಾಂಧಿಯವರು ಸಿಂದಗಿಯ ಮೇಲಿನಿಂದ ಹಾದು ಹೋಗುತ್ತಿರುವಾಗ, ಅವರನ್ನು ನಿಲ್ಲಿಸಿ ಹಾರ–ತುರಾಯಿ ಸಮರ್ಪಿಸಿ ಬೀಳ್ಕೊಡುವಾಗ, ನೋಡಿ ಶಂಕರಗೌಡರೆ, ನಿಮ್ಮ ಮತಕ್ಷೇತ್ರವನ್ನು ಮಹಿಳಾ ಮೀಸಲಾತಿ ಕ್ಷೇತ್ರವನ್ನಾಗಿಸುತ್ತೇನೆ ಎಂದು ಹೇಳಿ ಹೋದರು. ಮುಂದೆ ಆ ರೀತಿ ಮಾಡಿದರು. ಮುಂದಾಲೋಚನೆಯುಳ್ಳ ಗೌಡರು, ತಮ್ಮ ಪತ್ನಿಯವರ ಹೆಸರಿನಿಂದ ತಿಕೀಟು ತಂದರು. ಗೌಡರು ತಾವು ಆ ಪಕ್ಷದ ಡೆಮ್ಮಿ ಕ್ಯಾಂಡಿಡೇಟ್ ಎಂದು ನಾಮಪತ್ರ ಹಾಕಿದರು. ಕೊನೆಯಲ್ಲಿ ಡಾ. ನಾಡಕರ್ಣಿ ಎನ್ನುವ ವೈದ್ಯರ ಮೂಲಕ ತಮ್ಮ

ಪತ್ನಿ ಅನಾರೋಗ್ಯದ ಮೂಲಕ ಅನರ್ಹರೆಂದು ಪ್ರಮಾಣ ಪತ್ರ ಸಾದರ ಪಡಿಸಿ, ತಾವೇ ಅಧಿಕೃತ ಅಭ್ಯರ್ಥಿಯೆಂದು ವಿಜಯ ಸಾಧಿಸಿದರು (೧೯೫೭) ರ ಮಾತಿದು.

ಶಂಕರಗೌಡರ ಕೌಟುಂಬಿಕ ಜೀವನ ತೃಪ್ತಿದಾಯಕವಾಗಿತ್ತು. ಅವರ ಧರ್ಮಪತ್ನಿ, ಪಾರ್ವತಿಬಾಯಿ, ಮಾತಿಲ್ಲದೆ ದುಡಿದವರು. ಪತಿ ಶಾಸಕನಾಗಿರಲಿ, ಏನೇ ಆಗಿರಲಿ ಅವರು ಹೇಳಿದಂತೆ ಮಾಡುವುದು ಕೃಷಿ ಅವಲಂಭಿತ ದುಡಿತ. ಗೌಡರು ಹೇಳಿ ಕೇಳಿ ಮನೆಗೆ ಬರುವವರಲ್ಲ, ಹೇಳಿ ಕೇಳಿ ಹೋಗುವವರಲ್ಲ. ಅಂತಹ ಗೌಡರ ಪತ್ನಿಯಾಗಿ ಪಾರ್ವತಿಬಾಯಿವರು ಏನೂ ಅರಿಯದ ಮುಗ್ಧರು. ಈ ದಂಪತಿಗಳಿಗೆ ಭಾಗೀರತಿ ಮೊದಲ ಮಗಳು, ಸಾಹೇಬಗೌಡ ಎರಡನೆಯ ಮಗ, ಈರಮ್ಮ ಮೂರನೇಯ ಮಗಳು, ರುದ್ರಗೌಡ ನಾಲ್ಕನೆಯ ಮಗ, ಅಣ್ಣಪ್ಪಗೌಡ ಐದನೆಯವರು ತುಂಬು ಕುಟುಂಬದ ಒಡೆಯರು ಶಂಕರಗೌಡರು.

ಶಂಕರಗೌಡರು ರಾಜಕೀಯ ಬದುಕಿನಲ್ಲಿ ಸೋಲು ಗೆಲುವುಗಳನ್ನು ಸಮನಾಗಿ ಹಂಚಿಕೊಂಡಿದ್ದಾರೆ. ಮೂರು ಸಲ ಗೆದ್ದರೆ ಮೂರು ಸಲ ಸೋತಿದ್ದಾರೆ. ಒಟ್ಟು ಆರು ಚುನಾವಣೆಗಳನ್ನು ಎದುರಿಸಿದ ಇವರು ಜನಪರ ಕಾಳಜಿ ಉಳ್ಳವರಾಗಿದ್ದರು. ರಾಜಕೀಯವೆಂದರೆ ಜನಸೇವೆ ಎಂದು ತಿಳಿದುಕೊಂಡವರು ಹೀಗಾಗಿ ಸದಾ ಕಾಲ ಆದರ್ಶಗಳನ್ನು ಮುಂದಿಟ್ಟುಕೊಂಡು ಬದುಕಿದವರು. ಜನರನ್ನೇ ತಮ್ಮ ಆಸ್ತಿಯನ್ನಾಗಿಕೊಂಡು ತಮ್ಮ ಮನೆತನದ ಆಸ್ತಿಯನ್ನು ಕಳೆದುಕೊಂಡು ರಾಜಕಾರಣ ಮಾಡಿದವರು. ಜನ ಪ್ರತಿನಿಧಿಯಾಗಿ ಅವರು ಕೈಗೊಂಡ ಕೆಲಸಗಳು ಹಲವು ಹತ್ತೆಂಟು ೧೯೫೨ ರಲ್ಲಿ ಮುಂಬಯಿ ಅಸೆಂಬ್ಲಿಗೆ ಮೊದಲು ಆರಿಸಿ ಹೋಗಿ ಚರ್ಚಿಸಿದ ವಿಷಯಗಳು ಅನೇಕ ಅವರಿಗೆ ದೇಶ, ರಾಜ್ಯ, ವಿಜಾಪೂರ ಜಿಲ್ಲೆ ಅದರಲ್ಲೂ ಸಿಂದಗಿ ಹಾಗೂ ಇಂಡಿ ತಾಲೂಕುಗಳ ಮೇಲೆ ವಿಶೇಷ ಪ್ರೇಮ ಅವರಿಗೆ ತಮ್ಮ ಮತಕ್ಷೇತ್ರದ ಪ್ರತಿಯೊಂದು ಹಳ್ಳಿಗಳ ಪರಿಚಯವಿತ್ತು ಅದರೊಂದಿಗೆ ಆ ಹಳ್ಳಿಗಳ ಸಮಸ್ಯೆಗಳ ತಿಳುವಳಿಕೆಯೂ ಅವರಿಗಿತ್ತು. ಹೀಗಾಗಿ ಅಸೆಂಬ್ಲಿಯ ಚರ್ಚೆಗಳು ಪ್ರಾರಂಭವಾದಾಗ ತಮ್ಮ ಮತಕ್ಷೇತ್ರದ ಅಭಿವೃದ್ಧಿಗಾಗಿ ಅವರು ಮಾತನಾಡಿದ್ದು ಇವತ್ತಿಗೂ ಮಾದರಿ, ಮುಂಬಯಿ ಅಸೆಂಬ್ಲಿಯಲ್ಲಿ ಕನ್ನಡ ಹಾಗೂ ಮರಾಠಿ ಭಾಷೆಯ ಮೇಲಿನ ಪ್ರಭುತ್ವದಿಂದ ತಮ್ಮ ಚರ್ಚೆಗಳನ್ನು ಎಲ್ಲರೂ ಕಿವಿಗೊಟ್ಟು ಕೇಳುವಂತೆ ಮಾತಾಡುತ್ತಿದ್ದರು.

೧೯೫೭ ರಿಂದ ೧೯೬೨ ರ ವರೆಗೆ ಎರಡನೇ ಸಲ ಅವರು ಮೈಸೂರು ಅಸೆಂಬ್ಲಿಯ ವಿಧಾನಸಭಾ ಸದಸ್ಯರೆಂದು ಚುನಾಯಿತರಾದರು. ರಾಜಕೀಯದಲ್ಲಿ ಪಳಗಿದ ಶಂಕರಗೌಡರು ಯಾವ ಕೆಲಸಗಳನ್ನು ಹೇಗೆ ಮಾಡಿಸಿಕೊಳ್ಳಬೇಕೆಂಬ ತಿಳುವಳಿಕೆಯಿಂದ ಮುಂದುವರಿಯುತ್ತಿದ್ದರು. ಬಿಜಾಪುರ ಜಿಲ್ಲೆಯ ದಯನೀಯವಾದ ಬರಗಾಲ ಪರಿಸ್ಥಿತಿ ಅವರನ್ನು ಹೆಚ್ಚು ಮಾತನಾಡಿಸಲಿಕ್ಕೆ ಹಚ್ಚಿತು. ವಿಧಾನಸಭೆಯಲ್ಲಿ ಗೌಡರು ಎದ್ದು ನಿಂತರೆ ಇವರು ಬರಗಾದ ಕುರಿತೇ ಮಾತನಾಡುತ್ತಾರೆ ಎನ್ನುವಷ್ಟರ ಮಟ್ಟಿಗೆ ಅವರ ವ್ಯಕ್ತಿತ್ವ ಬರಗಾಲಕ್ಕಂಟಿಕೊಂಡೇ ಬೆಳೆದಿತ್ತು. ಶಾಸಕರಾಗಿದ್ದುಕೊಂಡು ಶಂಕರಗೌಡರು ಮೆರೆದವರಲ್ಲ. ಜನ ಮರೆಯದ ರೀತಿಯಲ್ಲಿ ಬದುಕಿದರು. ಕ್ಷೇತ್ರದ ಜನತೆಯ

ಕೆಲಸಕ್ಕಾಗಿ ಅವರೆಂದೂ ಅನ್ಯಾಯದ ದುಡ್ಡನ್ನು ಪಡೆದುಕೊಂಡವರಲ್ಲ ನ್ಯಾಯ, ನೀತಿ, ಧರ್ಮದ ದಾರಿಯಲ್ಲಿ ನಡೆದು ನುಡಿದವರು. ಹೀಗಾಗಿ ಅವರಿಗೆ ಭೂಮಿ ತೂಕದ ವ್ಯಕ್ತಿತ್ವ ಪ್ರಾಪ್ತಿಯಾಗಿತ್ತು.

ಸಣ್ಣವರಿರಲಿ, ದೊಡ್ಡವರಿರಲಿ ಸಮಾನವಾಗಿ ಅವರನ್ನು ಕಾಣುತ್ತಿದ್ದರು. ಕೆಳವರ್ಗದ ಜನರನ್ನು ಬಹಳಷ್ಟು ಪ್ರೀತಿಸುತ್ತಿದ್ದರು. ಆಸೆಗಳನ್ನು ಇಟ್ಟುಕೊಳ್ಳದ ಗೌಡರು ಪರರ ಚಿಂತೆಗೆ ತಮ್ಮನ್ನು ಸದಾವಕಾಲ ತೊಡಗಿಸಿಕೊಂಡವರು. ಹೀಗಾಗಿ ತಮ್ಮ ಕ್ಷೇತ್ರವಲ್ಲಿ ಜನಪ್ರಿಯ ಶಾಸಕರೆಂದೇ ಅವರು ಗುರುತಿಸಿಕೊಳ್ಳುತ್ತಿದ್ದರು.

ರಾಜಕೀಯ ಚದುರಂಗದಾಟದಲ್ಲಿ ಒಮ್ಮೊಮ್ಮೆ ಇವರು ಬಲಿ ಪಶುವಾದದ್ದು ಉಂಟು. ನಿಜಲಿಂಗಪ್ಪನವರನ್ನು ವಿರೋಧಿಸಿ, ಜತ್ತಿಯವರನ್ನು ಬೆಂಬಲಿಸುವುದರ ಮೂಲಕ ಅರವತ್ತೆರಡರ ಚುನಾವಣೆಯಲ್ಲಿ ಟಿಕೇಟು ಸಿಗಲಾರದಂತ ಪರಿಸ್ಥಿತಿ. ಅದೇ ಪರಿಸ್ಥಿತಿ ಅರವತ್ತೇಳರಲ್ಲೂ ಮರುಕಳಿಸಿತು. ಲೋಕಸಭೆಗೆ ಚುನಾವಣೆಗೆ ನಿಂತು ಪರಾಭವಗೊಂಡರು. ಹೀಗೆ ಕಷ್ಟಗಳ ಸಮೂಹವನ್ನೇ ಎದುರಿಸಿದರು. ರಾಜಕೀಯದಲ್ಲಿ ರಾಜಿ ಮಾಡಿಕೊಳ್ಳದ ಸ್ವಭಾವ ಇವರದು. ಇದ್ದದ್ದನ್ನು ಇದ್ದಂತೆ ಮಾತನಾಡುವ ಸ್ವಭಾವದವರು ಹೀಗಾಗಿ ವೈರಿಗಳಿಗೇನೂ ಕಡಿಮೆ ಇರಲಿಲ್ಲ ಇದ್ದ ಎರಡು ಹೊಲಗಳನ್ನು ಚುನಾವಣಾ ಖರ್ಚಿಗೆ ಒತ್ತೆ ಹಾಕಿ ಬರಿಗೈಯಿಂದ ೧೯೭೨ ರ ಚುನಾವಣೆಗೆ ಸನ್ನದ್ಧರಾಗುತ್ತಾರೆ. ಹಣವಿಲ್ಲದಿದ್ದರೂ ಗೆಲ್ಲುತ್ತೇನೆಂಬ ಆತ್ಮ ವಿಶ್ವಾಸ ಅವರಿಗೆ ಜನರಿಗಾಗಿ ನಾನಿದ್ದೇನೆ, ನನಗಾಗಿ ಜನರಿದ್ದಾರೆ ಎಂಬ ಸರಳ ತತ್ವದ ಮುಗ್ಧ ಮನಸ್ಸು ಅವರದು. ಇವರೊಬ್ಬ ಅಪರೂಪದ ರಾಜಕಾರಣಿ ಎಂದೇ ಹೇಳಬೇಕು.

೧೯೭೨ ರ ಚುನಾವಣೆಗೆ ಸ್ಪರ್ಧಿಸಿ ಜಯಶಾಲಿಯಾಗುತ್ತಾರೆ. ಪರಿಪೂರ್ಣ ರಾಜಕೀಯ ಪ್ರಜ್ಞೆಯಿಂದ ವಿಧಾನ ಸಭೆಯನ್ನು ಪ್ರವೇಶಿಸಿದ ಇವರ ಮಾತಿನಲ್ಲಿ ತೂಕಬದ್ಧ ನಿಲುವನ್ನು ಕಾಣುತ್ತೇವೆ. ನಿರ್ಭಿಡೆಯ ದೃಷ್ಟಿಕೋನ ಅಲ್ಲಿ ಸದಾ ಜಾಗೃತವಾಗಿರುವುದನ್ನು ಕಾಣಬಹುದು. ಸಭಾ ಅಧ್ಯಕ್ಷರು, ಮುಖ್ಯಮಂತ್ರಿಗಳು ಅಥವಾ ಯಾವುದೇ ಇಲಾಖೆಯ ಮಂತ್ರಿಯಿರಲಿ ಅವರೇನಾದರೂ ಜನ ಕಲ್ಯಾಣದಲ್ಲಿ ಅಪಚಾರ ಮಾಡಿದರೆ ಇವರೆಂದೂ ಸಹಿಸಿಕೊಂಡು ಸುಮ್ಮನಾದವರಲ್ಲ. ಜನರು ನಮ್ಮನ್ನು ನಂಬಿದ್ದಾರೆ. ಅವರ ನಂಬಿಕೆ ಸುಳ್ಳಾಗದಂತೆ ಬದುಕಬೇಕೆನ್ನುವವರು ಲಂಚ ರುಸುವತ್ತುಗಳಿಂದ ಗೌಡರು ಬಹು ದೂರ ಐಶಾರಾಮಿ ಬದುಕಿನಿಂದ ದೂರವಿದ್ದ ಗೌಡರು ಮಠ, ಮಂದಿರಗಳಲ್ಲಿಯೇ ವಾಸ್ತವ್ಯ ಹೂಡುತ್ತಿದ್ದರು. ಬಡವರ, ದುರ್ಬಲರ ನಿರ್ಗತಿಕರ ಮೇಲೆ ಅಪಾರ ಕರುಣೆ ಈ ವಿಷಯಗಳನ್ನು ಅವರು ವಿಧಾನ ಸಭೆಯಲ್ಲಿ ಎತ್ತಿಕೊಂಡು ಮಾತನಾಡಿದುಂಟು. ವೈರಿಗಳನ್ನೂ ಮೆಚ್ಚಿಸುವಂತ ವ್ಯಕ್ತಿತ್ವ ಅವರದು.

ಬಡವರೆಂದರೆ, ಅದರಲ್ಲೂ ಪ್ರತಿಭಾವಂತ ಬಡವರೆಂದರೆ ಗೌಡರಿಗೆ ಎಲ್ಲಿಲ್ಲದ ಪ್ರೀತಿ ಅಂಥವರನ್ನು ಕರೆದು ಸಹಾಯ ಮಾಡಿ ಕಲಿಯುವುದಕ್ಕೆ ಪ್ರೋತ್ಸಾಹ ನೀಡಿ ನೌಕರಿ ಸಿಗುವವರೆಗೂ ಬಿಡುವವರಲ್ಲಿ. ಇಂಥ ಎಷ್ಟೋ ಕುಟುಂಬಗಳಿಗೆ ಅವರು ಅನ್ನದಾತರಾಗಿದ್ದಾರೆ. ತಾವು ಕಲಿಯದಿದ್ದರೂ

ಉಳಿದವರು ಕಲಿಯಬೇಕೆಂಬ ಅವರ ತೀವ್ರತರವಾದ ತುಡಿತ ಅಭಿಮಾನ ಪಡುವಂತದ್ದು. ಇಂಡಿ ಹಾಗೂ ಸಿಂದಗಿ ತಾಲೂಕುಗಳೆಂದರೆ ಗೌಡರ ಎರಡು ಕಣ್ಣುಗಳಿದ್ದಂತೆ. ಅವುಗಳ ಸಮಗ್ರ ಅಭಿವೃದ್ಧಿಗೆ ತಮ್ಮ ಜೀವನದುದ್ದಕ್ಕೂ ದುಡಿದರು. ಕೃಷಿಯಾಧಾರಿತ ತಾಲೂಕುಗಳಿವು ಅವುಗಳಿಗೆ ನೀರಾವರಿ ಸೌಲಭ್ಯ ಕಲ್ಪಿಸಿಕೊಡಬೇಕೆಂದು ವಿಧಾನ ಸಭೆಯಲ್ಲಿ ಬೇಕಾದಷ್ಟು ಮಾತನಾಡಿದರು ಕೆಲವನ್ನು ಸಾಧ್ಯವಾಗಿಸಿಕೊಂಡರು ಕೆಲವು ಸಾಧ್ಯವಾಗಲೇ ಇಲ್ಲ. ತಾವೊಬ್ಬ ರೈತರಾಗಿ, ರೈತನ ಕಷ್ಟ ನಷ್ಟಗಳನ್ನು ಮನಂಬುಗುವಂತೆ ವಿಧಾನ ಸಭೆಯಲ್ಲಿ ಪ್ರಸ್ತಾಪಿಸಿದ ಸಂದರ್ಭಗಳಿಗೆ ಲೆಕ್ಕವೇ ಇಲ್ಲ. ಸರಳ, ಸಜ್ಜನಿಕೆಗೆ ಹೆಸರಾದ ಇವರು ಧಾರ್ಮಿಕ ವಿಚಾರಗಳಿಗೆ ಬಹಳ ಒತ್ತುಕೊಡುತ್ತಿದ್ದರು. ವಿಜಾಪೂರದ ವೇದಾಂತ ಕೇಸರಿ ಶ್ರೀ ಮಲ್ಲಿಕಾರ್ಜುನ ಮಹಾಸ್ವಾಮಿಗಳ ಪರಮ ಶಿಷ್ಯರಾಗಿದ್ದರು. ಉತ್ತಮ ಪ್ರವಚನಕಾರರು, ಕೀರ್ತನಕಾರರು, ಆದ ಇವರಿಗೆ ವೇದಿಕೆಯ ಮೇಲೆ ಮಾತನಾಡುವುದೆಂದರೆ ಎಲ್ಲಿಲ್ಲದ ಹುರುಪು. ಉತ್ತಮ ಸಂಘಟಕರಾಗಿ ಪಡಗಾನೂರಿನಂತಹ ಚಿಕ್ಕ ಹಳ್ಳಿಯಲ್ಲಿ ನಾಡಿನ ಖ್ಯಾತ ವ್ಯಕ್ತಿಗಳನ್ನು ಕರೆಯಿಸಿ ಕಾರ್ಯಕ್ರಮಗಳನ್ನು ಏರ್ಪಡಿಸುತ್ತಿದ್ದರು. ಒಂದರ್ಥದಲ್ಲಿ ಸಂಸ್ಕೃತಿಕ ಪ್ರತಿನಿಧಿಯೆನ್ನುವಂತೆ ಕಂಡದ್ದುಂಟು ರಾಜಕೀಯ, ಧಾರ್ಮಿಕ, ಸಂಸ್ಕೃತಿಕ, ಸಮಾಜಿಕ ಬದುಕಿನ ಆ ಸಂದರ್ಭದಲ್ಲಿ ಇವರದೊಂದು ದೊಡ್ಡ ಹೆಸರು.

ಶ್ರೀ ಶಂಕರಗೌಡರು ಮಾರು ಗೆದ್ದರು, ಮನೆ ಗೆದೆಯಲಿಲ್ಲ, ಇವರ ಹೆಂಡತಿ ನಿಜವಾಗಿಯೂ ಸ್ಮರಿಸಬೇಕಾದ ಹೆಣ್ಣುಮಗಳು ಯಾವ ಕಾಲಕ್ಕೂ ಗೌಡರನ್ನು ಅವರು ಪ್ರಶ್ನಿಸಿದ್ದಿಲ್ಲ. ಗೌಡರು ಯಾವಾಗ ಮನೆಗೆ ಬರುತ್ತಾರೋ, ಹೋಗುತ್ತಾರೋ ಎಂಬ ಕಲ್ಪನೆಯೂ ಅವಳಿಗಿರಲಿಲ್ಲ. ಅವಳದೇನಿದ್ದರೂ ಹೊಲದಲ್ಲಿ ಸದಾಕಾಲ ದುಡಿಯುತ್ತಿರಬೇಕು. ಗೌಡರು ಹೊರಗಿನಿಂದ ಮನೆಗೆ ಬಂದಾಗ ಗೌಡತಿ ಏನಾದರೂ ಮನೆಯಲ್ಲಿದ್ದರೆ ಅವರಿಗೆ ಭಯಂಕರ ಸಿಟ್ಟು, ಹೀಗಾಗಿ ಗೌಡರ ಸಿಟ್ಟಿಗಂಜಿ, ಗೌಡರು ಮುಂಬಾಗಿಲಿನಿಂದ ಒಳಗೆ ಬಂದರೆ, ಗೌಡತಿ ಹಿಂಬಾಗಿಲಿನಿಂದ ಹೊಲಕ್ಕೆ ಹೋಗುತ್ತಿದ್ದರು. ದುಡಿಮೆಯನ್ನು ಬಹಳಷ್ಟು ಪ್ರೀತಿಸುವ ಗೌಡರು ಮನೆಯವರೆಲ್ಲರೂ ದುಡಿಯಬೇಕೆಂಬ ಆಶೆಯುಳ್ಳವರಾಗಿದ್ದರು. ಅವರ ಧರ್ಮಪತ್ನಿ ಎಲೆಮರೆಯ ಕಾಯಿಯ ಹಾಗೆ ಬದುಕಿ ಬಾಳಿದವರು. ಮೂರನೆಯ ಮಗಳಾದ ಶ್ರೀಮತಿ ಈರಮ್ಮಳನ್ನು ಆಗಿನ ಕಾಲದ ಕಷ್ಟದ ಸ್ಥಿತಿಯಲ್ಲಿ ಎಂ.ಬಿ.ಬಿ.ಎಸ್. ಅನ್ನು ಓದಿಸಿದರು.

೧೯೮೦ನೇ ಇಸ್ವಿ ಜೂನ್ ೨೬ ರಂದು ಸೈಕಲ್ ಮೇಲೆ ಶಿವಣಗಿಯಿಂದ ಪಡಗಾನೂರಿಗೆ ಬರುತ್ತಿರುವಾಗ, ಗುಲಬರ್ಗಾದಿಂದ ಅಥಣಿಗೆ ಹೋಗುವ ಬಸ್ಸಿಗೆ ಅಪಘಾತ ಸಂಭವಿಸಿ ಮೆದುಳಿನ ತೀವ್ರ ರಕ್ತಸ್ರಾವದಿಂದ ಲಿಂಗೈಕ್ಯರಾದರು. ಅವರ ಕನಸುಗಳು ಇವತ್ತಿಗೂ ಹಾಗೆಯೇ ಉಳಿದಿದೆ. ಅಲ್ಲಿನ ಜನರು ತಮ್ಮ ಶಾಸಕನ ಕುರಿತು ಮನಬಿಚ್ಚಿ ಮಾತನಾಡುತ್ತಾರೆ, ಮನಮೆಚ್ಚಿ ನುಡಿಯುತ್ತಾರೆ.

# ಮೊದಲನೇ ಅವಧಿಯ ಚರ್ಚೆಗಳು 1952–57

## ತುಂಡು ಭೂಮಿಗಳ ಸಾಮೂಹಿಕ ಒಕ್ಕಲುತನದ ಮೇಲಿನ ಚರ್ಚೆ

4ನೇ ಜುಲೈ 1952

ಅಧ್ಯಕ್ಷ ಮಹಾಶಯರೇ, ಈಗ ಸಭಾಗೃಹದ ಮುಂದೆ ತುಂಡು ಭೂಮಿಗಳನ್ನು ಒಟ್ಟುಗೂಡಿಸುವ ಕಾಯಿದೆಯ ಬಗ್ಗೆ ಚರ್ಚೆಗೆ ಬಂದಿರುವ ಕಡತದ ಸೂಚನೆಗೆ ವಿರೋಧ ವ್ಯಕ್ತಪಡಿಸಿ ಮಾತನಾಡುವುದಕ್ಕಾಗಿ ನಾನು ನಿಂತಿರುವೆನು. ಈ ಸೂಚನೆಯನ್ನು ಮಂಡಿಸಿರುವ ಮಾನ್ಯ ಸದಸ್ಯರಾದ ಶ್ರೀ ಪಾಟೀಲ ಮತ್ತು ಇದಕ್ಕೆ ಬೆಂಬಲಕೊಟ್ಟು ಭಾಷಣ ಮಾಡಿದ ಶ್ರೀ ಜಾಧವ, ಮೊದಲಾದವರು ವ್ಯಕ್ತಪಡಿಸಿದ ಅಭಿಪ್ರಾಯಗಳಿಗೆ ನಾನು ಒಪ್ಪುವುದಿಲ್ಲ. ಯಾಕೆಂದರೆ ನಾನು ಸ್ವತಃ ಹಳ್ಳಿಯಲ್ಲಿ ವಾಸಿಸುವವನಿದ್ದು ನಾನು ಸ್ವತಃ ಒಕ್ಕಲುತನವನ್ನು ಮಾಡಿದ್ದೇನೆ. ಒಕ್ಕಲುತನದ ಎಲ್ಲ ಅನುಭವ ನನಗೆ ಸಂಪೂರ್ಣ ಇದೆ. ರೈತರು ಅನುಭವಿಸುವ ಕಷ್ಟ ನಷ್ಟಗಳು ನನಗೆ ಚೆನ್ನಾಗಿ ಗೊತ್ತಿವೆ. ನನ್ನ ಸ್ವಂತ ಅನುಭವದಿಂದ ನಾನು ಹೇಳುವುದೇನೆಂದರೆ ತುಂಡು ಭೂಮಿಗಳನ್ನು ಒಂದುಗೂಡಿಸುವುದರಿಂದ ರೈತರಿಗೆ ಬಹಳ ಲಾಭವಾಗುವುದು. ತುಂಡು ಭೂಮಿಗಳನ್ನು ಒಟ್ಟುಗೂಡಿಸುವುದಕ್ಕೆ ಒಕ್ಕಲಿಗರ ಸಮ್ಮತಿ ಇಲ್ಲವೆಂದು ಹೇಳುವುದು ನಿರಾಧಾರವಾಗಿದೆ. ಆದರೆ ರೈತರು ಈ ಕಾಯಿದೆಯನ್ನು ಬಹು ಸಂತೋಷದಿಂದ ಸ್ವಾಗತಿಸುತ್ತಿದ್ದಾರೆ.

ಇನ್ನೊಂದು ಮಹತ್ವದ ಸಂಗತಿಯನ್ನು ಈ ಸಭೆಯ ಮಾನ್ಯ ಸದಸ್ಯರ ಲಕ್ಷ್ಯಕ್ಕೆ ತರಬಯಸುತ್ತೇನೆ. ತುಂಡು ಭೂಮಿಗಳ ಮತ್ತು ಅವುಗಳ ಬಾಂಡುಗಳ ಸಲುವಾಗಿ ನೆರೆಹೊರೆಯ ರೈತರಲ್ಲಿ ಅನೇಕ ಜಗಳಗಳು ಉದ್ಭವಿಸಿ ಆ ಮೂಲಕ ಒಕ್ಕಲಿಗರು ಕೋರ್ಟು ಕಛೇರಿಗಳಿಗೆ ಹೋಗಿ ಎಡತಾಕಿ ವ್ಯರ್ಥವಾಗಿ ಹಣ ವೇಳೆ ಖರ್ಚುಮಾಡಿ ಕಷ್ಟಪಡುತ್ತಿರುವುದನ್ನು ನಾವು ಕಾಣುತ್ತಿದ್ದೇವೆ. ನಮ್ಮ ವಿಜಾಪೂರ ಜಿಲ್ಲೆಯಲ್ಲಿ ಸಣ್ಣ ಸಣ್ಣ ಭೂಮಿಗಳನ್ನು ಒಟ್ಟುಗೂಡಿಸಿದ ಮೂಲಕ ಜಗಳಗಳು ಕಡಿಮೆಯಾಗಿವೆ. ಮತ್ತು ಒಕ್ಕಲುತನಕ್ಕೆ ಬಹಳೇ ಅನುಕೂಲವಾಗಿ ಹಿತವಾಗಿದೆ. ನಿಜವಾಗಿ ಒಕ್ಕಲುತನದ ಅಭಿವೃದ್ಧಿಯಾಗಬೇಕಾದರೆ ತುಂಡು ಭೂಮಿಗಳನ್ನು ಒಟ್ಟುಗೂಡಿಸುವುದು ಅತ್ಯಂತ ಅವಶ್ಯಕವೆಂದು ನನ್ನ ಸ್ಪಷ್ಟ ಅಭಿಪ್ರಾಯವಾಗಿದೆ. ಇದಲ್ಲದೆ ರೈತರಿಗೂ ಇದರಿಂದ ಬಹಳ ಲಾಭವಾಗುವುದು. ಆಹಾರಧಾನ್ಯ ಉತ್ಪಾದನೆಯು ಸಹ ಹೆಚ್ಚಾಗುವಂತೆ ಮಾಡಬೇಕೆಂದು ಸರಕಾರಕ್ಕೆ ನಾನು ಪ್ರಾರ್ಥಿಸುತ್ತೇನೆ. ಈ ಮೊದಲೇ ಅನೇಕ ಸದಸ್ಯರು ಈ ಸೂಚನೆಯ ಮೇಲೆ ಮಾತನಾಡಿದ್ದಾರೆ. ಆದುದರಿಂದ ಈ ಸಭೆಯ ಮಹತ್ವದ ವೇಳೆಯನ್ನು ಹೆಚ್ಚಾಗಿ ತೆಗೆದುಕೊಳ್ಳುವುದಿಲ್ಲ. ಈ ಕಡತದ ಸೂಚನೆಗೆ ನಾನು ಬಲವಾಗಿ ವಿರೋಧ ಮಾಡುತ್ತೇನೆಂದು ಪುನಃ ಹೇಳಿ ನನ್ನ ಭಾಷಣವನ್ನು ಮುಗಿಸುತ್ತೇನೆ.

# ವಕೀಲ-ಡಾಕ್ಟರರಗಿಂತ ರೈತನೇನು ಕಡಿಮೆಯಲ್ಲ

8ನೇ ಜುಲೈ 1952

ಮಾನನೀಯ ಸಭಾಪತಿಗಳೇ, ಈ ಸಭಾಗೃಹದಲ್ಲಿ ಒಕ್ಕಲುತನ ಖಾತೆಯ ಬಗ್ಗೆ ಇರುವ ಕಡತದ ಸೂಚನೆಯ ಮೇಲೆ ಇಲ್ಲಿಯುವರೆಗೆ ನಡೆದ ಚರ್ಚೆಯಲ್ಲಿ ಹಲವು ಮಾನ್ಯ ಸದಸ್ಯರು ಅನುಕೂಲವಾಗಿಯೂ ಮತ್ತು ಕೆಲವು ಮಾನ್ಯ ಸದಸ್ಯರು ವಿರೋಧವಾಗಿಯೂ ಅಭಿಪ್ರಾಯವನ್ನು ವ್ಯಕ್ತಮಾಡಿದ್ದಾರೆ. ಈ ಕಡತದ ಸೂಚನೆಗೆ ನನ್ನ ವಿರೋಧ ವ್ಯಕ್ತಪಡಿಸುವುದಕ್ಕಾಗಿ ಮಾತನಾಡಲು ನಾನು ನಿಂತಿರುವೆನು.

ನಮ್ಮ ಮುಂಬಯಿ ರಾಜ್ಯದಲ್ಲಿ ಟ್ರ್ಯಾಕ್ಟರ್ ಸಲುವಾಗಿ 44 ಲಕ್ಷ ರೂಪಾಯಿ ಖರ್ಚು ಆಗಿದ್ದು ಅದರ ಉತ್ಪನ್ನ ಕೇವಲ 10 ಲಕ್ಷ ರೂಪಾಯಿ. ಒಟ್ಟು 34 ಲಕ್ಷ ರೂಪಾಯಿ ಇದರಿಂದ ಹಾನಿಯಾಗಿದೆ ಎಂದು ಈ ಮೊದಲು ಮಾತನಾಡಿದ ವಿರೋಧ ಪಕ್ಷದ ಮಾನ್ಯ ಸದಸ್ಯರಾದ ಶ್ರೀಭೂರೂಚಾರವರು ಪ್ರತಿಪಾದಿಸಿದರು. ಈ ಪ್ರತಿಪಾದನೆಯು ಅಷ್ಟು ಸಮಂಜಸವಾದುದಲ್ಲವೆಂದು ನನಗೆ ಅನಿಸುತ್ತದೆ. ಈ ವಿಷಯವಾಗಿ ಎಷ್ಟು ಹಣ ಖರ್ಚಾಗಿದೆಯೆಂದು ನೋಡುವುದಕ್ಕಿಂತ ಎಷ್ಟು ಉಪಯೋಗವಾಗಿದೆ ಎಂದು ನೋಡುವುದು ಅವಶ್ಯ. ಮುಂಬಯಿ ಸರಕಾರದವರು ಪ್ರತಿಫಲದ ಆಶೆಯಿಲ್ಲದೆ ಜನತೆಯ ಸಂರಕ್ಷಣೆಯ ಸಲುವಾಗಿ ಪೋಲಿಸ ಖಾತೆಯ ಮೇಲೆ 9 ಕೋಟಿ ರೂಪಾಯಿಗಳನ್ನು, ಜನತೆಯ ಶಿಕ್ಷಣದ ಸಲುವಾಗಿ 12 ಕೋಟಿ ರೂಪಾಯಿ ಮೇಲ್ಪಟ್ಟು ಹಣವನ್ನು ಖರ್ಚು ಮಾಡುವಂತೆ ಬಡ ರೈತರ ಸಲುವಾಗಿ ಎಷ್ಟು ಹಣ ಖರ್ಚುಮಾಡಿದರೂ ಅದು ಕಡಿಮೆಯೇ ಸರಿ. ಜನತೆಯ ಸಂರಕ್ಷಣೆ ಮತ್ತು ಶಿಕ್ಷಣಕ್ಕೆ ಸರಕಾರವು ಲಕ್ಷ ಕೊಡುವಂತೆ ಜನತೆಯ ಜೀವನಾಧಾರವಾದ ಆಹಾರ ಧಾನ್ಯ ಉತ್ಪಾದನೆಯ ಅಭಿವೃದ್ಧಿಯ ಬಗ್ಗೆ ಹೆಚ್ಚಾಗಿ ಲಕ್ಷ ಕೊಡುವುದು ಅತ್ಯಂತ ಜರೂರು ಇದೆ. ಈ ದೃಷ್ಟಿಯಿಂದ ಸರಕಾರಿ ಟ್ರ್ಯಾಕ್ಟರ ಯುನಿಟ್ಟುಗಳು ನಮ್ಮ ಜಿಲ್ಲೆಯಲ್ಲಿ ಭೂಮಿ ಸುಧಾರಣೆಗಾಗಿ ರೈತರಿಗೆ ಬಹಳ ಸಹಾಯ ಮಾಡಿವೆ. ಪ್ರತಿವರ್ಷ ನಮ್ಮ ಜಿಲ್ಲೆಯಲ್ಲಿ ಎರಡು ಸಾವಿರ ಮೇಲ್ಪಟ್ಟ ಎಕರೆ ಭೂಮಿಗೆ ಈ ಸರಕಾರಿ ಟ್ರ್ಯಾಕ್ಟರಗಳಿಂದ ಉಪಯೋಗವಾಗಿದೆ. ಯಾವ ಪ್ರಕಾರ ರೋಗಿಯಾದ ತಾಯಿಯಿಂದ ನಿರೋಗಿಯಾದ ಮಕ್ಕಳು ಜನಿಸುವುದಿಲ್ಲವೋ ಅದೇ ರೀತಿಯಾಗಿ ಕರಕಿಯುಳ್ಳ ಭೂಮಿಯಿಂದ ಉತ್ತಮ ತರದ ಆಹಾರ ಧಾನ್ಯ ಹೆಚ್ಚಾಗಿ ಬೆಳೆಯಲು ಸಾಧ್ಯವಾಗುವುದಿಲ್ಲ. ಕರಕಿಯುಳ್ಳ ಭೂಮಿಗೆ ಒಡ್ಡು ಹಾಕಿದರೆ ಉಪಯೋಗವಾಗಲಾರದು ಮತ್ತು ನೀರು ಉಣಿಸಿದರೂ ಉತ್ತಮ ಪೀಕ ಬರಲಾರದು. ಒಕ್ಕಲುತನ ಸುಧಾರಣೆಯಲ್ಲಿ ಕರಕಿ ತೆಗೆಯುವುದು ಅತಿ ಮಹತ್ವದ ಮಾತಾಗಿದೆ. ಈಗಿನ ಕಾಲದಲ್ಲಿ ಜನರಿಂದ ನಟ್ಟಕಡಿಸಿ ಎಲ್ಲ ಭೂಮಿಯನ್ನು ಕಿರ್ದಿ ಮಾಡುವುದು

ಶಕ್ಯವೇ ಇಲ್ಲ. ಆದ್ದರಿಂದ ಭೂಮಿ ಕಿರ್ದಿ ಮಾಡಲು ಸರಕಾರಿ ಟ್ರ್ಯಾಕ್ಟರುಗಳ ಅವಶ್ಯಕತೆ ವಿಶೇಷವಿದೆ. ಸರಕಾರದವರು Deep ploughing ಬಗ್ಗೆ ಒಂದು ಎಕರೆಗೆ 30 ರೂಪಾಯಿ, Re-oparation ಅಂದರೆ ತಿರುಗಿ ಹೊಡೆಯುವ ಬಗ್ಗೆ ಒಂದು ಎಕರೆಗೆ 18 ರೂಪಾಯಿ ದರ ಇಟ್ಟಿರುವರು. ಎರಡೂ ಹೊಡೆಯದೆ ಕಿರ್ದಿ ಆಗಲು ಸಾಧ್ಯವಿಲ್ಲ. ಸ್ವತಂತ್ರ ಟ್ರಾಕ್ಟರ್‌ದವರು Deep ploughing ದ ಬಗ್ಗೆ ಒಂದು ಎಕರೆಗೆ 50 ಸಾಚಿರ ರೂಪಾಯಿ ತೆಗೆದುಕೊಳ್ಳುವರು. ಈ ದೃಷ್ಟಿಯಿಂದ ಸರಕಾರಿ ಟ್ರ್ಯಾಕ್ಟರಗಳಿಂದ ಬಹಳ ಸಹಾಯವಾಗಿದೆ. ಇದಕ್ಕಾಗಿ ಸರಕಾರದವರು ತಗಾಯಿ ಮಂಜೂರು ಮಾಡುವುದು ಶ್ಲಾಘನೀಯವಾದದ್ದು. ತಗಾಯಿ ಹಣವನ್ನು ರೈತನ ಕೈಯಲ್ಲಿ ಕೊಡದೆ ಪರಭಾರೆ ಟ್ರ್ಯಾಕ್ಟರ ಮ್ಯಾನೇಜರ್‌ರಿಗೆ ಕೊಡುವುದರಿಂದ ಸರಕಾರದಿಂದ ಮಂಜೂರಾರ ಹಣವು ಭೂಮಿಯ ಸುಧಾರಣಗೇನೇ ಮುಟ್ಟುವುದು. ಸರಕಾರದವರು ಒಂದೇ ಸಾರೆ ಟ್ರ್ಯಾಕ್ಟರ್ ಹೊಡಿಯುವ ಸಲುವಾಗಿ ತಗಾಯಿ ಮಂಜೂರು ಮಾಡುವುದಲ್ಲದೆ ಎರಡನೆ ಸಾರೆ ಹೊಡೆಯುವ ಸಲುವಾಗಿಯೂ ಸಹ ಮಂಜೂರು ಮಾಡಬೇಕು. ಒಂದೇ ಸಾರೆ ಹೊಡೆಯುವುದರಿಂದ ವಿಶೇಷ ಉಪಯೋಗವಾಗುವುದಿಲ್ಲ. ಒಂದೇ ಸಾರೆ ಹೊಡೆಯುವ ಮರಡಿ (ಮಡ್ಡಿ) ಭೂಮಿಗೆ ಮಾತ್ರ ಉಪಯೋಗವಾಗುವುದು. ಉದಾಹರಣೆಗಾಗಿ ವಿಜಾಪೂರ ಜಿಲ್ಲೆಯಲ್ಲಿ ನನ್ನ ಭಾಗದಲ್ಲಿ ಯಾಳವಾರ ಎಂಬ ಗ್ರಾಮದ ಡೋಣಿ ದಂಡೆಗಿರುವ ಹೊಲಗಳು ಎರಡು ವರ್ಷದ ಹಿಂದೆ ಆದ ಅತಿ ಮಳೆಯಿಂದ ನೆಲ ಕೆತ್ತಿ ಬಿತ್ತಲಿಕ್ಕೆ ಬಾರದಂತೆ ಆಗಿದ್ದವು. ಈ ವರ್ಷ ಸರಕಾರದವರು 20 ಸಾವಿರ ರೂಪಾಯಿ ತಗಾಯಿ ಹಣ ಮಂಜೂರು ಮಾಡಿ ಎಲ್ಲ ಭೂಮಿ ಟ್ರಾಕ್ಟರ ಹೊಡೆಸಿ ಕೊಟ್ಟರು. ಪ್ರತಿಯೊಂದು ತಾಲೂಕಿಗೆ ಒಂದು ಯುನಿಟ್‌ಬೇಕು. ಇದು ಸಾಧ್ಯವಾಗದೇ ಇದ್ದರೆ ಎರಡು ತಾಲೂಕಿಗೆ ಒಂದರಂತೆಯಾದರೂ ಯುನಿಟ್ ಇಡುವಂತೆ ವ್ಯವಸ್ಥೆ ಮಾಡಲು ಸರಕಾರಕ್ಕೆ ನನ್ನ ವಿನಂತಿ ಇದೆ. ಇದರ ಮೇಲ್ವಿಚಾರಣೆಯು ಕೆಲಸವು ಎಲ್ಲ ಖಾತೆಗಳ ಪ್ರತಿನಿಧಿಗಳಿಂದ ಮಾಡಿದ ರೂರಲ್ ಡೆವ್ಹಲಪ್‌ಮೆಂಟ್ ಬೋರ್ಡದ ನೇತೃತ್ವದಲ್ಲಿ ಇದ್ದದ್ದು ಉತ್ತಮವಾದದ್ದಾಗಿದೆ.

ಈ ಸಂಬಂಧವಿರುವ ಇನ್ನೊಂದು ಮಹತ್ವದ ವಿಷಯದ ಬಗ್ಗೆ ಒಂದು ಸೂಚನೆಯನ್ನು ಮಾಡಬೇಕೆನ್ನುತ್ತೇನೆ. ಸರಕಾರದವರು ಮೊದಲು ರೈತರಿಗೆ ಸಬ್ಸಿಡಿ ಕೊಡುತ್ತಿದ್ದರು. ಅದರಿಂದ ರೈತರಿಗೆ ಅಪಾರ ಲಾಭವಾಗಿದೆ. 400 ರೂಪಾಯಿ ಬೆಲೆಯುಳ್ಳ ಹೊಲಗಳು ಈ ಸಬ್ಸಿಡಿ ಸಹಾಯದಿಂದ ಸುಧಾರಿಸಲ್ಪಟ್ಟು 4000 ರೂ. ಬೆಲೆ ಬಾಳುವ ತೋಟಗಳಾಗಿವೆ. ಈಗ ಸಬ್ಸಿಟಿ ಬಂದ್ ಮಾಡಿದ್ದನ್ನು ಪುನಃ ಪ್ರಾರಂಭ ಮಾಡಿ ಆಹಾರ ಧಾನ್ಯ ಉತ್ಪಾದನೆಗೆ ಸರಕಾರದವರು ಸಹಾಯ ಮಾಡುವರೆಂದು ನಂಬಿದ್ದೇನೆ.

ನಮ್ಮ ಕರ್ನಾಟಕದಲ್ಲಿಯ ವಿಜಾಪೂರ ಜಿಲ್ಲೆಯು ದುಷ್ಕಾಳದ ತವರುಮನೆಯೆಂದು ಪ್ರಸಿದ್ಧಿಯಿರುವ ಸಂಗತಿಯು ಮಾನ್ಯ ಅಧ್ಯಕ್ಷರಿಗೂ, ಮಾನ್ಯ ಮುಖ್ಯ ಮಂತ್ರಿಗಳಿಗೂ ಎಲ್ಲ ಸನ್ಮಾನ್ಯ ಸದಸ್ಯರಿಗೂ ಗೊತ್ತಿದ್ದ ಸಂಗತಿಯಾಗಿದೆ. ಮುಂಬಯಿ ರಾಜ್ಯದಲ್ಲಿ ಗುಜರಾತ, ಮಹಾರಾಷ್ಟ್ರ, ಕರ್ನಾಟಕ ಎಂಬ ಭಾಗಗಳಿದ್ದರೂ, ಬಿಜಾಪೂರ ಜಿಲ್ಲೆಯು ಕರ್ನಾಟಕದ್ದು ಎಂಬ ಭಾವವನ್ನು ತಾಳದೆ ಮುಂಬಯಿ ರಾಜ್ಯದಲ್ಲಿಯ ಮೇಲಿಂದ ಮೇಲೆ ಆಡಳಿತ ಅಂದರೆ ಕಡಿಮೆ ಮಳೆ ಬೀಳುವ ಬಡ ಜಿಲ್ಲೆಯೆಂದು ಬಾವಿಸಿ ಅದರ ಸುಧಾರಣೆಯ ಬಗ್ಗೆ ಹೆಚ್ಚಾಗಿ ಖರ್ಚು ಮಾಡಬೇಕು. ಸಬ್ಸಿಡಿಯು ರೂಪದಿಂದ ಸಹಾಯವನ್ನು ನೀಡಿ, ನೀರು ಬೀಳುವ ಭಾಗದಲೆಲ್ಲ ತೋಟ ಆಗುವಂತೆ ಮಾಡುವುದು ಜನತಾ ಸರಕಾರದ ಆದ್ಯಕರ್ತವ್ಯವಾಗಿದೆ.

ವಿರೋಧಿ ಪಕ್ಷದ ಮಾನ್ಯ ಸದಸ್ಯರೊಬ್ಬರು ಒಕ್ಕಲುತನ ಶಾಲೆಯ ಒಬ್ಬ ವಿದ್ಯಾರ್ಥಿಯು ಸಲುವಾಗಿ 3 ಸಾವಿರ ರೂ. ಖರ್ಚು ಮಾಡಬೇಕಾಗುತ್ತದೆಂದು ಟೀಕಿಸಿದರು. ಆದರೆ ಈಗಿನ ಕಾಲದಲ್ಲಿ ವಕೀಲರಿಗಿಂತ, ಡಾಕ್ಟರಿಗಿಂತ ಒಕ್ಕಲುತನ ಶಿಕ್ಷಣದ ಪದವೀಧರರ ಅವಶ್ಯಕತೆ ಹೆಚ್ಚಾಗಿ ಇದ್ದು ಆ ಬಗ್ಗೆ ಎಷ್ಟೇ ಖರ್ಚು ಮಾಡಿದರೂ ಕಡಿಮೆಯೇ ಸರಿ. ಈ ದೃಷ್ಟಿಯಿಂದ ಮಾನ್ಯ ಸದಸ್ಯರಾದ ಶ್ರೀ ಭರೂಚಾರವರ ವಿಚಾರಗಳಿಗೆ ನನ್ನ ವಿರೋಧವಿದೆ. ವಿಜಾಪೂರ ಜಿಲ್ಲೆಯ ಬಾವಿಗಳ ಬಗ್ಗೆ ಸಬ್ಸಿಡಿ, ಟ್ರಾಕ್ಟರ ಬಗ್ಗೆ ತಗಾಯಿ ಹೆಚ್ಚಾಗಿ ಮಂಜೂರು ಮಾಡಬೇಕೆಂದು ಸರಕಾರಕ್ಕೆ ವಿನಂತಿಸಿ ಮತ್ತು ನನಗೆ ಮಾತನಾಡಲು ಸಾಕಷ್ಟು ವೇಳೆ ಕೊಟ್ಟ ಬಗ್ಗೆ ಮಾನ್ಯ ಅಧ್ಯಕ್ಷರಿಗೆ ಅಭಿನಂದಿಸಿ ಈ ಕಡಿತದ ಸೂಚನೆಯನ್ನು ನಾನು ವಿರೋಧಿಸುತ್ತೇನೆಂದು ಮತ್ತೊಮ್ಮೆ ಹೇಳಿ ನನ್ನ ಭಾಷಣವನ್ನು ಮುಗಿಸುತ್ತೇನೆ.

## ವಿದ್ಯುತ್ ಶಕ್ತಿ ಹೆಚ್ಚಿಸಿ

([illegible] ಜುಲೈ 19[illegible])

ಮಾನನೀಯ ಸಭಾಪತಿಗಳೇ, ನಿನ್ನೆಯ ದಿವಸದಿಂದ ಈ ಸಭೆಯಲ್ಲಿ ಕಡಿತದ ಸೂಚನೆಯ ಮೇಲೆ ನಡೆದ ಚರ್ಚೆಯಲ್ಲಿ ಭಾಗವಹಿಸಿ ವಿರೋಧಿ ಪಕ್ಷದ ಸದಸ್ಯರು ತಮ್ಮ ಭಾಷಣದಲ್ಲಿ ವಿದ್ಯುಚ್ಛಕ್ತಿಯ ಉತ್ಪಾದನೆ ಹೆಚ್ಚಾಗುವಿಕೆಯ ಸಲುವಾಗಿ ಸಾಕಷ್ಟು ಲಕ್ಷವನ್ನು ನಮ್ಮ ಸರಕಾರವು ಕೊಡುತ್ತಿಲ್ಲವೆಂದು ಟೀಕೆ ಮಾಡಿದರು. ಆದರೆ ನಮ್ಮ ಸರಕಾರವು ಹೆಚ್ಚು ವಿದ್ಯುಚ್ಛಕ್ತಿಯ ಉತ್ಪಾದನೆಯ ಬಗ್ಗೆ ಸತತ ಪ್ರಯತ್ನ ನಡೆಸಿರುತ್ತದೆ. ಯಾಕೆಂದರೆ ಇದರಿಂದ ಜನತೆಯ ಕಲ್ಯಾಣವು

ಆಗುವುದು. ಈ ಮಾತನ್ನು ಸರ್ವರೂ ಒಪ್ಪಲೇಬೇಕು. ಈ ವಿಷಯದ ಬಗ್ಗೆ ಮಾತನಾಡುವಾಗ ಮಾನ್ಯ ಸದಸ್ಯರಾದ ಶ್ರೀ ಮಾಧವಜಿಯವರು ಸ್ಪಷ್ಟವಾಗಿ ಇದನ್ನು ತಿಳಿಸಿ ಹೇಳಿದ್ದಾರೆ. ವಿದ್ಯುಚ್ಛಕ್ತಿಯ ಉತ್ಪಾದನೆಯ ಕಾರ್ಯದಲ್ಲಿ ಬರುವ ಅಡಚಣೆಯ ಮೂಲಕ ಕೆಲಸವು ಅಪೇಕ್ಷೆಯಂತೆ ಸಾಗದೆ ಸಾವಕಾಶವಾಗಿ ನಡೆದಿದೆ ಎಂಬುದನ್ನು ಎಲ್ಲರೂ ಲಕ್ಷದಲ್ಲಿ ಇಡಬೇಕಾಗಿದೆ. ಈ ಕಾರ್ಯದಲ್ಲಿ ನಡುವೆ ತೋರಿಬರುವ ಅಡಚಣೆ ಆರ್ಥಿಕ ತೊಂದರೆಗಳನ್ನು ಮರೆತು ಟೀಕಿಸಿದರೆ ಅದು ಯೋಗ್ಯವಾಗಲಾರದು. ಆದಕಾರಣ ವಿರೋಧಿ ಪಕ್ಷದ ಸದಸ್ಯರು ಈ ವಿಷಯವನ್ನು ಚರ್ಚಿಸುವಾಗ ಮುಂಬರುವ ಅಡಚಣೆ, ಆರ್ಥಿಕ ಪರಿಸ್ಥಿತಿಯನ್ನು ನೆನಪಿನಲ್ಲಿ ಇಟ್ಟುಕೊಳ್ಳುವರೆಂದು ನಾನು ನಂಬುತ್ತೇನೆ.

ನಮ್ಮ ಸರಕಾರವು ಜನತೆಯ ಕಲ್ಯಾಣವಾಗಬೇಕೆಂದು ಸುಧಾರಣೆಯ ಬಗ್ಗೆ ಸತತ ಪ್ರಯತ್ನ ನಡೆಸಿದ್ದಾರೆ. ಪ್ರತಿಯೊಂದು ಕಾರ್ಯದ ಸಾಧ್ಯಾಸಾಧ್ಯತೆಯ ಬಗ್ಗೆ ಪೂರ್ಣ ವಿಚಾರ ಮಾಡಿ ಆ ಕಾರ್ಯವು ಯಶಸ್ವಿಯಾಗುವಂತೆ ಯೋಗ್ಯ ಕ್ರಮವನ್ನು ಕೈಗೊಳ್ಳುತ್ತಿದ್ದಾರೆ. ರೈತರ ಕಲ್ಯಾಣದ ಬಗ್ಗೆ ಕಳಕಳಿಯಿಂದ ಭಾಷಣ ಮಾಡುವುದು ಅತಿ ಸುಲಭ. ಆದರೆ ಯಾವುದೇ ಕೆಲಸವನ್ನು ಪ್ರತ್ಯಕ್ಷವಾಗಿ ಕಾರ್ಯರೂಪದಲ್ಲಿ ತಂದು ಕೆಲಸ ಮಾಡಿ ತೋರಿಸುವುದು ಕಠಿಣವಾದುದು. ಮುಂಬಯಿ ರಾಜ್ಯದಲ್ಲಿ ವಿದ್ಯುಚ್ಛಕ್ತಿಯ ಉತ್ಪಾದನೆಯ ಕೆಲಸವೊಂದೇ ಇರುವುದಿಲ್ಲ. ಇಂಥ ಅನೇಕ ಕಾರ್ಯಗಳು ಇವೆ. ಅದಲ್ಲದೆ ನಮ್ಮ ದೇಶದಲ್ಲಿಯ ಪರಿಸ್ಥಿತಿಯು ಸಹ ಬೇರೆ ಸ್ವರೂಪದ್ದಾಗಿದೆ. ಚೀನ ದೇಶದಲ್ಲಿ ಹೀಗೆ ಮಾಡಿದ್ದಾರೆ ಮತ್ತೊಂದು ದೇಶದಲ್ಲಿ ವಿದ್ಯುಚ್ಛಕ್ತಿಯ ಉತ್ಪಾದನೆಯ ಸಲುವಾಗಿ ಹಾಗೆ ಮಾಡಿದ್ದಾರೆ ಎಂದು ಹೇಳುವುದಕ್ಕಿಂತ ಮೊದಲು ನಮ್ಮ ದೇಶದಲ್ಲಿ ಪರಿಸ್ಥಿತಿಯ ಪೂರ್ಣ ವಿಚಾರ ಮಾಡಬೇಕಾದುದು ಅವಶ್ಯ.

ನಮ್ಮ ಸರಕಾರವು ಜನತೆಯ ಹಿತದ ದೃಷ್ಟಿಯಿಂದ ಕೋಯನಾ ಯೋಜನೆಯನ್ನು ತಯಾರಿಸಿದ್ದಾರೆ. ಮಹಾರಾಷ್ಟ್ರಕ್ಕೆ ಕೋಯನಾ ಯೋಜನೆಯು ಜೀವಾಳದ ಪ್ರಶ್ನೆಯಾಗಿರುವಂತೆಯೇ ನಮ್ಮ ಕರ್ನಾಟಕದಲ್ಲಿಯ ಘಟಪ್ರಭಾ ಯೋಜನೆಯು ನಮಗೆ ಜೀವಾಳದ ಪ್ರಶ್ನೆಯಾಗಿದೆ. ಘಟಪ್ರಭಾ ಯೋಜನೆಯು ಪ್ರಥಮ ಘಟ್ಟದಿಂದ ಹೆಚ್ಚು ಉಪಯೋಗವಾಗುವುದಿಲ್ಲ. ಆದರೆ ಈ ಯೋಜನೆಯ ಎರಡನೇ ಘಟ್ಟವು ಪೂರ್ತಿಯಾದ ಮೇಲೆ ಬಹಳ ವಿದ್ಯುಚ್ಛಕ್ತಿಯು ಉತ್ಪಾದನೆಯಾಗುವುದು ಮತ್ತು ಹೆಚ್ಚು ಉಪಯೋಗವಾಗುವುದು. ಆದುದರಿಂದ ಈ ಘಟಪ್ರಭಾ ಯೋಜನೆಯನ್ನು ಬೇಗನೇ ಪ್ಲಾನಿಂಗ್ ಕಮಿಶನ್‌ದ ಮುಂದೆ ಇಟ್ಟು ಅದನ್ನು ಪಂಚವಾರ್ಷಿಕ ಯೋಜನೆಯಲ್ಲಿ ತಕ್ಕೊಳ್ಳುವಂತೆ ಮಾಡಬೇಕು.

ಸರಕಾರವು ಈ ಬಗ್ಗೆ ಅನಾಸ್ಥೆ ಮಾಡಬಾರದು. ಸರಕಾರವು ಮಾಡುವ ಯೋಜನೆಗಳು ಯೋಜನೆಗಳಾಗಿಯೇ ಉಳಿಯದೆ ಕಾರ್ಯ ರೂಪದಲ್ಲಿ ತರಬೇಕು.

ನಮ್ಮ ಬಿಜಾಪೂರ ಜಿಲ್ಲೆಯ ಮಟ್ಟಿಗೆ ಹೇಳಬೇಕಾದರೆ ನಮ್ಮ ಜಿಲ್ಲೆಯು ಮೇಲಿಂದ ಮೇಲೆ ದುಷ್ಕಾಳದಿಂದ ಪೀಡಿತವಾದುದಾಗಿದೆ. ಈ ವರ್ಷದ ಬಜೆಟ್ಟಿನಲ್ಲಿ ನಮ್ಮ ಜಿಲ್ಲೆಯ ಬಗ್ಗೆ ವಿದ್ಯುಚ್ಛಕ್ತಿಗಾಗಿ ಕೇವಲ 22,14,134 ರೂಪಾಯಿ ಹಾಕಿದ್ದು ತೀರ ಕಡಿಮೆ ಹಣವಾಗಿದೆ. ದುಷ್ಕಾಳ ಬಿದ್ದಾಗ ಜನರ ಸಲುವಾಗಿ ಹಣ ಖರ್ಚು ಮಾಡುವುದಕ್ಕಿಂತ ಬಿಜಾಪೂರ ಜಿಲ್ಲೆಯ ಉತ್ತರ ಭಾಗದಲ್ಲಿ ಪೂರ್ಣ ಇಂಡಿ ಸಿಂದಗಿ, ವಿಜಾಪೂರ, ಬಾಗೇವಾಡಿ ತಾಲೂಕುಗಳ ಕೆಲ ಭಾಗಗಳಲ್ಲಿದ್ದ ಒಂದು ಸಾವಿರ ಬಾವಿಗಳ ಮಧ್ಯದಲ್ಲಿ ವಿದ್ಯುಚ್ಛಕ್ತಿಯನ್ನು ಉತ್ಪಾದಿಸಿ ಅಲ್ಲಿ ಉಪಯೋಗಿಸಲು ಅನುಕೂಲ ಮಾಡಿಕೊಟ್ಟರೆ ಅಹಾರ ಉತ್ಪಾದನೆ ವಿಶೇಷ ಸಹಾಯವಾಗುದು. ಕಾರಣ ವಿಜಾಪೂರ ಜಿಲ್ಲೆಯಲ್ಲಿ ವಿದ್ಯುಚ್ಛಕ್ತಿ ನಿರ್ಮಿಸಲಿಕ್ಕೆ ಬರುವ ಸ್ಥಳಗಳನ್ನು ತಜ್ಞ ಜನರಿಂದ ಶೋಧಿಸಿ, ವಿದ್ಯುಚ್ಛಕ್ತಿಯನ್ನು ಉತ್ಪಾದಿಸಿ ಆಹಾರ ಉತ್ಪತ್ತಿಗೆ ಸಹಾಯ ಮಾಡಲು P.W.D.ಯ ಮಾನ್ಯ ಮಂತ್ರಿಗಳಿಗೆ ವಿನಂತಿಸಿ ನನ್ನ ಮಾತನ್ನು ಮುಗಿಸುತ್ತೇನೆ.

## ಆಹಾರ ಧಾನ್ಯಗಳ ಮೇಲಿನ ಮಿತಿ ನಿಯಂತ್ರಣ ತೆಗೆಯಬೇಕು

22ನೇ ಆಗಸ್ಟ್ 1952

ಮಾನನೀಯ ಸಭಾಪತಿಗಳೇ, ಈ ಎರಡು ದಿನಗಳಿಂದಲೂ ಕಂಟ್ರೋಲ್ ತೆಗೆಯ ಬೇಕೋ ಬೇಡವೋ ಎಂಬ ಬಗ್ಗೆ ಸರಕಾರಿ ಪಕ್ಷದ, ವಿರೋಧಿ ಪಕ್ಷದ ಅನೇಕ ಮಾನ್ಯ ಸದಸ್ಯರು ವಿರೋಧವಾಗಿಯೂ ಅನುಕೂಲವಾಗಿಯೂ ಮಾತನಾಡಿರುವರು. ಅವರಲ್ಲಿ ಕಂಟ್ರೋಲ್ ತೆಗೆಯಬೇಕೆಂಬ ಅಭಿಪ್ರಾಯವನ್ನು ಸಮರ್ಥಿಸಿದವರೇ ಹೆಚ್ಚು ಜನ. ಹಳ್ಳಿಗರ ಅಂತಃಕರಣಗಳನ್ನು ಅರಿತವರು ನಿಯಂತ್ರಣವನ್ನು ಸಮರ್ಥಿಸಲಾರರು. ನಿಯಂತ್ರಣವನ್ನು ಯಾವ ರೈತನೂ ಆಪೇಕ್ಷಿಸಲಾರನು. ನಿಯಂತ್ರಣದ ಸಲುವಾಗಿ ರೈತನು ಸರಕಾರವನ್ನು ಕಾಕದೃಷ್ಟಿಯಿಂದ ನೋಡುವನೆಂಬುದನ್ನು ಹಳ್ಳಿಗರ ಹೃದಯ ಬಲ್ಲ ನಾನು ಸ್ಪಷ್ಟವಾಗಿ ಹೇಳಬಲ್ಲೆನು. ರೈತನಿಗೆ ತನ್ನ ಕುಟುಂಬದ ಅನ್ನದ ವ್ಯವಸ್ಥೆಯ ಜವಾಬ್ದಾರಿ ಇದ್ದರೆ ಸರಕಾರಕ್ಕೆ ರಾಜ್ಯದ ಸಮಸ್ತ ಜನತೆಗೆ ಅನ್ನ ಪೂರೈಸುವ ಜವಾಬ್ದಾರಿಯಿದ್ದದ್ದು ನಾನು ಬಲ್ಲೆ. ಮುಂಬಯಿ ರಾಜ್ಯಕ್ಕೆ ೮-೧೦ ಲಕ್ಷ ಟನ್ ಅನ್ನ ತುಟಾಗ್ರತೆಯಿದ್ದರೆ ಮುಂಬಯಿ ರಾಜ್ಯದಿಂದ ಪರ ಪ್ರಾಂತಕ್ಕೆ ಅರಿವೆ ಮೊದಲಾದವನ್ನು ಕಳಿಸುವಂತೆ ಹೆಚ್ಚಾಗಿ

ಬೆಳೆಯುವ ಭಾಗದಿಂದ ಅನ್ನ ತರಿಸಿಕೊಡಲು ಮುಂಬಯಿ ಸರಕಾರವು ಹಿಂದೂಸ್ಥಾನ ಸರಕಾರಕ್ಕೆ ಒತ್ತಾಯಪಡಿಸಬೇಕು. ಸಪ್ಲಾಯ ಖಾತೆಯ ಸಲುವಾಗಿ ಖರ್ಚು ಮಾಡುವ ಕೋಟ್ಯಾವಧಿ ಹಣವನ್ನು ಆಹಾರ ಧಾನ್ಯದ ಹುಟ್ಟುವಳಿಯನ್ನು ಹೆಚ್ಚಿಸಲು ರೈತನಿಗೆ ಸಬ್ಸಿಡಿ ರೂಪದಿಂದ ಬಾವಿಗಳನ್ನು ಅಗಿಯಲು ಸಹಾಯ ಮಾಡಬೇಕು.

ಶ್ರೀಮಂತರು ಸ್ವತಂತ್ರವಾಗಿ ತಮ್ಮ ಕಲ್ಯಾಣ ತಾವು ಮಾಡಿಕೊಳ್ಳಬಲ್ಲರು. ಕೂಲಿಕಾರರು ಸಂಘಟನೆಯಿಂದ ತಮ್ಮ ಅಡಚಣೆ ದೂರಮಾಡಿಕೊಳ್ಳಲು ಪ್ರಯತ್ನಿಸುವವರು. ಆದರೆ ರೈತನ ಸ್ಥಿತಿ ಮಾತ್ರ ತಾಯಿತಂದೆಯಿಲ್ಲದ ಪರದೇಶಿ ಕೂಸಿನಂತಾಗಿದೆ. ಶಹರ ವಾಸಿಗಳು ನಿಯಂತ್ರಣವನ್ನು ಅಪೇಕ್ಷಿಸಬಹುದು. ಮುಂಬಯಿ ರಾಜ್ಯದಲ್ಲಿ ಶಹರುಗಳು ಬೆರಳಿನ ಮೇಲೆ ಎಣಿಸುವಷ್ಟಿದ್ದರೆ ಹಳ್ಳಿಗಳು ಲಕ್ಷಾವಧಿ ಇರುತ್ತವೆ. ಜನತೆಯಿಂದ ನಿರ್ಮಿತವಾದ ಜನತಾ ಸರಕಾರವು ಜನದ ಮನದ ಬಯಕೆಯಾದ ನಿಯಂತ್ರಣವನ್ನು ತೀವ್ರ ತೆಗೆಯಬೇಕು. ನಿಯಂತ್ರಣ ತೆಗೆಯುವುದರಿಂದ ವ್ಯಾಪಾರಸ್ಥರ ಲಾಭಬಡುಕುತನದಿಂದ ಧಾರಣೆ ಏರುತ್ತವೆಂದು ಕೆಲ ಮಾನ್ಯ ಸದಸ್ಯರಿಗೆ ಸಂಶಯವಿದೆ. ಮುಂಬಯಿ ರಾಜ್ಯದಲ್ಲಿ ಒಬ್ಬನೇ ವ್ಯಾಪಾರಿ ಇರದೆ ಅನೇಕ ವ್ಯಾಪಾರಿಗಳು ಸ್ಪರ್ಧೆಮಾಡಿ ಧಾರಣೆ ಇಳಿಸುತ್ತಾರೆ.

ಬ್ಲಾಕ್ ಮಾರ್ಕೆಟ ಬಂದು ಮಾಡುವ ಸಲುವಾಗಿ ಸರಕಾರವು ಸತತ ಪ್ರಯತ್ನಿಸಿದರೂ ಸಂಪೂರ್ಣವಾಗಿ ಸಾಧ್ಯವಾಗಿಲ್ಲವೆಂದು ಪ್ರಾಮಾಣಿಕತನದಿಂದ ಒಪ್ಪಬೇಕಾಗುವುದು. ನಿಯಂತ್ರಣ ಬರುವ ಮೊದಲು ಬ್ಲಾಕ್ ಮಾರ್ಕೆಟ ಶಬ್ದದ ಪರಿಚಯವಿರಲಿಲ್ಲ. ಕಳ್ಳಪೇಟೆಯ ತಾಯಿಯೆಂದರೆ ನಿಯಂತ್ರಣವು. ನಿಯಂತ್ರಣದಿಂದ ವ್ಯಾಪಾರಸ್ಥರಲ್ಲಿ ಜನತೆಯಲ್ಲಿ ಬ್ಲಾಕ್ ಮಾರ್ಕೆಟ್ ಮಾಡುವ ವ್ಯಕ್ತಿ ಮೈಯುಂಡಿದೆ. ಸದಾ ಧಾನ್ಯದ ಅಭಾವವಿದ್ದಲ್ಲಿ ಕಳ್ಳಪೇಟೆ ಉತ್ಪನ್ನವಾಗುವುದು ಸಹಜವಾಗಿದೆ. ಅಚಾರಿ ಮನುಷ್ಯನಿಗೆ ನೆಳ್ಳ ಬೇಡವೆಂದರೆ ಹೇಗೆ ಸಾಧ್ಯ?

ಹಿಂದೂಸ್ಥಾನದ ಎಲ್ಲ ಪ್ರಾಂತದ ರಾಜ್ಯಕಾರಭಾರವು ಒಂದೇ ಧೋರಣೆಯುಳ್ಳದ್ದಿರುವುದು ಅವಶ್ಯವಿದೆ. ಮದ್ರಾಸ್ ಪ್ರಾಂತದ ಹಳ್ಳಿಗರು ನಿಯಂತ್ರಣದಿಂದ ಮುಕ್ತವಾಗಿರುವಾಗ ಅವನ ನೆರೆಹಳ್ಳಿಯ ಮುಂಬಯಿ ರಾಜ್ಯದ ನಾಗರಿಕನು ನಿಯಂತ್ರಣದ ಕೆಳಗಿರುವುದು ವಿಹಿತವಲ್ಲ. ಸರಕಾರಕ್ಕೆ ಹೆಚ್ಚು ಆಹಾರಧಾನ್ಯ ಬೇಕಾಗಿದ್ದಲ್ಲಿ ನಿಯಂತ್ರಣದ ಉಸಾಬರಿ ಮಾಡದೆ, ರೈತನಿಗೆ ಬಾವಿ ತಗಿಸಲು ಸಬ್ಸಿಡಿ, ತಗಾಯಿ ರೂಪದಿಂದ ಸಹಾಯ ಮಾಡಬೇಕು. ಆಹಾರ ಉತ್ಪತ್ತಿಗೆ ಅಡಚಣೆ ಮಾಡಿರುವ ಭೂಮಿಯಲ್ಲಿಯ ಕರಿಕೆ ತೆಗೆಯಲು ಟ್ರ್ಯಾಕ್ಟರ ಮೊದಲಾದ ಯಾಂತ್ರಿಕ ಸಾಮಗ್ರಿಗಳನ್ನು ಒದಗಿಸಿಕೊಡಬೇಕು. ದುಷ್ಕಾಳದ ತವರು ಮನೆಯಿಂದ ವಿಜಾಪೂರ ಜಿಲ್ಲೆಯಂತ ಭಾಗಗಳಲ್ಲಿ ಬಂಡಿಂಗ ಪ್ರಾರಂಭಮಾಡಬೇಕು. ಹತ್ತಿ,

ಶೇಂಗಾ ಮೊದಲಾದ ಪದಾರ್ಥಗಳಿಗಿಂತ ಅನ್ನ ಧಾನ್ಯದ ಮಾಲಿಗೆ ಹೆಚ್ಚಿಗೆ ಧಾರಣೆ ಸಿಗುವಂತೆ ವ್ಯವಸ್ಥೆ ಮಾಡಬೇಕು. ರೈತನ ಒಕ್ಕಲುತನಕ್ಕೆ ಬೇಕಾಗುವ ಪತ್ರೆ, ಸಿಮೆಂಟು, ಕಬ್ಬಿಣ ಸಾಕಷ್ಟು ಸಿಗಬೇಕು.

ಸರಕಾರಕ್ಕೆ ರೈತನ ಉನ್ನತಿಗಾಗಿ ಬಹಳ ಮಾಡುವ ಇಚ್ಛೆಯಿಲ್ಲದಿದ್ದರೂ ಮುಂಬಯಿ ರಾಜ್ಯದ ಆರ್ಥಿಕ ಮುಗ್ಗಟ್ಟಿನ ಮೂಲಕ ಸರಕಾರದ ಆಶೆ ಪೂರೈಸುವುದಾಗಿದೆ ಎಂಬುದು ನನಗೆ ಗೊತ್ತಿದ್ದರೂ ಎಲ್ಲರನ್ನೂ ಸಾಕಿ ಸಲಹುವ ರೈತನ ಸಲುವಾಗಿ ಉಳಿದ ಕೆಲವು ವಿಷಯದ ಖರ್ಚನ್ನು ಕಡಿಮೆ ಮಾಡಿಯಾದರೂ ರೈತನಿಗೆ ಸಹಾಯ ಮಾಡಬೇಕು.

ನಿಯಂತ್ರಣದಿಂದ ವ್ಯಾಪಾರಿಗಳಲ್ಲಿ ರೈತರಲ್ಲಿ ಕಳ್ಳತನ, ಕಪಟತನ ಸೇರಿಕೊಂಡಿವೆ. ಲೇವ್ಹಿ ಕೊಟ್ಟ ನಂತರ ರೈತನು ತನ್ನ ಮಾಲನ್ನು ಲಂಚಕೊಟ್ಟು ಹೆಚ್ಚಿಗೆ ಹಣಬರುವ ಸ್ಥಳದಲ್ಲಿ ಮಾರಲುದ್ಯುಕ್ತನಾಗುತ್ತಾನೆ. ಕಳ್ಳ ಸಾಗಾಟದಿಂದ ಮಾರುವವರನ್ನು ಜನರು ತಿರಸ್ಕಾರದಿಂದ ನೋಡುವುದಿಲ್ಲ. ನಿಯಂತ್ರಣದಿಂದ ಆಹಾರ ಧಾನ್ಯದ ಸಲುವಾಗಿ ಸರಕಾರದ ಕಡೆಗೆ ಮೋರೆ ನೋಡುತ್ತಾ ಕೂಡ್ರುವ ಪರಾವಲಂಬನ ವೃತ್ತಿ ಜನತೆಯಲ್ಲಿ ಬೆಳೆದಿದೆ. ಹಣವಿದ್ದರೂ ಸಹ ಉತ್ತಮ ಮಾಲು ದೊರಕಿಸಲು ಅಡಚಣೆಯಾಗಿದೆ. ನಿಯಂತ್ರಣವು ಕೆಲವರಿಗೆ ಲಂಚ ದೊರಕಿಸಿ ಕೊಡುವ ಸಾಧನವಾಗಿದೆ.

ಇನ್ನೊಂದು ಮಾತು ಎಂದರೆ ದೇಶದಲ್ಲಿ ಜನಸಂಖ್ಯೆಯು ದಿನೇ ದಿನೇ ವಿಶೇಷವಾಗಿ ಬೆಳೆಯುತ್ತಾ ನಡೆದದ್ದು ದುರ್ದೈವದ ಸಂಗತಿಯಾಗಿದೆ. ಜನತೆಯ ಉತ್ಪತ್ತಿಗೂ ಅನ್ನ ಧಾನ್ಯದ ಹುಟ್ಟುವಳಿಗೂ ಮೇಳವಿರಬೇಕು. ಇಲ್ಲವಾದರೆ ಅಶಾಂತತೆಯು ಹುಟ್ಟುವುದು ಅಹಜ. ಇನ್ನು ಮೇಲೆ ರೈತರಾದರೂ ಸರಕಾರದ ಕಡೆಗೆ ಮೋರೆ ನೋಡುತ್ತ ಕೂಡ್ರದೆ ಸ್ವಾವಲಂಬಿಗಳಾಗಿ ಹೆಚ್ಚು ಆಹಾರ ಧಾನ್ಯ ಬೆಳೆಸಿ ಸರಕಾರಕ್ಕೆ ಶಹರವಾಸಿ ಬಂಧುಗಳಿಗೆ ಸಹಾಯ ಮಾಡುವುದು ಅವಶ್ಯವಿದೆ.

ಪಾರತಂತ್ರದ ಇಂದ್ರ ಭುವನಕ್ಕಿಂತ ಸ್ವಾತಂತ್ರ್ಯದ ಗುಡಿಸಲು ಲೇಸಾದ ಮಾತು. ಆದ್ದರಿಂದ ಜನರು ಸ್ವಲ್ಪು ತುಟ್ಟಿಯಾದರೂ ಅಡ್ಡಿಯಿಲ್ಲ. ಕಿಂಚಿತ್ ಅಡಚಣೆಯಾದರೂ ಅಡ್ಡಿಯಿಲ್ಲ, ನಿಯಂತ್ರಣ ಬೇಡವೆನ್ನುತ್ತಾರೆ. ರೈತನು ಕಂಟ್ರೋಲ್‌ದಿಂದ ಕಬ್ಬಿಣ, ಸಿಮೆಂಟು ಮೊದಲಾದವುಗಳನ್ನು ದೊರಕಿಸಲು ಆಗದ ಕಷ್ಟಕ್ಕೆ ಬೇಸತ್ತು ಹೆಚ್ಚು ಹಣ ಕೊಟ್ಟು ತರುತ್ತಾನೆ. ಸಕ್ಕರೆಯ ನಿಯಂತ್ರಣವು ಪ್ರತಿಯೊಂದು ಹಳ್ಳಿಯಲ್ಲಿ ದುಫಳಿ ಮಾಡಲು ಸಹಾಯ ಮಾಡಿತು. ಆದ್ದರಿಂದ ಸರಕಾರವು ಕಂಟ್ರೋಲವನ್ನು ತೆಗೆಯಬೇಕು ಅಂಕಿಸಂಖ್ಯೆಗಳಿಂದ ವಿಚಾರ ಮಾಡಲಾಗಿ ಅಸಾಧ್ಯವೆನಿಸಿದಲ್ಲಿ ಕೆಲಮಟ್ಟಿಗೆ ಶೀಥಿಲ ಮಾಡಲೇಬೇಕು.

ಕೊನೆಯದಾಗಿ ಮುಂಬಯಿ ಸರಕಾರವು ಪುಣೆ, ಮುಂಬಯಿ, ಅಹಮ್ಮದಾಬಾದ, ಸೊಲ್ಲಾಪುರ ಮೊದಲಾದ ದೊಡ್ಡ ಶಹರುಗಳ ಸಲುವಾಗಿ ಬೇಕಾಗುವ ಆಹಾರ ಧಾನ್ಯದ ಬಗ್ಗೆ ಹಿಂದೂಸ್ಥಾನ ಸರಕಾರದ ಸಹಾಯದಿಂದ ದೊರೆತ ಧಾನ್ಯಕ್ಕಿಂತ ಹೆಚ್ಚಿಗೆ ಬೇಕಾಗುವಷ್ಟು ಧಾನ್ಯವನ್ನು ಲೇವ್ಹಿ ರೂಪದಿಂದ ವಸೂಲ ಮಾಡಿದ ಬಳಿಕ ಉಳಿದ ಧಾನ್ಯವನ್ನು ಮಾರಲು ರೈತನಿಗೆ ಮುಕ್ತತೆ ಇರಬೇಕು. ಜರೂರುಬಿದ್ದಲ್ಲಿ ಆಹಾರ ಧಾನ್ಯದ ಸಾಗಾಟಕ್ಕೆ ಜಿಲ್ಹಾಬಂದಿ ಮಾಡಬಹುದೆಂದು ಹೇಳಿ ಈ ಠರಾವಿಗೆ ಅನುಮೋದಿಸಿ ತೀವ್ರವಾಗಿ ಕಂಟ್ರೋಲ್‌ವನ್ನು ತೆಗೆಯುವಂತೆ ಮಾಡಬೇಕೆಂದು ಸರಕಾರಕ್ಕೆ ವಿನಂತಿಸಿ ನನ್ನ ಮಾತನ್ನು ಮುಗಿಸುತ್ತೇನೆ.

## ವಿಜಾಪೂರ ಜಿಲ್ಲೆಯ ಬರಗಾಲ ಸ್ಥಿತಿ

24ನೇ ಫೆಬ್ರವರಿ 1953

ಸನ್ಮಾನ್ಯ ಸಭಾಪತಿಗಳೇ, ಈ ದಿವಸ ಪೂರಕ ಬೇಡಿಕೆಯ ಬಗ್ಗೆ ಮಾನ್ಯ ಸದಸ್ಯರಾದ ಶ್ರೀ ದತ್ತಾ ದೇಶಮುಖರು ತಂದಿರುವ ಕಡಿತದ ಸೂಚನೆಗೆ ವಿರೋಧ ಮಾಡುವುದಕ್ಕಾಗಿ ನಾನು ನಿಂತಿರುವೆನು. ಈ ಕಡಿತದ ಸೂಚನೆಯ ಮೇಲೆ ಈ ಮೊದಲೇ ಅನೇಕ ಸದಸ್ಯರು ಮಾತನಾಡಿ ಅನುಕೂಲವಾಗಿ ಇಲ್ಲವೆ ಪ್ರತಿಕೂಲವಾಗಿ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಒಂದೆರಡು ವಿಷಯಗಳ ಬಗ್ಗೆ ಅಷ್ಟೇ ನನ್ನ ವಿಚಾರಗಳನ್ನು ಈ ಸಭೇಗೆ ತಿಳಿಸಬೇಕೆಂದು ಮಾಡಿದ್ದೇನೆ. ಬರಗಾಲ ನಿವಾರಣೋಪಾಯದ ಮೇಲೆ ಅಭಿಪ್ರಾಯವನ್ನು ವ್ಯಕ್ತಪಡಿಸುವಾಗ, ನಮ್ಮ ಸರಕಾರದವರು ಕೈಕೊಂಡಿರುವ ಕೆಲಸಗಳು ಯೋಗ್ಯವಾಗಿಲ್ಲವೆಂದು ಕೆಲವು ಸದಸ್ಯರು ಸರಕಾರದ ಮೇಲೆ ಅಪಾದನೆ ಮಾಡಿರುವರು. ಅವರವರ ಭಿನ್ನಭಿನ್ನವಾದ ದೃಷ್ಟಿಕೋನವೇ ಇಂಥ ಅಪಾದನೆಗೆ ಮುಖ್ಯ ಕಾರಣವಾಗಿದೆ. ನಾನು ವಿಜಾಪೂರ ಜಿಲ್ಹೆಯ ಪ್ರತಿನಿಧಿಯಾಗಿರುವುದರಿಂದ ನಮ್ಮ ಜಿಲ್ಲೆಯಲ್ಲಿಯ ಬರಗಾಲದ ನಿಜವಾದ ಪರಿಸ್ಥಿತಿಯ ಅನುಭವ ನನಗೆ ಸಂಪೂರ್ಣವಾಗಿ ಗೊತ್ತಿದೆ. ಮೇಲಿಂದ ಮೇಲೆ ಬರಗಾಲ ಬೀಳುವದರಲ್ಲಿ ವಿಜಾಪೂರ ಜಿಲ್ಲೆಯು ಪ್ರಸಿದ್ಧವಿದ್ದು ಅದರ ನಂಬರು ಮೇಲೆ ಅದೆ. ಇದು ಅತ್ಯಂತ ದುರ್ದೈವದ ಸಂಗತಿಯಾಗಿದೆಯೆಂದು ಹೇಳಬೇಕಾಗುತ್ತದೆ.

ವಿಜಾಪೂರ ಜಿಲ್ಲೆಯಲ್ಲಿ ಬರಗಾಲ ಬೀಳುವದರ ಬಗ್ಗೆ ಹೇಳುವುದಾದರೆ ಕಳೆದ ೭೦ ವರ್ಷಗಳಲ್ಲಿ ೨೬ ಸಾರೆ ಭೀಕರ ಬರಗಾಲ ಬಿದ್ದಿದೆ. ಈ ಮೊದಲು ಅನೇಕ ಸಲ ಬರಗಾಲ ಪರಿಹಾರದ ಕೆಲಸವನ್ನು ಹಿಂದಿನ ಸರಕಾರದವರು

ಮಾಡಿದ್ದಾರೆ. ಆದರೆ ಈ ವರ್ಷ ನಮ್ಮ ಸರಕಾರವು ಪರಿಹಾರದ ಕೆಲಸವನ್ನು ಇಷ್ಟು ತೀವ್ರವಾಗಿ ಕೈಗೊಂಡಷ್ಟು ಇನ್ನಾವ ಸರಕಾರವೂ ಪರಿಹಾರದ ಕೆಲಸವನ್ನು ಈ ಮೊದಲು ಮಾಡಿರುವುದಿಲ್ಲ. ಕಳೆದ ವರ್ಷ ಅಸೆಂಬ್ಲಿಯ ಪೂನಾ ಅಧಿವೇಶನವು ಮುಗಿದ ಕೂಡಲೇ ವಿಜಾಪೂರ ಜಿಲ್ಹೆಯ ಎಲ್ಲ ಸದಸ್ಯರೂ, ಅಧಿಕಾರಿಗಳೂ ವಿಜಾಪೂರ ಜಿಲ್ಹೆಯ ಭೀಕರ ಪರಿಸ್ಥಿತಿಯನ್ನು ಬಂದು ನೋಡಿಕೊಂಡು ಹೋಗಬೇಕೆಂದು ಮಂತ್ರಿಯವರಿಗೆ ವಿನಂತಿ ಮಾಡಿಕೊಳ್ಳಲು. ನಮ್ಮ ಜಿಲ್ಲೆಯಲ್ಲಿಯ ಪ್ರತ್ಯಕ್ಷ ಪರಿಸ್ಥಿತಿಯನ್ನು ನಿರೀಕ್ಷಿಸುವುದಕ್ಕಾಗಿ ಕಂದಾಯ ಮಂತ್ರಿಗಳಾದ ಮಾನ್ಯ ಶ್ರೀ ಹಿರೆಯವರು, ಶ್ರೀ ಚವ್ಹಾಣರವರು, ಉಪಮಂತ್ರಿಗಳಾದ ಶ್ರೀ ಜತ್ತಿ, ಶ್ರೀ ಕೆ.ಎಫ್.ಪಾಟೀಲ ಮತ್ತು ಶ್ರೀಮತಿ ನಿರ್ಮಲಾದೇವಿ ಭೋಸಲೆಯವರು ಮತ್ತು ಅದರಂತೆಯೇ ಯೋಜನಾ ಆಯೋಗದ ಸದಸ್ಯರಾದ ಶ್ರೀಮತಿ ದುರ್ಗಾಬಾಯಿ ದೇಶಮುಖ ಮುಂತಾದವರು ವಿಜಾಪೂರ ಜಿಲ್ಹೆಗೆ ಬಂದು ಬರಗಾಲ ಪೀಡಿತ ಭಾಗಗಳಲ್ಲಿ ಸಂಚಾರ ಮಾಡಿ ಪರಿಸ್ಥಿತಿಯನ್ನು ನೋಡಿಕೊಂಡು ಹೋದುದು ಬಹಳ ಅಭಿನಂದನೀಯವಾದ ಸಂಗತಿಯಾಗಿದೆ. ಇದಲ್ಲದೆ ಕೇಂದ್ರ ಸರಕಾರದಿಂದ ನೇಮಕವಾದ ಶ್ರೀ ರಾಮಮೂರ್ತಿ ಕಮೀಟಿಯವರು ಸಹ ವಿಜಾಪೂರ ಜಿಲ್ಹೆಗೆ ಬಂದು ನೋಡಿಕೊಂಡು ಹೋದುದ್ದಾಗಿದೆ. ಬರಗಾಲ ಪೀಡಿತ ಭಾಗದಲ್ಲಿ ಸರಕಾರದವರು ಪರಿಹಾರ ಕೆಲಸವನ್ನು ಅಲ್ಲಿ ಪ್ರಾರಂಭಿಸಿ ಜನರಿಗೆ ದುಡಿಯಲು ಕೆಲಸವನ್ನು ಒದಗಿಸಿಕೊಟ್ಟು ಕೂಲಿ ಸಿಗುವಂತೆ ಮಾಡಿದುದು. ಆಹಾರ ಧಾನ್ಯ ಪೂರೈಸುವ ವ್ಯವಸ್ಥೆ, ಔಷಧ ದೊರೆಯುವಂತೆ ಮಾಡಿದುದು, ಕುಡಿಯುವ ನೀರಿನ ವ್ಯವಸ್ಥೆ ಮುಂತಾದ ಕೆಲಸಗಳನ್ನು ಬಹಳ ಉತ್ತಮ ರೀತಿಯಿಂದ ಮಾಡಿದ್ದಾರೆ. ಈಗ ಮಾಡಿದ್ದು ಅಷ್ಟೇ ಸಾಲದು. ಇನ್ನೂ ಹೆಚ್ಚಿಗೆ ಮಾಡುವ ಅವಶ್ಯಕತೆಯಿದೆ. ವಿಜಾಪೂರ, ಸೊಲ್ಲಾಪುರ ನಗರ ಮೊದಲಾದ ಜಿಲ್ಹೆಗಳಲ್ಲಿ ಶಾಶ್ವತವಾಗಿ ಬರಗಾಲ ನಿವಾರಣೆಯಾಗುವುದರ ಸಲುವಾಗಿ ಒಂದು ಯೋಜನೆಯನ್ನು ಮಾಡಿ ಬರಗಾಲ ಸಮಸ್ಯೆಯನ್ನು ಖಾಯಂ ಆಗಿ ಬಿಡಿಸುವಂತೆ ಮಾಡುವುದು ಅವಶ್ಯವಾಗಿದೆ. ಯಾಕಂದರೆ ಸರಕಾರದವರು ಎಷ್ಟು ಕಾಳಜಿಪೂರ್ವಕವಾಗಿ ನಿವಾರಣೋಪಾಯದ ಯೋಜನೆಗಳನ್ನು ಕೈಕೊಂಡರೂ ಅವೆಲ್ಲವೂ ತಾತ್ಪೂರ್ತಿಕ ಯೋಜನೆಗಳಾಗಿವೇ ಹೊರತು ಖಾಯಂ ಸ್ವರೂಪದ ಯೋಜನೆಗಳಾಗಿಲ್ಲ. ಯಾವುದಾದರೂ ಒಂದು ದೊಡ್ಡ ನೀರಾವರಿ ಯೋಜನೆಯನ್ನು ಕೈಕೊಂಡು ಇನ್ನು ಮುಂದೆ ಮತ್ತೆ ಇಂಥ ವಿಶೇಷ ಅಸ್ಥೆಯಿಂದ ವಿಚಾರ ಮಾಡಿ ಶಾಶ್ವತವಾಗಿ ಬರಗಾಲ ನಿವಾರಣೆಯ ಯೋಜನೆಯ ಬಗ್ಗೆ ತೀವ್ರವಾಗಿ ಪರಿಶೀಲನೆ ನಡೆಸಬೇಕೆಂದು ಪ್ರಾರ್ಥಿಸುವೆ.

ನಮ್ಮ ಕರ್ನಾಟಕದಲ್ಲಿಯ ಘಟಪ್ರಭಾ ಯೋಜನೆಯಿಂದ ವಿಜಾಪೂರ ಜಿಲ್ಹೆಯ ಕೆಲವು ಭಾಗಕ್ಕೆ ಉಪಯೋಗವಾಗುವುದರಿಂದ ಈ ಯೋಜನೆಯನ್ನು ತೀವ್ರವಾಗಿ ಪೂರ್ತಿಗೊಳಿಸುವಂತೆ ಮಾಡಬೇಕು. ವಿಜಾಪೂರ ಜಿಲ್ಹೆಯಲ್ಲಿ ದೊಡ್ಡ ಹೊಳೆಗಳು ಹರಿಯುತ್ತಿದ್ದರೂ ಅವುಗಳ ಉಪಯೋಗ ಸಾಕಷ್ಟು ಆಗಿಲ್ಲ. ಚಿಕ್ಕ ಅಥವಾ ದೊಡ್ಡ ನೀರಾವರಿ ಯೋಜನೆಯಿಂದ ಈ ನದಿಗಳಲ್ಲಿ ಹರಿದು ಹೋಗುವ ನೀರಿನ ಉಪಯೋಗವಾಗುವಂತೆ ಇದೆ. ವಿಜಾಪೂರ ಜಿಲ್ಹೆಯ ಭೂಮಿಯು ಫಲವತ್ತಾದದ್ದಾಗಿದೆ. ನೀರಾವರಿ ಯೋಜನೆಯಾದಲ್ಲಿ ೪ ಚೀಲ ಧಾನ್ಯ ಬೆಳೆಯುವ ಭೂಮಿಯಲ್ಲಿ ೪೦ ಚೀಲ ಧಾನ್ಯ ಬೆಳೆಯಬಹುದು. ವಿಜಾಪೂರ, ಸೊಲ್ಲಾಪೂರ, ಅಹ್ಮದ್‌ನಗರ ಜಿಲ್ಹೆಗಳ ಸಲುವಾಗಿ ಒಂದು ಯೋಜನೆಯನ್ನು ತಯಾರಿಸಿ ೫ ವರ್ಷಗಳಲ್ಲಿ ಅದು ಪೂರ್ತಿಯಾಗುವಂತೆ ಮಾಡುವುದು ಮುಂಬಯಿ ಸರಕಾರದವರ ಆದ್ಯ ಕರ್ತವ್ಯವಾಗಿದೆಯೆಂದು ಹೇಳದಿರಲಾರೆನು. ಮೇಲಿಂದ ಮೇಲೆ ದುಷ್ಕಾಳ ಪೀಡಿತವಾಗುವ ಪ್ರದೇಶದಲ್ಲಿಯ ಜನರ ಕಠಿಣ ಪರಿಸ್ಥಿತಿಯು ನೆನಪಾದರೆ ಕಣ್ಣೀರುದುರುತ್ತವೆ. ಈ ಪರಿಸ್ಥಿತಿಯನ್ನು ಮಾನ್ಯ ಶ್ರೀಹಿರೆಯವರು, ಶ್ರೀ ಜತ್ತಿ, ಶ್ರೀ ಪಾಟೀಲ ಮೊದಲಾದ ಧುರೀಣರು ಪ್ರತ್ಯಕ್ಷ ನೋಡಿದ್ದಾರೆ. ಪ್ಲಾನಿಂಗ್ ಕಮಿಶನ್‌ದ ಸದಸ್ಯರಾದ ಶ್ರೀಮತಿ ದುರ್ಗಾಬಾಯಿಯವರು ಅಲ್ಲಿಯ ಪರಿಸ್ಥಿತಿಯನ್ನು ಕಂಡು ಬಹಳ ಕಳವಳಗೊಂಡಿದ್ದಾರೆ. ರಾಮಮೂರ್ತಿ ಕಮೀಟಿಯವರು ವಿಜಾಪೂರ ಜಿಲ್ಲೆಯ ದುಷ್ಕಾಳ ಪರಿಸ್ಥಿತಿಯನ್ನು ಶಾಶ್ವತವಾಗಿ ನಿವಾರಣೆ ಮಾಡುವಂತಹ ಒಂದು ಯೋಜನೆಯನ್ನು ಕೈಗೊಳ್ಳುವುದು ಅತ್ಯವಶ್ಯವೆಂದು ಅಭಿಪ್ರಾಯಪಟ್ಟಿದ್ದಾರೆ. ಚಿಕ್ಕ ಮತ್ತು ದೊಡ್ಡ ನೀರಾವರಿ ಯೋಜನೆಯ ಸಲುವಾಗಿ ಈ ವರ್ಷ ಮುಂಬಯಿ ಸರಕಾರದವರು ಹಣ ಮಂಜೂರು ಮಾಡಿದ್ದು ಕಡಿಮೆಯಾಗಿದೆ. ಆದಕಾರಣ ಹೆಚ್ಚು ಹಣ ಇಂಥ ಕೆಲಸಕ್ಕಾಗಿ ಮಂಜೂರು ಮಾಡುವುದು ಅವಶ್ಯವಿದೆ. ಕಂದಾಯ ಮಂತ್ರಿಗಳಾದ ಮಾನ್ಯ ಶ್ರೀ ಹಿರೆಯವರು ವಿಜಾಪೂರ ಜಿಲ್ಲಗೆ ಬಂದಾಗ ಬರಗಾಲದ ಭೀಕರ ಪರಿಸ್ಥಿತಿಯನ್ನು ನೋಡಿ ಬಹಳ ಕಳಕಳಿಯ ಮಾತುಗಳನ್ನು ಆಡಿದರು. ಶ್ರೀ ಹಿರೆಯವರ ವ್ಯಾಖ್ಯಾನ ಕೇಳಿ, ಉತ್ತಮ ಮಾತಾಡಿದರೆಂದು ಜನರು ಬಹಳ ಹೊಗಳಿದ್ದಾರೆ. ಬರಗಾಲ ಪರಿಹಾರದ ಬಗ್ಗೆ ಅವರಾಡಿದ ಕಳಕಳಿಯ ಮಾತಿನಂತೆ ಯೋಜನೆಗಳನ್ನು ಕೃತಿಯಲ್ಲಿ ತೀವ್ರವಾಗಿ ತಂದು, ನಮ್ಮ ಜಿಲ್ಹೆಯ ದುಷ್ಕಾಳಪೀಡಿತ ಜನರನ್ನು ಇನ್ನು ಮುಂದೆ ಇಂಥ ಭವಣೆಯಲ್ಲಿ ಇನ್ನೊಮ್ಮೆ ಸಿಗದಂತೆ ಮಾಡುವರೆಂದು ಆಶಿಸುತ್ತೇನೆ. ಆದಕಾರಣ ಶ್ರೀಹಿರೆಯವರು ತಾವಾಡಿದ ಮಾತುಗಳನ್ನು ಕೃತಿಯಲ್ಲಿ ಮಾಡಿತೋರಿಸುರೆಂದು ನಂಬಿದ್ದೇನೆ. ಇದರಂತೆಯೇ ಕನಿಕರದ ಮಾತುಗಳನ್ನು ಇದಕ್ಕೂ ಮೊದಲು ಎಷ್ಟೋ ಜವಾಬ್ದಾರಿ ಅಧಿಕಾರಿಗಳು ಆಡಿದ್ದಾರೆ. ಈ ತರದ ಮಾತುಗಳನ್ನು ಕೇಳಲಿಕ್ಕೆ ತಾತ್ಪೂರ್ತಿಕ ಆನಂದವಾಗುವುದರಿಂದ ಜನರಾದರೂ

ಹೊಗಳುವವರು.ಇಷ್ಟೇ ಪರಿಣಾಮವಾಗುವಂತಾಗಿದೆ. ಆಡಿದಂತೆ ಮಾಡಿ ತೋರಿಸಿ ಜನರ ದುಸ್ಥಿತಿಯನ್ನು ನಿವಾರಣೆ ಮಾಡುವರೆಂದು ಆಶಿಸುತ್ತೇನೆ. ನಮ್ಮ ಜಿಲ್ಹೆಯಲ್ಲಿ ದೊಡ್ಡ ಯೋಜನೆಯೊಂದನ್ನು ತೀವ್ರದಲ್ಲಿಯೇ ಕೈಕೊಂಡು ಬರಗಾಲ ನಿವಾರಣೆಯು ಖಾಯಂ ಆಗಿ ಆಗುವಂತೆ ಮಾಡಬೇಕೆಂದು ಮತ್ತೊಮ್ಮೆ ಸರಕಾರಕ್ಕೆ ಪ್ರಾರ್ಥಿಸಿ ನನ್ನ ಭಾಷಣ ಮುಗಿಸುತ್ತೇನೆ.

## ಮುಂಗಡ ಪತ್ರದ ಮೇಲಿನ ಚರ್ಚೆ

3ನೇ ಮಾರ್ಚ್ 1953

ಮಾನನೀಯ ಸಭಾಧ್ಯಕ್ಷರೇ, ಇಲ್ಲಿಯವರೆಗೆ ಮಾನ್ಯ ಸದಸ್ಯರು ಭಾಷಣ ಮಾಡಿ ನಮ್ಮ ಹಣಕಾಸಿನ ಮಂತ್ರಿಗಳವರು ಈ ಸಭೆಗೆ ಸಾದರ ಪಡಿಸಿದ ಮುಂಬಯಿ ರಾಜ್ಯದ ಈ ವರುಷದ ಮುಂಗಡ ಪತ್ರಿಕೆಯ ಮೇಲೆ ಅನುಕೂಲ ಇಲ್ಲವೆ ಪ್ರತಿಕೂಲವಾಗಿ ಮಾತನಾಡಿದ್ದಾರೆ. ಈ ಅಧಿವೇಶನದ ಪ್ರಾರಂಭದಲ್ಲಿ ಮಾಡಿದ ರಾಜ್ಯಪಾಲರ ಭಾಷಣದ ಸಲುವಾಗಿ ಅಭಿನಂದಿಸುವ ಠರಾವಿನ ಮೇಲೆ ಸರ್ವಸಾಧಾರಣವಾಗಿ ವಿರೋಧ ಪಕ್ಷದ ಸದಸ್ಯರು ಯಾವ ಪ್ರಕಾರವಾಗಿ ಮಾತನಾಡಿರುವರೋ ಅದೇ ರೀತಿಯಾಗಿ ಈ ಮುಂಗಡ ಪತ್ರಿಕೆಯ ಮೇಲೆ ಸಹ ಮಾತನಾಡಿದ್ದಾರೆಂದು ಹೇಳಬಹುದು. ವಿರೋಧಿ ಪಕ್ಷದ ಸದಸ್ಯರ ಭಾಷಣದಲ್ಲಿ ಯಾವ ಹೊಸ ಅಂಶವು ತೋರಿಬರುವುದಿಲ್ಲವೆಂದು ನನಗೆ ಅನಿಸುತ್ತದೆ. ಈಗಾಗಲೇ ಅನೇಕ ಸದಸ್ಯರು ನಮ್ಮ ಅರ್ಥಮಂತ್ರಿಯವರು ಸಾದರಪಡಿಸಿದ ಈ ವರುಷದ ಮುಂಗಡ ಪತ್ರಿಕೆಯ ಬಗ್ಗೆ ಅವರನ್ನು ಅಭಿನಂದಿಸಿದ್ದಾರೆ.

ಕಳೆದ ವರುಷ ಪೂನಾ ಅಧಿವೇಶನದಲ್ಲಿ ಈ ಸಭೆಗೆ ಸಾದರಪಡಿಸಿದ ಮುಂಗಡ ಪತ್ರಿಕೆಯು ಕೊರತೆಯದಾಗಿತ್ತು. ಆದರೆ ಈ ಅಧಿವೇಶನದಲ್ಲಿ ಮುಂದಿನ ವರ್ಷದ ಸಲುವಾಗಿ ಉಳಿತಾಯದ ಮುಂಗಡ ಪತ್ರಿಕೆಯನ್ನು ಸಾದರಪಡಿಸಿದ್ದು ಅತ್ಯಂತ ಅಭಿನಂದನೀಯವಾದ ಸಂಗತಿಯಾಗಿದೆ. ಬರುವ ವರ್ಷದಲ್ಲಿ ಯಾವುದೇ ಹೊಸ ಕರವನ್ನು ಜನತೆಯ ಮೇಲೆ ಹೇರಲಾಗಿಲ್ಲ. ಇಷ್ಟೇ ಅಲ್ಲದೆ ಈಗಿರುವ ಕರಭಾರವನ್ನು ಸಹ ಹೆಚ್ಚಿಸಲಾಗಿಲ್ಲ. ಆದ್ದರಿಂದ ವಿರೋಧಿ ಪಕ್ಷದ ಸದಸ್ಯರು ಸಹ ನಮ್ಮ ಮಾನ್ಯ ಮಂತ್ರಿಯವರನ್ನು ಅಭಿನಂದಿಸಿದ್ದಾರೆ. ಮುಂಬಯಿ ಸರಕಾರವು ಜನ ಕಲ್ಯಾಣಕ್ಕಾಗಿ ಈಗಾಗಲೇ ಕೈಕೊಂಡ ಅನೇಕ ಯೋಜನೆಗಳನ್ನು ಮುಂದೆ ನಡೆಸುವದೆಂದು ಭರವಸೆ ಕೊಟ್ಟಿದ್ದಾರೆ. ಮುಂಬಯಿ ಸರಕಾರವು ನಮ್ಮ ಈ ಪ್ರಾಂತದಲ್ಲಿ ಜನ ಕಲ್ಯಾಣ ರಾಜ್ಯ ಸ್ಥಾಪನೆಯಾಗುವಂತೆ ಸತತ ಪ್ರಯತ್ನ ಮಾಡಿದೆ.

ಸಾಧಾರಣವಾಗಿ ಈ ಜನ ಕಲ್ಯಾಣ ರಾಜ್ಯ ರಚನೆಯು ಪ್ರಯತ್ನವನ್ನು ಚೀನಾ ಮೊದಲಾದ ದೇಶದಲ್ಲಿಯ ಪರಿಸ್ಥಿತಿಯು ಬೇರೆ ಸ್ವರೂದ್ದಾಗಿದೆ. ಆದ್ದರಿಂದ ಹಾಗೆ ಹೋಲಿಸಿಕೊಂಡು ಟೀಕೆ ಮಾಡುವುದು ಯೋಗ್ಯವಾಗಲಾರದೆಂದು ನಾನು ತಿಳಿಯುತ್ತೇನೆ. ನಮ್ಮ ಪ್ರಾಂತದಲ್ಲಿ ಜನಕಲ್ಯಾಣ ರಾಜ್ಯ ಸ್ಥಾಪನೆಯ ಕಾರ್ಯವು ಯಾವ ರೀತಿಯಾಗಿ ಯಶಸ್ವಿಯಾಗಿದೆ ಎಂಬ ಬಗ್ಗೆ ನನಗೆ ತಿಳಿದ ಮಟ್ಟಿಗೆ ಒಂದೆರಡು ಸಂಗತಿಗಳನ್ನು ಈ ಸಭೆಗೆ ತಿಳಿಸಲಿಚ್ಛಿಸುತ್ತೇನೆ.

ಈ ಮುಂಗಡ ಪತ್ರಿಕೆಯನ್ನು ಕೇವಲ ಅವಲೋಕಿಸಿದ ಮಾತ್ರಕ್ಕೆ ಜನಕಲ್ಯಾಣ ರಾಜಸ್ಥಾಪನೆಯ ಉದ್ದೇಶವನ್ನು ಮುಂದಿಟ್ಟುಕೊಂಡು ಅದನ್ನು ತಯಾರಿಸಲಾಗಿದೆಯೆಂದು ಎಲ್ಲರೂ ಒಪ್ಪದೇ ಇರಲಾರರು. ಸಾಧಾರಣವಾಗಿ ಮುಂಬಯಿ ರಾಜ್ಯದಲ್ಲಿ ಆರೋಗ್ಯ ಖಾತೆಯ ಬಗ್ಗೆ ಮತ್ತು ಶಿಕ್ಷಣ ಖಾತೆಯ ಬಗ್ಗೆ ಹಣದ ಬೇಡಿಕೆಗಳನ್ನು ನೋಡಿದರೆ ಜನಕಲ್ಯಾಣ ಕಾರ್ಯದ ಗುರಿಯನ್ನು ಮುಟ್ಟುವುದಕ್ಕಾಗಿಯೇ ಇದೆಯೆಂದು ಎಲ್ಲರೂ ಒಪ್ಪಬೇಕಾಗುತ್ತದೆ. ಜನತೆಯ ಆರೋಗ್ಯ ರಕ್ಷಣೆಯ ಬಗ್ಗೆ ಸುಧಾರಣೆಗಳನ್ನು ಮಾಡಿದ್ದಾರೆ. ಸಮಾಜ ಸುಧಾರಣೆಯ ಬಗ್ಗೆ ಇನ್ನೂ ಹೆಚ್ಚು ಹಣ ಖರ್ಚು ಮಾಡಬೇಕೆಂದು ಕೆಲವರು ಸೂಚಿಸಿದ್ದಾರೆ. ಯಾವುದೇ ಮುಂಗಡ ಪತ್ರಿಕೆಯ ಮೇಲೆ ಟೀಕೆ ಮಾಡುವ ಮೊದಲು ಅದನ್ನು ಸಂಪೂರ್ಣವಾಗಿ ಅಭ್ಯಸಿಸಿ, ಪರಿಸ್ಥಿತಿಯನ್ನು ಲಕ್ಷ್ಯದಲ್ಲಿಟ್ಟುಕೊಂಡು ವಿಚಾರ ಮಾಡುವುದು ಅವಶ್ಯವಾಗಿದೆ. ಹಿಂದಿನ ಪರಿಸ್ಥಿತಿ ಮತ್ತು ಈಗಿರುವ ಪರಿಸ್ಥಿತಿಯಲ್ಲಿ ಬಹಳ ವ್ಯತ್ಯಾಸ ಉಂಟಾಗಿದೆ. ನಮ್ಮ ಅರ್ಥ ಮಂತ್ರಿಯವರು ಮುಂಬಯಿ ರಾಜ್ಯದ ಬರುವ ವರ್ಷದ ಮುಂಗಡ ಪತ್ರಿಕೆಯನ್ನು ಸಾದರಪಡಿಸುವ ಕಾಲಕ್ಕೆ ಮಾಡಿರುವ ಭಾಷಣದಲ್ಲಿ ಕೊಟ್ಟಿರುವ ಅಂಕಿ ಸಂಖ್ಯೆಗಳನ್ನು ಕೊಟ್ಟು ವಿವರಿಸಿದ ಸಂಗತಿಗಳನ್ನು ನೋಡಿದರೆ ನಮ್ಮ ಸರಕಾರದ ಮುಂದೆ ಅನೇಕ ಬಿಕ್ಕಟ್ಟಿನ ಪರಿಸ್ಥಿತಿಯು ಉಂಟಾಗಿರುವುದೆಂಬುದು ಕಂಡು ಬರುತ್ತದೆ. ಅವುಗಳಲ್ಲಿ ಅತಿ ಮುಖ್ಯವಾದುವೆಂದರೆ ನಮ್ಮ ಪ್ರಾಂತದಲ್ಲಿ ಉಂಟಾಗಿರುವ ದುಷ್ಕಾಳದ ಪರಿಸ್ಥಿತಿಯು ಗುಜರಾತ, ಮಹಾರಾಷ್ಟ್ರ ಮತ್ತು ಕರ್ನಾಟಕ ಭಾಗಗಳಲ್ಲಿ ದುಷ್ಕಾಳದ ಕಠಿಣ ಪರಿಸ್ಥಿತಿ ಇರುವುದೆಂಬುದನ್ನು ವಿರೋಧಿ ಪಕ್ಷದ ಸದಸ್ಯರು ಸಹ ಒಪ್ಪಲೇಬೇಕಾಗುತ್ತದೆ. ಇಂಥ ಕಠಿಣ ಪರಿಸ್ಥಿತಿಯನ್ನು ಎದುರಿಸಿ ಜನಹಿತವನ್ನು ಮಾಡಬೇಕಾಗಿದೆ.

ವಿರೋಧಿ ಪಕ್ಷದಲ್ಲಿಯ ಮಾನ್ಯ ಸದಸ್ಯರಾದ ಶ್ರೀ ಭರೂಚಾರವರು ಅಂತೂ ಪಾನಪ್ರತಿಬಂಧದ ಸಲುವಾಗಿ ಪ್ರತಿಸಾರೆ ಟೀಕಿಸುವಂತೆ ಈ ಸಲವೂ ಟೀಕಿಸಿರುತ್ತಾರೆ. ಪಾನಪ್ರತಿಬಂಧ ಕಾಯದೆಯು ಯಶಸ್ವಿಯಾಗಿಲ್ಲವೆಂದು ಅವರು ಅಂದಿರುವರು. ಆದರೆ ಅದು ಸಂಪೂರ್ಣವಾಗಿ ಯಶಸ್ವಿಯಾಗಿದೆ ಎಂದು ನಾನು

ಹೇಳುವೆನು. ಈ ಕಾಯುದೆಯು ಜಾರಿಯಲ್ಲಿ ಬಂದಂದಿನಿಂದ ಕುಡಿಯಲು ಶೆರೆ ಸಿಂದಿ ದೊರೆಯದಂತಾಗಲು ವ್ಯರ್ಥವಾಗಿ ಹಾಳಾಗುತ್ತಿದ್ದ ಹಣವನ್ನು ಬಡಜನರು ಅನ್ನ ವಸ್ತ್ರ ಮುಂತಾರ ಕಾರ್ಯಕ್ಕಾಗಿ ಉಯೋಗಿಸಿಕೊಳ್ಳುತ್ತಿರುವರು. ಬಡಜನರ ಸಂಸಾರವು ಸುಖದಿಂದ ಸಾಗಿದೆ. ಅವರ ನೈತಿಕ ಮಟ್ಟವು ಏರಿದೆ. ವಿಜಾಪೂರ ಜಿಲ್ಹೆಯಲ್ಲಿ ಶ್ರೀ ನಾಯಿಕ ಆ.ಖಕ ಯವರು ಬಂದ ಬಳಿಕ ನಮ್ಮ ಜಿಲ್ಹೆಯಲ್ಲಿ ಎಲ್ಲ ಒ.ಐ.೦., ಒ.ಐ.ಅ., ಒ.ಕ ಮತ್ತು ಶ್ರೀ ಅಂಗಡಿ ವಕೀಲ ಮೊದಲಾದವರು ಮತ್ತು ಕಾಂಗ್ರೆಸ್ಸೇತರರು ಕೂಡಿ ಯಶಸ್ವಿಮಾಡಿ ತೋರಿಸಿರುವರು. ಟೀಕಿಸುವುದಕ್ಕಿಂತ ಮಾಡಿದ ಉತ್ತಮ ಕಾರ್ಯಗಳನ್ನು ಶ್ಲಾಘಿಸಿ ಇನ್ನೂ ಮಾಡಬೇಕಾದವುಗಳನ್ನು ಸೂಚಿಸುವುದು ಸಯುಕ್ತಿಕ ಮಾರ್ಗವು.

ಇನ್ನು ಮುಂಬಯಿ ರಾಜ್ಯದಲ್ಲಿ ಮಾಡಿದ ಕಲ್ಯಾಣಕಾರಕ ಕೆಲಸಗಳ ಬಗ್ಗೆ ಕೆಲವು ಉದಾಹರಣೆಗಳನ್ನು ಕೊಡುತ್ತೇನೆ. ಆರೋಗ್ಯ ಖಾತೆಯುವರು ಅನೇಕ ಸುಧಾರಣೆಗಳನ್ನು ಮಾಡಿದ್ದಾರೆ. ಈ ರಾಜ್ಯದಲ್ಲಿ ಪ್ಲೇಗ್ ಇಲ್ಲದಂತಾಗಿದೆ. ಮಲೇರಿಯಾದ ಬಗ್ಗೆ ಬಹಳ ಕಾಳಜಿ ತೆಗೆದುಕೊಳ್ಳಲಾಗಿದೆ. ಜನರಿಗೆ ಕುರಿಯುವ ನೀರನ್ನು ಪೂರೈಸುವ ಬಗ್ಗೆ ಕಾಳಜಿ ತೆಗೆದುಕೊಳ್ಳಲಿಕ್ಕೆ ಪ್ರಾರಂಭಿಸಿರುವರು. ನನ್ನ ಭಾಗದಲ್ಲಿ ಚಬನೂರು ಜನರ ಬಹಳ ದಿವಸಗಳ ಅಡಚಣೆಯಾದ ಕುಡಿಯುವ ನೀರಿನ ಬಾವಿ ಮಂಜೂರು ಮಾಡಿರುವರು. ಆದರೆ ಮಾಡತಕ್ಕ ಕೆಲಸ ಇನ್ನೂ ಬಹಳವಾಗಿದೆ. ನನ್ನ ಭಾಗದಲ್ಲಿ ಭೈರವಾಡಗಿ ಜನರು ಬೇಸಿಗೆಯಲ್ಲಿ ಮೂರು ಮೈಲು ಅಂತರದ ಮೇಲಿಂದ ನೀರು ತರಬೇಕಾಗುತ್ತದೆ. ಬೇಸಿಗೆಯಲ್ಲಿ ಜನರು ಬಟ್ಟಲಿನಿಂದ ನೀರು ತುಂಬಬೇಕಾಗುತ್ತದೆ. ಕೆರುಟಗಿ, ಹಿಪ್ಪರಗಿ ಹಳ್ಳಿಗಳಲ್ಲಿ ಎಷ್ಟೋ ಲಮಾಣಿ ಮೊದಲಾದ ಜನರಿಗೆ ಕುಡಿಯುವ ನೀರಿನ ವ್ಯವಸ್ಥೆ ಮಾಡಬೇಕಾಗಿದೆ. ಕುಡಿಯುವ ನೀರಿನ ವ್ಯವಸ್ಥೆಯ ಬಗ್ಗೆ ಹೋದ ವರ್ಷದಷ್ಟೇ ಅಂದರೆ ಇಡೀ ಪ್ರಾಂತಕ್ಕೆ ೩೧ ಲಕ್ಷ ರೂಪಾಯಿ ಹಣ ಹಾಕಿದ್ದು ಇದು ತೀರ ಕಡಿಮೆಯಾಗುವುದು. ಹೆಚ್ಚಿಗೆ ಹಣ ಮಂಜೂರು ಮಾಡಬೇಕು.

ನಮ್ಮ ಮುಂಬಯಿ ರಾಜ್ಯದಲ್ಲಿ ೧೯೪೬ರಲ್ಲಿ ೫೬ ಕಾಲೇಜುಗಳಿದ್ದರೆ ಈಗ ೧೧೫ ಕಾಲೇಜುಗಳು ಆಗಿವೆ. ೬ ರಿಂದ ೧೧ ವಯಸ್ಸಿನ ೪೫ ಲಕ್ಷ ಹುಡುಗರು ೨೯ ಲಕ್ಷ ಚಿಕ್ಕ ಮಕ್ಕಳು ಶಾಲೆಗೆ ಹೋಗುತ್ತಾರೆ. ೧೯೪೬ನೇ ಇಸವಿಯಲ್ಲಿ ೪೧/೨ ಕೋಟಿ ರೂಪಾಯಿ ಶಿಕ್ಷಣ ಖಾತೆಗೆ ಖರ್ಚು ಬರುತ್ತಿದ್ದುದು ಈಗ ೧೩ ಕೋಟಿ ರೂಪಾಯಿಗಳವರೆಗೆ ತಲ್ಪಿದೆಯೆಂಬುದನ್ನು ಎಲ್ಲರೂ ಬಲ್ಲರು. ಹಳ್ಳಿಗಳಲ್ಲಿ ಅನೇಕ ಸ್ಥಳಗಳಲ್ಲಿ ಶಾಲಾ ಕಟ್ಟಡಗಳಿಲ್ಲ. ಗುಡಿಗುಂಡಾರಗಳಲ್ಲಿ ಕಲಿಯುವ ಮಕ್ಕಳು ಉತ್ತಮ ಶಾಲಾ ಇಮಾರಾತಿಯಲ್ಲಿ ಕುಳಿತು ಕಲಿಯುವಂತಾಗಬೇಕು.

ನಮ್ಮ ಜಿಲ್ಹೆಯಲ್ಲಿ ಶಿಂದಗಿ ತಾಲೂಕಿನಲ್ಲಿ ಕೌಜಗಿ ಮೊದಲಾದ ಲಮಾಣಿ ತಾಂಡೆಗಳಲ್ಲಿ ಸಹ ಶಾಲಾ ಇಮಾರಾತಿಗಳಿವೆ. ಪ್ರಾವಿಡಂಟ ಫಂಡ್‌ದಿಂದ ೫೦ ಲಕ್ಷ ರೂಪಾಯಿ ಹಣ ಶಾಲಾ ಇಮಾರಾತಿಗಾಗಿ ಮಂಜೂರು ಮಾಡಿದ್ದು ಆನಂದದ ಸಂಗತಿಯಾಗಿದೆ. ಮುಂಬಯಿ ಜನಕಲ್ಯಾಣ ರಾಜ್ಯವಾಗಿಯೆಂಬುದು ಎಲ್ಲರಿಗೂ ಕಂಡುಬರುತ್ತದೆ.

## ಮುಂಗಡ ಪತ್ರದ ಮೇಲಿನ ಸಾಮಾನ್ಯ ಚರ್ಚೆ

4ನೇ ಮಾರ್ಚ್ 1953

ಮಾನ್ಯ ಸಭಾಪತಿಗಳೇ, ಮುಂಬಯಿ ಸರಕಾರದವರು ಕಲ್ಯಾಣ ರಾಜ್ಯ ಸ್ಥಾಪನೆಯ ಕಾರ್ಯದಲ್ಲಿ ಮಾಡಿದ ಪ್ರಯತ್ನಗಳನ್ನು ನಿರೀಕ್ಷಿಸಿವಾಗ ನನಗೆ ಕಂಡುಬಂದ ಒಂದೆರಡು ವಿಷಯುಗಳ ಬಗ್ಗೆ ಸೂಚನೆಗಳನ್ನು ಮಾಡಬೇಕೆನ್ನುತ್ತೇನೆ. ನನ್ನ ಸೂಚನೆಗಳನ್ನು ಸರಕಾರದವರು ಪರಿಶೀಲಿಸಬೇಕೆಂದು ಸವಿನಯದಿಂದ ಪ್ರಾರ್ಥಿಸುತ್ತೇನೆ. ಎಷ್ಟೋ ಸುಧಾರಣೆಗಳನ್ನು ನಮ್ಮ ಸರಕಾರದವರು ಮಾಡಿದ್ದಾರೆ. ಅಹಮ್ಮದಾಬಾದ, ಪುಣೆ ಮೆಡಿಕಲ್ ಕಾಲೇಜುಗಳ ಕಟ್ಟಡಗಳನ್ನು ಪೂರ್ತಿ ಮಾಡಲು 1 ಕೋಟಿ 87 ಲಕ್ಷ ರೂಪಾಯಿ ಮಂಜೂರು ಮಾಡಿದ್ದಾರೆ. ಅದರಂತೆಯೇ ಕರ್ನಾಟಕದಲ್ಲಿಯ ಹುಬ್ಬಳ್ಳಿ ಮೆಡಿಕಲ್ ಕಾಲೇಜದ ಸ್ಥಾಪನೆ ತೀವ್ರವಾಗಿ ಆಗುವಂತೆ ಪ್ರಯತ್ನ ಮಾಡಬೇಕೆಂದು ವಿನಂತಿಸುತ್ತೇನೆ. ಇನ್ನೊಂದು ಸಂಗತಿಯೆಂದರೆ ಶಿಕ್ಷಣ ಖಾತೆಯಲ್ಲಿ ಸುಧಾರಣೆ ಮಾಡುವುದರ ಸಲುವಾಗಿ ಎ.ಓ. ಮತ್ತು ಡಿ.ಇ.ಐ ಆಫೀಸುಗಳ ಆಡಳಿತ ಕೂಡಿಸುವುದು ಅವಶ್ಯವಾಗಿದೆ. ಇದರಿಂದ ಬಹಳ ಅನುಕೂಲತೆಯಾಗುವುದು. ಶಿಕ್ಷಣ ಪ್ರಸಾರ ಮಾಡುವುದಕ್ಕಾಗಿ 500 ಜನವಸ್ತಿಯುಳ್ಳ ಹಳ್ಳಿಗಳಲ್ಲಿ ಒಂದು ಶಾಲೆಯನ್ನು ತೆರೆಯಬೇಕೆಂದು ನಾನು ವಿನಂತಿ ಮಾಡುತ್ತೇನೆ.

ಕರ್ನಾಟಕದಲ್ಲಿ ಅರಣ್ಯ ಸಂಪತ್ತು ಬೇಕಾದಷ್ಟಿದೆ. ಅರಣ್ಯ ಸಂಪತ್ತು ಇದ್ದರೂ ಅದನ್ನು ಉಪಯೋಗಿಸಿಕೊಳ್ಳದೇ ಇರುವುದರಿಂದ ಇದ್ದೂ ಇಲ್ಲದಂತಾಗಿದೆ. ಕಾರವಾರ ಜಿಲ್ಹೆಯಲ್ಲಿಯ ಅರಣ್ಯ ಸಂಪತ್ತನ್ನು ಉಪಯೋಗಿಸಿ ಪ್ಲಾಯವುಡ್ ಇಂಡಸ್ಟ್ರೀ ಮತ್ತು ಜಪಾನಿ ಪದ್ಧತಿಯ ಸಣ್ಣ ಸಣ್ಣ ಗ್ರಾಮೋದ್ಯೋಗಗಳನ್ನು ಪ್ರಾರಂಭಿಸಿದರೆ ನಿರುದ್ಯೋಗವು ಕಡಿಮೆಯಾಗುದು. ಮುಂಬಯಿಯಂತ ಶಹರದಲ್ಲಿ ಸೇರಿದ ಜನವಸತಿಯು ಕಡಿಮೆಯಾಗುವುದು. ಆದಕಾರಣ ಹಳ್ಳಿಗಳಲ್ಲಿ ಸಣ್ಣ ಸಣ್ಣ ಗ್ರಾಮ ಉದ್ಯೋಗ ಧಂದೆಗಳನ್ನು ಪ್ರಾರಂಭಿಸಬೇಕು. ಕರ್ನಾಟಕದಲ್ಲಿಯ ಕಾರವಾರ ಬಂದರದ ದುರಸ್ತಿ ಕಾರ್ಯವನ್ನು ಪ್ರಾರಂಭಿಸಬೇಕು. ಭಟ್ಕಳ ಬಂದರವು ಕಟ್ಟಲ್ಪಟ್ಟರೆ ಕರ್ನಾಟಕದ ಆರ್ಥಿಕ ಸ್ಥಿತಿಯು ಸುಧಾರಿಸುವುದು.

ಕಾಂಗ್ರೇಸ್ ಪಕ್ಷದ ಮಾನ್ಯ ಸದಸ್ಯರಾದ ಶ್ರೀ ಕಲ್ಯಾಣ ಭಾಯಿಯುವರು ವರ್ಣಿಸಿದಂತೆ ನಮ್ಮ ಅರ್ಥ ಮಂತ್ರಿಗಳವರು ಗಾಂಧೀಜಿಯುವರ ತತ್ವಗಳಂತೆ ನಡೆಯುವವರಾಗಿದ್ದಾರೆ. ಮುಂಬಯಿ ರಾಜ್ಯದ ಅಡಚಣೆಯು ನಾಡಿಯನ್ನು ತಪಾಸಿಸುವಾಗ ಕರ್ನಾಟಕದ ಮತ್ತು ಹಿಂದುಳಿದ ಭಾಗವಾದ ವಿಜಾಪೂರ ಜಿಲ್ಹೆಯ ಅಡಚಣೆಗಳನ್ನು ಪಾಸಿಸಲು ಮರೆಯುವುದಿಲ್ಲವೆಂದು ತಿಳಿಯುತ್ತೇನೆ. ಇಂಥ ಆರ್ಥಿಕ ಮುಗ್ಗಟ್ಟಿನ ಕಾಲದಲ್ಲಿ ನಮ್ಮ ಸರಕಾರಕ್ಕೆ ದುಷ್ಕಾಳದ ಅಡಚಣೆಯನ್ನು ಎದುರಿಸಬೇಕಾಗಿದೆ. ಹೋದವರ್ಷ ೫ ಸಾವಿರ ಹಳ್ಳಿಗಳಿಗೆ ದುಷ್ಕಾಳವಿದ್ದರೆ ಈ ವರ್ಷ ೮ ಸಾವಿರ ಹಳ್ಳಿಗಳು ದುಷ್ಕಾಳ ಪೀಡಿತವಾಗಿವೆ. ಈ ಸಂಗತಿಯು ವಿರೋಧಿ ಪಕ್ಷದ ಸದಸ್ಯರಿಗೂ ಸಹ ಗೊತ್ತಿದೆ. ಕಲ್ಯಾಣ ರಾಜ್ಯದತ್ತ ಸಾಗಬೇಕೆನ್ನುವ ಮುಂಬಯಿ ಸರಕಾರವು ಮುಂಬಯಿ ಕರ್ನಾಟಕದ ಒಂದೇ ಒಂದಾದ ದೊಡ್ಡ ಯೋಜನೆಯಾಗಿರುವ ಘಟಪ್ರಭಾ ಯೋಜನೆಯನ್ನು ಪಂಚವಾರ್ಷಿಕ ಯೋಜನೆಯಲ್ಲಿ ಹಾಕದಿರುವುದು ದುರ್ದೈವದ ಸಂಗತಿಯಾಗಿದೆ. ಪ್ಲಾನ್ ಎಸ್ಟಿಮೇಟು ಇಲ್ಲದ್ದಕ್ಕಾಗಿ ಹಾಕಲಾಗಿಲ್ಲೆಂದು ಕೇಳುತ್ತೇನೆ. ಇದು ನಿಜವಿದ್ದರೆ ಮುಂಬಯಿ ಸರಕಾರದ ದೋಷವೆಂದೆನಿಸಬಹುದೆಂದು ಅನಿವಾರ್ಯವಾಗಿ ಹೇಳಬೇಕಾಗುತ್ತದೆ. ಘಟಪ್ರಭಾ ಯೋಜನೆಯನ್ನು ತೀವ್ರವಾಗಿ ಪೂರ್ತಿಗೊಳಿಸುವಂತೆ ಮಾಡಬೇಕು. ಅದು ಪೂರ್ಣವಾದಲ್ಲಿ ವಿಜಾಪೂರ ಜಿಲ್ಹೆಯ ಕೆಲಭಾಗಕ್ಕಾದರೂ ಸಹಾಯವಾಗುವುದು. ವಿಜಾಪೂರ ಜಿಲ್ಲೆಯಲ್ಲಿ ಚಿಕ್ಕ ನೀರಾವರಿ ಯೋಜನೆಯನ್ನು ಮಾಡುವುದು ಅವಶ್ಯವಿದೆ. ವಿಜಾಪೂರ ಜಿಲ್ಹೆಯ ಪರಿಸ್ಥಿತಿಯನ್ನು ರಾಮಮೂರ್ತಿ ಕಮೀಟಿಯವರು ಮತ್ತು ಶ್ರೀಮತಿ ದುರ್ಗಾಬಾಯಿ ದೇಶಮುಖ ಇವರು ಬಂದು ನಿವಾರಣೆ ಬಗ್ಗೆ ಒಂದು ಖಾಯಂ ಸ್ವರೂಪದ ಯೋಜನೆಯನ್ನು ಮಾಡಬೇಕೆಂದು ಶಿಫಾರಸ್ಸು ಮಾಡಿದ್ದಾರೆ. ದುರ್ದೈವೀ ವಿಜಾಪೂರ ಜಿಲ್ಹೆಯಲ್ಲಿ ಐದು ಹೊಳೆಗಳು ಹರಿಯುತ್ತಿದ್ದರೂ ನಮಗೆ ಅನ್ನದ ಅಭಾವ ತಪ್ಪುವುದಿಲ್ಲ. ಮುಂಬಯಿ ಸರಕಾರವು ಹಣದ ಅಡಚಣೆಯ ಕಾರಣ ಹೇಳದೆ ಸಾಲ ಮಾಡಿಯಾದರೂ ಹಣ ದೊರಕಿಸಿ ಹರಿಯುತ್ತಿರುವ ಐದು ಹೊಳೆಯ ನೀರಿನ ಉಪಯೋಗವು ಒಕ್ಕಲುತಕ್ಕೆ ದೊರೆಯುವಂತೆ ನೀರಾವರಿ ಯೋಜನೆಯಿಂದ ಅನುಕೂಲತೆ ಮಾಡಿಕೊಡಬೇಕೆಂದು ಪ್ರಾರ್ಥಿಸುತ್ತೇನೆ. ಹೊಳೆಗಳನ್ನು ಕಟ್ಟಿ ಹೊಲಗಳಿಗೆ ನೀರು ಉಣಿಸುವಂತೆ ಮಾಡಿದರೆ ಬೇಕಾದಷ್ಟು ಧಾನ್ಯ ಬೆಳೆದು ಮುಂಬಯಿ ರಾಜ್ಯದ ಅನ್ನದ ಕೊರತೆಯು ಬಹುಮಟ್ಟಿಗೆ ಕಡಿಮೆಯಾಗುವುದು. ಫಲವತ್ತಾದ ಭೂಮಿಯು ನಮ್ಮ ಭಾಗದಲ್ಲಿರುವುದರಿಂದ ನೀರಿನ ಅನುಕೂಲತೆಯಾದರೆ ಆಹಾರ ಧಾನ್ಯವನ್ನು ಹೆಚ್ಚಾಗಿ ಬೆಳೆಯುಬಹುದು.

ಕೊನೆಯದಾಗಿ ನಾನು ಹೇಳುವುದೇನೆಂದರೆ, ಹಳ್ಳಿಗಳಲ್ಲಿ ಸಣ್ಣ ಸಣ್ಣ ಗ್ರಾಮೋದ್ಯೋಗಗಳನ್ನು ಪ್ರಾರಂಭಿಸಲು ಉತ್ತೇಜನ ಕೊಡಬೇಕು. ಇದರಿಂದ ನಿರುದ್ಯೋಗ ಸಮಸ್ಯೆಯು ಪರಿಹರಿಸಲ್ಪಡುವುದು. ಕರ್ನಾಟಕದಲ್ಲಿಯ ಅರಣ್ಯ ಸಂಪತ್ತಿನ ಉಪಯೋಗವಾಗುವಂತೆ ಮಾಡಬೇಕು. ಚಿಕ್ಕ ನೀರಾವರಿ ಯೋಜನೆಗಳನ್ನು ಮಾಡುವುದಲ್ಲದೆ ಘಟಪ್ರಭಾ ಯೋಜನೆಯನ್ನು ತೀವ್ರವಾಗಿ ಪೂರ್ತಿಯಾಗುವಂತೆ ಏರ್ಪಾಡು ಮಾಡಬೇಕು. ಈ ಕೆಲಸದ ಸಲುವಾಗಿ ಹಣ ಮಂಜೂರು ಮಾಡದ ಮುಂಗಡ ಪತ್ರಿಕೆ ಇದಾದರೂ, ಹಣ ಮಂಜೂರು ಮಾಡಲಾದ ಅಂಥ ಮುಂಗಡ ಪತ್ರಿಕೆಯನ್ನು ಮುಂದಿನ ವರ್ಷವಾದರೂ ಸಾದರಪಡಿಸಲೆಂದು ಅರ್ಥಮಂತ್ರಿಯವರಿಗೆ ವಿನಂತಿಸುತ್ತೇನೆ. ಮತ್ತು ಅಂಥ ಮುಂಗಡ ಪತ್ರಿಕೆಯ ಮೇಲೆ ಮಾತನಾಡುವ ಭಾಗ್ಯ ನನಗೆ ಬರಲೆಂದು ಆಶಿಸಿ ನನ್ನ ಮಾತನ್ನು ಮುಗಿಸುತ್ತೇನೆ.

## ವಿಜಾಪೂರ ಜಿಲ್ಲೆಯ ಅಭಿವೃದ್ಧಿ ಕುರಿತು

25ನೇ ಮಾರ್ಚ್ 1953

ಮಾನ್ಯ ಸಭಾಧ್ಯಕ್ಷರೇ, ವಿರೋಧಿ ಪಕ್ಷದ ಮಾನ್ಯ ಸದಸ್ಯರಾದ ಶ್ರೀ ಮೋಹಿತೆಯವರು ತಂದಿರುವ ಕಡಿತದ ಸೂಚನೆಯ ಮೇಲೆ ಮಾತನಾಡುವಾಗ ನೀರಾವರಿ ಯೋಜನೆಯ ಬಗ್ಗೆ ಇರುವ ಸರಕಾರದ ಧೋರಣೆಯನ್ನು ಟೀಕಿಸಿದರು. ಆದರೆ ಸರಕಾರದವರು ನೀರಾವರಿ ಯೋಜನೆಗಳ ಬಗ್ಗೆ ಲಕ್ಷ ಹಾಕುತ್ತಿದ್ದಾರೆಂಬ ಬಗ್ಗೆ ಘಟಪ್ರಭಾ ಕಾಕರಪಾರಾ ಮೊದಲಾದ ಯೋಜನೆಗಳ ಬಗ್ಗೆ ಹಣ ಹಾಕಿದ್ದು ಈ ವರ್ಷದ ಅಂದಾಜ ಪತ್ರಿಕೆಯಲ್ಲಿ ಕಾಣಬಹುದು. ಘಟಪ್ರಭಾ ಯೋಜನೆಯ ಬಗ್ಗೆ ೧,೨೬,೦೦,೦೦೦ ರೂಪಾಯಿ ಹಣ ಹಾಕಿದ್ದು ಸಂತೋಷದ ಸಂಗತಿ. ಸರಕಾರದವರು ಮಾಡಿದ ಯಾವ ಸ್ತುತ್ಯ ಕೆಲಸಗಳನ್ನು ವಿರೋಧಿ ಪಕ್ಷದ ಮಾನ್ಯ ಸದಸ್ಯರು ಎಂದೂ ಶ್ಲಾಘಿಸಿಲ್ಲ. ಇದು ಸರಿಯಲ್ಲ. ಮಾನ್ಯ ಶ್ರೀ ಕಾಂಬಳೆಯವರು ವಿಜಾಪೂರ ಜಿಲ್ಹೆಗೆ ೫ ಕೋಟಿ ರೂಪಾಯಿಯಷ್ಟು ಹಣ ಹಾಕಿರುವರೆಂದು ಹೇಳಿರುವರು. ಇದು ಆಶ್ಚರ್ಯದ ಮಾತು. ವಿಜಾಪೂರ ಜಿಲ್ಹೆಯ ಯಾವ ಕೆಲಸಕ್ಕೂ ಇಷ್ಟು ಹಣ ಹಾಕಿಲ್ಲ. ಈ ಸಂದರ್ಭದಲ್ಲಿಯೇ ವಿಜಾಪೂರ ಜಿಲ್ಹೆಯ ಬಗ್ಗೆ ಕೆಲವು ಮಾತುಗಳನ್ನು ಹೇಳದಿರಲಾರೆನು. ಮುಂಬಯಿ ರಾಜ್ಯದ ದುಷ್ಕಾಳ ಪೀಡಿತ ಜಿಲ್ಹೆಗಳಲ್ಲಿ ವಿಜಾಪೂರ ಜಿಲ್ಹೆಯು ಮೊದಲನೆಯದಾಗಿದೆ. ಎಂಬ ಮಾತನ್ನು ರಾಮಮೂರ್ತಿ ಕಮೀಟಿಯವರು ಹೇಳಿರುವರಲ್ಲದೆ ಈ ಸಭಾಗೃಹದ ಕಾಂಗ್ರೆಸ್ ಮತ್ತು ವಿರೋಧಿ ಪಕ್ಷದ ಸದಸ್ಯರೆಲ್ಲರೂ ಹೇಳಿರುವರು. ಮುಂಬಯಿ ರಾಜ್ಯಕ್ಕೆ

ಅನ್ನದ ಕೊರತೆ ಇದ್ದರೂ ಅದರ ನಿವಾರಣೆಗೆ ನೀರಾವರಿ ಯೋಜನಗೆಗಳ ಅವಶ್ಯಕತೆ ಬಹಳವಾಗಿದೆ ಎಂದೂ ಮುಂಬಯಿ ಸರಕಾರಕ್ಕೆ ಗೊತ್ತಿದ್ದ ಸಂಗತಿ. ಮುಂಬಯಿ ರಾಜ್ಯದ ಮುಂದಿರುವ ಅನೇಕ ಮಹತ್ವದ ಸಂಗತಿಗಳಲ್ಲಿ ವಿಜಾಪೂರ ಜಿಲ್ಲೆಯ ದುಷ್ಕಾಳ ನಿವಾರಣೆ ಪ್ರಶ್ನೆಯೂ ಅತಿ ಮಹತ್ವದ್ದಾಗಿದೆ ಎಂದು ನಮ್ಮ ಮಂತ್ರಿ ಮಂಡಳವು ಲಕ್ಷದಲ್ಲಿಟ್ಟುಕೊಳ್ಳಬೇಕಾಗಿ ವಿನಂತಿ. ಹಿಂದೂಸ್ಥಾನ ಸರಕಾರದವರು ಕೊಟ್ಟ ೧೧೭ ಲಕ್ಷ ರೂಪಾಯಿಗಳಲ್ಲಿ ನಮ್ಮ ವಿಜಾಪೂರ ಜಿಲ್ಹೆಗೆ ದೊರೆತದು ಕೇವಲ ೩,೨೦,೦೦೦ ರೂಪಾಯಿ ಮಾತ್ರ ಪುಕ್ಕಟೆ ಹಣ ಸಿಕ್ಕಿದೆ. ೧೦ ಲಕ್ಷ ರೂಪಾಯಿ ಹಣ ಮಂಜೂರು ಮಾಡಿದ್ದರೂ ಅದು ಪರತ ಕೊಡಬೇಕಾದ ಹಣವಾಗಿದೆ. ರಾಮಮೂರ್ತಿ ಕಮೀಟಿಯ ರೀಪೋರ್ಟ್‌ನ್ನು ಸರಕಾರವು ತೀವ್ರವಾಗಿ ಪ್ರಸಿದ್ಧಿಸಬೇಕು. ವಿಜಾಪೂರ ಜಿಲ್ಹೆಯಲ್ಲಿ ಐದು ಹೊಳೆಗಳು ಹರಿಯುತ್ತಿದ್ದರೂ ಅವುಗಳ ನೀರಿನ ಪಾತಳಿಯು ತೀರ ಕೆಳಭಾಗದಲ್ಲಿರುವುದರಿಂದ ನೀರಾವರಿ ಯೋಜನೆಗಳಿಗೆ ಅನುಕೂಲವಿಲ್ಲವೆಂದು ತಜ್ಞರು ಅಭಿಪ್ರಾಯಪಡುವರೆಂದು ಕೇಳಿರುತ್ತೇನೆ. ಆದರೆ ಇಂದು ಸಾಯನ್ಸವು ಅಂದರೆ ವಿಜ್ಞಾನ ಶಾಸ್ತ್ರವು ಅತಿ ಮುಂದೆ ಹೋದ ಕಾಲದಲ್ಲಿ ಇಲೆಕ್ಟ್ರಿಕ್ ಗ್ರೀಡ್ ಯೋಜನೆ ಮಾಡಿ ಹೊಳೆಗಳ ನೀರನ್ನು ಮೇಲಕ್ಕೆ ತಂದು ಒಕ್ಕಲುತನಕ್ಕೆ ಉಪಯೋಗವಾಗುವಂತೆ ಮಾಡಬೇಕೆಂದು ನನ್ನ ವಿನಂತಿ. ಗುಲಾಮಗಿರಿ ಕಾಲದಲ್ಲಿ ಬಳಲುತ್ತಿದ್ದ ವಿಜಾಪೂರ ಜಿಲ್ಹೆಯ ಜನವು ಈ ಜನತಾ ಸರಕಾರದ ಕಾಲದಲ್ಲಿ ಬಳಲಿಕೆಯಿಂದ ಪಾರಾಗುವಂತೆ ನಮ್ಮ ಸರಕಾರವು ಮಾಡುವದೆಂದು ಆಶೆ ಇದೆ. ವಿಜಾಪೂರ ಜಿಲ್ಹೆಯಲ್ಲಿಯ ಬಾಗೇವಾಡಿ ತಾಲೂಕಿನ ಅರೆ ಶಂಕರ, ಇಂಡಿ ತಾಲೂಕಿನ ಸಂಗೋಗಿ ಕೆರೆಗಳ ಪ್ಲಾನ್ ಎಸ್ಟಿಮೇಟು ತಯಾರು ಆಗಿವೆ. ಶಿವಯೋಗ ಮಂದಿರ, ಹೆರಕಲ್‌ಗಳ ಪಿಕಪ್ ವೇಅರ ಯೋಜನೆಗಳು ಸಹ ತಯಾರು ಆಗಿವೆ. ಅವುಗಳನ್ನು ಮಾಡಿಸಬೇಕು. ಸಿಂದಗಿ ತಾಲೂಕ ಪೈಕಿ ಬಬಲೇಶ್ವರ ಕೆರೆ ತಯಾರು ಮಾಡಿದರೆ ಬಹಳ ಭೂಮಿ ನೀರುಣ್ಣುವಂತಾಗುವುದು.

ಈಗಾಗಲೇ ರೈತರು ಹಳ್ಳಿಗಳಿಗೆ ಒಡ್ಡು ಹಾಕಿ ನೀರಿನ ಉಪಯೋಗ ಮಾಡಿಕೊಳ್ಳುತ್ತಿರುವರು. ಸರಕಾರದವರು ಕಚ್ಚಾ ಬಂಧಾರಗಳನ್ನು ಪಕ್ಕಾ ಬಂಧಾರಗಳನ್ನಾಗಿ ಮಾಡಿಸಿ ಕೊಡಬೇಕು.

ಗುಜರಾತದಲ್ಲಿ ಕೋಟಿಗಟ್ಲೆ ಹಣ ಖರ್ಚುಮಾಡಿ ಟ್ಯೂಬ ವೆಲ್ಸ –ಬಾವಿ ಮಾಡಿಕೊಡುವುದು ಸಂತೋಷವೇ. ಗುಜರಾತದಲ್ಲಿ ಒಂದು ಬಾವಿಗೆ ೫೦ ಸಾವಿರ ರೂಪಾಯಿ ಖರ್ಚುಬಂದರೆ ನಮ್ಮ ಜಿಲ್ಹೆಯಲ್ಲಿ ಕೆಲವು ಭಾಗಗಳಲ್ಲಿ ೩ ಸಾವಿರ ರೂಪಾಯಿಗೆ ಒಂದು ಬಾವಿ ತಯಾರಾಗುತ್ತದೆ. ಗುಜರಾತದಲ್ಲಿ ೬೦–೭೦ ಘೂಟುಗಳ

ವರೆಗೆ ಅಗಿದಲ್ಲಿ ನೀರು ಬಿದ್ದರೆ, ವಿಜಾಪೂರ ಜಿಲ್ಹೆಯಲ್ಲಿ ೩೦-೪೦ ಫೂಟುಗಳ ವರೆಗೆ ಬಾವಿ ತೋಡಿದರೆ ನೀರು ಬೀಳುತ್ತದೆ. ಇದರಿಂದ ಕಂಡುಬರುವದೇನೆಂದರೆ ಗುಜರಾತಕ್ಕಿಂತ ನಮ್ಮ ಜಿಲ್ಹೆಯುಲ್ಲಿ ಕಡಿಮೆ ಖರ್ಚಿನಿಂದ ಮತ್ತು ಕಡಿಮೆ ಆಳ ಅಗಿದರೆ ಬಾವಿ ತಯಾರು ಆಗುತ್ತದೆ. ಆದಕಾರಣ ವಿಜಾಪೂರ ಜಿಲ್ಹೆಯಲ್ಲಿ ಬಾವಿಗಳನ್ನು ತೆಗೆಯಲು ಸಹಾಯ ನೀಡಬೇಕು.

ವಿಜಾಪೂರ ಜಿಲ್ಹೆಗೆ ೧೦ ಲಕ್ಷ ರೂಪಾಯಿ ತಗಾಯಿ ಮಂಜೂರು ಮಾಡಿದ್ದರೂ ಅದು ಸಾಲದು. ತಗಾಯಿ ಕೊಡುವ ಪದ್ಧತಿಯಲ್ಲಿ ದೋಷವಿದೆ. ರೈತನಿಗೆ ತಗಾಯಿ ಹಣ ಕೊಡುವ ಇಚ್ಛೆ ಸರಕಾರ್ರಕೆ ಇದ್ದರೂ ರೈತನಿಗೆ ಅದು ತೀವ್ರವಾಗಿ ಸಿಗುವುದಿಲ್ಲ. ತಗಾಯಿ ಬಗ್ಗೆ ಅರ್ಜಿ ಮಾಡಲು ರೈತನಿಗೆ ಹೇಳದೆ, ಸ್ವತಃ ಅಧಿಕಾರಿಗಳು ಪ್ರತಿಯೊಂದು ಹಳ್ಳಿಗೆ ಹೋಗಿ ಕೊಡಬೇಕಾದ ಹಣವನ್ನು ಅಲ್ಲಿಯೇ ಕೊಡುವಂತೆ ಏರ್ಪಾಟು ಮಾಡಬೇಕು. ಈಗ ತಗಾಯಿ ದೊರಕಿಸಲು ರೈತನು ತನ್ನ ಇಡೀ ಪುಣ್ಯವನ್ನೇ ಖರ್ಚು ಮಾಡಬೇಕಾಗುವುದು. ಸಬ್‌ಸಿಡಿ ಕೊಡುವ ಪದ್ಧತಿಯನ್ನು ಇಡೀ ಮುಂಬಯಿ ರಾಜ್ಯಕ್ಕೆ ಅನ್ವಯಿಸಬೇಕು. ಒಂದು ವೇಳೆ ಅದು ಸಾಧ್ಯವಿಲ್ಲದಿದ್ದರೆ ವಿಜಾಪೂರ ಜಿಲ್ಲೆಯ ಮಟ್ಟಿಗಾದರೂ ಕೊಡಬೇಕು. ಶಿಕ್ಷಣ ಪ್ರಸಾರ ವಿಷಯದಲ್ಲಿ ಹಿಂದುಳಿದ ವರ್ಗದ ವಿದ್ಯಾರ್ಥಿಗಳಿಗೆ ಸ್ಕಾಲರಶಿಪ್ ಕೊಟ್ಟು ಸಹಾಯ ಮಾಡುವಂತೆ ವಿಜಾಪೂರ ಜಿಲ್ಲೆಯ ಮಟ್ಟಿಗಾದರೂ ಸಬ್‌ಸಿಡಿ ಕೊಟ್ಟು ರೈತರಿಗೆ ಉತ್ತೇಜನ ಕೊಡಬೇಕೆಂದು ಪ್ರಾರ್ಥಿಸುತ್ತೇನೆ. ಸರಕಾರದವರು ಮನಸ್ಸು ಮಾಡಿದರೆ ಅದು ಸಾಧ್ಯವಿದೆ. ಅನೇಕ ವರ್ಷಗಳಿಂದ ವಿಜಾಪೂರ ಜಿಲ್ಲೆಯು ದುಷ್ಕಾಳದ ಭವಣಿಯಿಂದ ಬಳಲುತ್ತಿದ್ದರೂ ಅದರ ಶಾಶ್ವತ ನಿವಾರಣೋಪಾಯ ಕೈಗೊಂಡಿಲ್ಲ. ಬರಗಾಲ ನಿವಾರಣೆ ಉಪಾಯ ಕೈಕೊಳ್ಳುವ ಕಲ್ಪನೆ ಬಂದದ್ದು ನಮ್ಮ ಸುದೈವವೇ ಸರಿ; ಇನ್ನು ಮುಂದೆ ಈ ಕಾರ್ಯವು ತೀವ್ರವಾಗಿ ನಡೆಯುವುದೆಂದು ಆಶಿಸುತ್ತೇನೆ. ಯಾಕಂದರೆ ಅಲ್ಲಿಯ ರೈತರಿಗೆ ದುಷ್ಕಾಳದ ಕಷ್ಟಸಹಿವುದು ಸಾಧ್ಯವಿಲ್ಲವಾಗಿದೆ. ವಿಜಾಪೂರ ಜಿಲ್ಲೆಯಲ್ಲಿ ಐದು ಹೊಳೆಗಳು ಹರಿದು ಹೋಗುತ್ತವೆ. ಹೊಳೆಗಳನ್ನು ಕಟ್ಟಿ, ಸಬ್‌ಸಿಡಿ ಕೊಟ್ಟು, ಬಾವಿಗಳನ್ನು ಹೊಡೆಸಿಕೊಟ್ಟು, ಪರ್ಕ್ಯುಲೇಶನ್ ಕೆರೆಗಳನ್ನು ಮಾಡಿಸಿ, ಪಕ್ಕಾ ಬಂಧಾರಗಳನ್ನು ಕಟ್ಟಿಸಿ. ದುಷ್ಕಾಳದ ಬವಣೆಯಿಂದ ಮುಕ್ತಮಾಡಿಸಬೇಕು. ನಮ್ಮ ಸರಕಾರವು ಹಾಗೆ ಮಾಡೇತಿರುವುದೆಂದು ಆಶಿಸಿ, ನಮ್ಮ ಸರಕಾರವು ಈಗ ಮಾಡಿದ ಕೆಲಸಗಳ ಬಗ್ಗೆ ಶ್ಲಾಘಿಸಿ ಇಲ್ಲಿಯುವರೆಗೆ ಟೀಕಿಸಿದ ಮಾನ್ಯ ಮಿತ್ರರ ಅಭಿಪ್ರಾಯಗಳಿಗೆ ಮತ್ತು ಈ ಕಡಿತದ ಸೂಚನೆಗೆ ವಿರೋಧಿಸಿ ನನ್ನ ಮಾತನ್ನು ಮುಗಿಸುತ್ತೇನೆ.

# ವಿಜಾಪೂರ ಜಿಲ್ಲೆಯ ನೇಕಾರಿಕೆ ಕುರಿತು

3ನೇ ಸೆಪ್ಟೆಂಬರ್ 1953

ಮಾನನೀಯ ಸಭಾಪತಿಗಳೇ, ಹಿಂದೂಸ್ಥಾನದಲ್ಲಿ ಪ್ರಾಮುಖ್ಯವಾಗಿ ನಮ್ಮ ಮುಂಬಯಿ ರಾಜ್ಯದಲ್ಲಿ ಒಕ್ಕಲುತನ ನಂತರ ಬಹುಜನರಿಗೆ ಅನ್ನ ಕೊಡುವ ಉದ್ಯೋಗವೆಂದರೆ ನೇಕಾರಿಕೆಯು. ಮುಂಬಯಿ ರಾಜ್ಯದಲ್ಲಿರುವ ೧೯೭ ಸಾವಿರ ನೇಕಾರರ ಸಂಖ್ಯೆಯಲ್ಲಿ ವಿಜಾಪೂರ ಜಿಲ್ಲೆಯಲ್ಲಿಯೇ ೩೬.೦೦೦ ನೇಕಾರರಿರುವರು. ಮುಂಬಯಿ ರಾಜ್ಯದಲ್ಲಿ ಹೆಚ್ಚಿನ ನೇಕಾರರ ಸಂಖ್ಯೆಯಿರುವ ಜಿಲ್ಲೆಯೊಂದರೆ ವಿಜಾಪೂರವು. ನಮ್ಮ ವಿಜಾಪೂರ ಜಿಲ್ಲೆಯ ಮಟ್ಟಿಗೆ ಹೇಳುವುದಾದರೆ ನಮ್ಮ ಜಿಲ್ಲೆಯ ಹೃದಯದಂತಿರುವ ಗುಳೇದಗುಡ್ಡ, ಇಳಕಲ್ಲ, ಕಮತಗಿ, ಗುಡೂರು, ಅಮೀನಗಡ, ಜಮಖಂಡಿ, ಮಹಾಲಿಂಗಪೂರ, ಹೂವನೂರು, ರಬಕವಿ, ಬನ್ನಟ್ಟಿ, ಚಡಚಣ, ಗೊಳಸಂಗಿ ಮೊದಲಾದ ದೊಡ್ಡ ಊರುಗಳು ೧೦೦ಕ್ಕೆ ೭೫ರಷ್ಟು ಜನರ ಮುಖ್ಯ ಉದ್ಯೋಗವೆಂದರೆ ನೇಕಾರಿಕೆ ಎಂಬುದನ್ನು ನೆನಪಿಸುವ ಸಂಗತಿಯು. ದುಷ್ಕಾಳ ಬಿದ್ದಾಗ ಒಕ್ಕಲಿಗನು ದುಷ್ಕಾಳ ಕಾಮುಗಾರಿಗಳನ್ನು ಉಪಜೀವಿಸಬಹುದು ಆದರೆ ಬೇರೆ ಉದ್ಯೋಗದ ಪರಿಚಯವಿರದಿದ್ದರಿಂದ ನೇಕಾರಿಕೆಯು ಬಂದಾದರೆ ಭಿಕ್ಷೆ ಬೇಡುವುದೊಂದೆ ಅವರ ಕೆಲಸವಾಗುವುದು. ನಮ್ಮ ಭಾಗದಲ್ಲಿ ಕಾಮುಗಾರಿಗೆ ಖಡಿ ಹೊಡೆಯಲಿಕ್ಕೆ ಬಡ ನೇಕಾರರ ಕೈ ಒಡೆದು ರಕ್ತವಾದ ಕರುಣಾಜನಕ ಕಥೆ ನೆನಪಾದರೆ ಕಣ್ಣೀರು ಬರುತ್ತದೆ.

ಶ್ರೀಕಂಜೀರೇಯವರ ಠರಾವಿನ ಪ್ರಕಾರ ಅಂಚಿನ ಧೋತರ ಬಣ್ಣದ ಸೀರೆಗಳನ್ನು ನೇಕಾರರ ಹೊರತಾಗಿ ಯಾರೂ ನೇಯಬಾರದೆಂದು ನಿಯಮ ಮಾಡಿದರೆ ಅಜಮಾಸು ೧೮೦ ಸಾವಿರ ಕಾರಖಾನೆಗಳಲ್ಲಿ ಕೆಲಸ ಮಾಡುವ ಜನರು ನಿರುದ್ಯೋಗಿಗಳಾಗಬಹುದು. ಆದರೆ ನೇಕಾರರು ನೇಯುವ ನೂಲು ಗಿರಣಿಯಿಂದಲೇ ತೆಗೆದುಕೊಳ್ಳುವುದರಿಂದ ಅಜಮಾಸು ೫೦ ಸಾವಿರ ಜನರಿಗೆ ಉದ್ಯೋಗ ಸಿಗುವುದು. ೧೩೦ ಸಾವಿರ ಜನರು ನಿರುದ್ಯೋಗಿ ಆಗುವುದು ಸತ್ಯ. ಆದರೆ ೧೩೦ ಸಾವಿರ ಜನರ ಕಲ್ಯಾಣದ ಸಲುವಾಗಿ ಈಗ ನಿರುದ್ಯೋಗಿಯಾದ ೪೭ ಲಕ್ಷ ಜನರನ್ನು ಉಪವಾಸ ಕೊಲ್ಲುವುದು ಅನ್ಯಾಯವಾದದ್ದು. ಎಲ್ಲರಿಗೆ ಸಮಾಧಾನ ಮತ್ತು ಸಂರಕ್ಷಣ ಮಾಡುವುದು ಯಾವ ಕಾಯಿದೆಯಿಂದಲೂ ಸಾಧ್ಯವಿಲ್ಲ. ಪ್ರತಿಯೊಂದು ಠರಾವು ಮಾಡುವಾಗ ಕೆಲವರಿಗೆ ಅನಿವಾರ್ಯವಾಗಿ ಅಸಮಾಧಾನ ಮಾಡುವ ಪ್ರಸಂಗ ಬಂದೇ ಬರುತ್ತದೆ.

ಹಿಂದೂಸ್ಥಾನದಲ್ಲಿರುವ ಕೈಮಗ್ಗದ ನೇಕಾರರ ದುಸ್ಥಿತಿ ವಿಶೇಷವಾಗಿದೆ ಎಂಬ ಬಗ್ಗೆ ಈ ಸಭಾ ಗೃಹದ ಎಲ್ಲ ಸದಸ್ಯರಲ್ಲಿ ಮತಭೇದವಿಲ್ಲ. ಆದರೆ

ಅದರ ನಿವಾರಣೆಯ ಉಪಾಯಗಳ ಬಗ್ಗೆ ಮಾತ್ರ ಮತಭೇದಗಳಿವೆ. ವಿರೋಧಿ ಪಕ್ಷದ ಸದಸ್ಯರು ನೇಕಾರರ ಅಡಚಣಿಗಳನ್ನು ಒಮ್ಮೆಲೇ ನಿವಾರಣೆ ಮಾಡಲು ಸೂಚಿಸುವುದು, ಹೇಳುವುದು, ಸರಕಾರವನ್ನು ಟೀಕಿಸುವದು, ಜೋರಿನಿಂದ ಭಾಷಣ ಮಾಡುವುದು ಸುಲಭವಿದ್ದಷ್ಟು ಕೃತಿಯಲ್ಲಿ ಮಾಡಿ ತೋರಿಸುವದು ಸರಳವಿಲ್ಲ. ಒಂದು ವರ್ಗದ ಜನರ ಸಲುವಾಗಿ ಎರಡನೇ ವರ್ಗದವರನ್ನು ಪೂರ್ಣ ದುರ್ಲಕ್ಷಿಸುವದು ಜನತಾ ಸರಕಾರಕ್ಕೆ ಸಾಧ್ಯವಿಲ್ಲ. ಜನತೆಗೆ ಉಂಟಾಗಿರುವ ಅಡಚಣಿಗಳನ್ನು ಒಮ್ಮೆಲೆ ನಿವಾರಣೆ ಮಾಡಿತೋರಿಸುವುದು ಬ್ರಹ್ಮದೇವರ ಸರಕಾರವಿದ್ದರೂ ಸಾಧ್ಯವಿಲ್ಲವೆಂದು ನನಗೆ ಅನಿಸುತ್ತದೆ. ನಮ್ಮ ಮುಂಬಯಿ ಸರಕಾರಕ್ಕೆ ನೇಕಾರರ ಬಗ್ಗೆ ಕಳಕಳಿಯಿಲ್ಲವೆಂತಲ್ಲ. ಅದಕ್ಕೆ ಯಾವುದೇ ಜನತಾ ಸರಕಾರವಾಗಲಿ ತನ್ನದೇ ಆದ ಸುಧಾರಣೆ ಮಾಡುವ ನಿಯಮಗಳಿಗೊಳಪಟ್ಟು ಸಾಗಬೇಕಾಗುತ್ತದೆ.

ಇನ್ನೊಂದು ಮಾತು ಹೇಳುವುದೇನೆಂದರೆ ಜನತೆಯ ಅಡಚಣೆಗಳನ್ನು ನಿವಾರಿಸಲು ಸರಕಾರವು ಸಾಕಷ್ಟು ಪ್ರಯತ್ನಿಸಬೇಕೆಂದು ಹೇಳುವ ಸಮಯದಲ್ಲಿ ನಮ್ಮ ಈ ಭಾಗದ ಸಭಾಗೃಹದ ಮಾನ್ಯ ಸದಸ್ಯರಿಗೂ ಒಂದು ವಿನಂತಿಯನ್ನು ನಾನು ಮಾಡದಿರಲಾರೆನು. ನೇಕಾರರ ಬಗ್ಗೆ ಕಳಕಳಿಯಿಂದ ಮಾತನಾಡುವವರು ಬಹಳ. ಆದರೆ ಅವರು ನೇಯ್ದ ಬಟ್ಟೆಯನ್ನು ಖರೀದಿ ಮಾಡುವವರು ಬಹಳ ಕಡಿಮೆ. ಇನ್ನೊಂದು ದುರ್ದೈವದ ಸಂಗತಿಯೆಂದರೆ ಸ್ವತಃ ನೇಕಾರರು ತಾವು ನೇಯ್ದ ಬಟ್ಟೆಯನ್ನು ೪ ರೂಪಾಯಿಗೆ ಮಾರಿ, ೪೦ ರೂಪಾಯಿ ಬೆಲೆಯ ಗಿರಣಿ ಅರಿವೆ ಖರೀದಿ ಮಾಡುತ್ತಾರೆ. ಇಂಗ್ಲೇಂಡ, ಅಮೇರಿಕ ಮೊದಲಾದ ಪರದೇಶದರ ಜನರು ಸ್ವಲ್ಪ ತುಟ್ಟಿಯಾದರೂ ಅಡ್ಡಿಯಿಲ್ಲ. ಸ್ವಾಭಿಮಾಣದಿಂದ ತಮ್ಮ ದೇಶದಲ್ಲಿ ತಯಾರಾದ ಸಾಮಾನುಗಳನ್ನೇ ಖರೀದಿ ಮಾಡಿ ಉಪಯೋಗಿಸುತ್ತಾರೆ. ಈ ಪ್ರವೃತ್ತಿ ನಮ್ಮ ದೇಶದ ಸುಶಿಕ್ಷಿತ ವರ್ಗದಲ್ಲಿ ಸಮಾಜ ಸೇವಕರಲ್ಲಿ ಕಡಿಮೆಯಾಗಿದೆಯೆಂದು ಅನಿವಾರ್ಯವಾಗಿ ದುಃಖದಿಂದ ಹೇಳಬೇಕಾಗುತ್ತದೆ. ನೇಕಾರರ ಬಗ್ಗೆ ಕಳಕಳಿಯುಳ್ಳವರು ಖಾದಿ ಇಲ್ಲವೇ ಕೈಮಗ್ಗಗಳಲ್ಲಿ ನೇಯ್ದ ಬಟ್ಟೆಯನ್ನು ಖರೀದಿ ಮಾಡುವದಾಗಿ ಪ್ರತಿಜ್ಞೆ ಮಾಡತಕ್ಕದ್ದು ಮತ್ತು ಈ ರೀತಿ ಎಲ್ಲರೂ ಪ್ರಯತ್ನಿಸಬೇಕು.

ಇಂದಿನ ಯಾಂತ್ರಿಕ ಯುಗದಲ್ಲಿ ಯಂತ್ರದಿಂದ ತಯಾರಾದ ಬಟ್ಟೆಯ ಸಂಗಡ ಕೈಮಗ್ಗದ ಬಟ್ಟೆಯ ಸ್ಪರ್ಧೆ ಮಾಡಲಾರದು. ಆದ್ದರಿಂದ ಸರಕಾರವು ಕೈಮಗ್ಗದ ಉದ್ಯೋಗಕ್ಕೆ ಸಂರಕ್ಷಣ ಬೇಕೇಬೇಕು. ಅದರಂತೆ ಜನತೆಯ ಸಹಾಯವೂ ಅವಶ್ಯವಾಗಿದೆ. ಕೊನೆಯದಾಗಿ ಹಿಂದುಸ್ಥಾನದಲ್ಲಿ ನೇಕಾರ ಮತ್ತು ಅವನ ಮೇಲೆ ಅವಲಂಬಿಸಿರುವರ ಸಂಖ್ಯೆ ಒಟ್ಟಿಗೆ ಅಜಮಾಸು ೨ ಕೋಟಿ ಇದ್ದು ಈ ಜನರ

ಜೀವನಾಧಾರವಾದ ಕೈಮಗ್ಗದ ಉದ್ಯೋಗಕ್ಕೆ ಸಹಾಯವನ್ನೊದಗಿಸಬೇಕೆಂದಿರುವ ಮಾನ್ಯ ಸದಸ್ಯರಾದ ಶ್ರೀ ಖಂಜೀರೆಯವರ ಗೊತ್ತುವಳಿಯು ಅಭಿನಂದನಾರ್ಹವಾಗಿದೆ. ಆದುದರಿಂದ ಸರಕಾರದವರು ಮತ್ತು ಈ ಸಭೆಯು ಈ ಠರಾವು ಸ್ವೀಕರಿಸಬೇಕೆಂದು ಸೂಚಿಸುತ್ತೇನೆ. ಮತ್ತು ಈ ಠರಾವಿಗೆ ನನ್ನ ಹೃತ್ಪೂರ್ವಕ ಬೆಂಬಲವಿದೆಯೆಂದು ಹೇಳಿ ನನ್ನ ಭಾಷಣ ಕೊನೆಗೊಳಿಸುತ್ತೇನೆ.

## ವಿವಾಹ ನೊಂದಣಿ ಕುರಿತ ಚರ್ಚೆ

22ನೇ ಡಿಸೆಂಬರ್ 1953

ಮಾನ್ಯ ಸಭಾಧ್ಯಕ್ಷರೇ ಈ ಸಭೆಯ ಮುಂದೆ ಚರ್ಚೆಗೆ ಬಂದಿರುವ ಮುಂಬಯಿ ರಾಜ್ಯದಲ್ಲಿ ವಿವಾಹಗಳ ನೋಂದಣಿಯ ಮಸೂದೆಗೆ ಮತ್ತು ಅದರಲ್ಲಿ 5ನೇ ಕಲಮಿಗೂ ಸಹ ಬೆಂಬಲಕೊಟ್ಟು ಮಾತನಾಡಲು ನಾನು ನಿಂತಿರುವೆನು. ಈ ಮಸೂದೆಯ 5ನೇ ಕಲಮಿನನ್ವಯ ಕೊಡಬೇಕಾಗಿರುವ ಮೆಮೋರಾಂಡಂದ ಮೇಲೆ ಮಾನ್ಯ ಸದಸ್ಯರಾದ ಶ್ರೀಜಾಧವರು ಮತ್ತು ಶ್ರೀ ಕಾಂಬಳೆಯವರು ವ್ಯಕ್ತಪಡಿಸಿದ ಅಭಿಪ್ರಾಯಗಳನ್ನು ವಿರೋಧಿಸುತ್ತೇನೆ ಮತ್ತು 5ನೇ ಕಲಮನ್ನು ಸಮರ್ಥಿಸುತ್ತೇನೆ.

ನಮ್ಮ ಭಾರತ ದೇಶದಲ್ಲಿ ಅದರಲ್ಲಿಯೂ ಹಿಂದೂ ಧರ್ಮದಲ್ಲಿ ಮದುವೆಯ ವಿಷಯವು ಅತ್ಯಂತ ಮಹತ್ವದ ಸಂಗತಿಯಾಗಿರುವುದರಿಂದ ಅದನ್ನು ಅಲಕ್ಷಿಸಿದರೆ ನಡೆಯುವಂತಿಲ್ಲ. ಇಲ್ಲಿಯವರೆಗೆ ಹಿಂದೂ ಧರ್ಮದ ಪ್ರಕಾರ ಆಗುವ ಮದುವೆಗಳ ನೋಂದಣಿ ಇರುವುದಿಲ್ಲ. ಈ ಕಾಯಿದೆಯು ಜಾರಿಯಲ್ಲಿ ಬಂದ ನಂತರ ಎಲ್ಲ ಮದುವೆಗಳ ನೋಂದಣಿ ಮಾಡಬೇಕಾಗುವುದು. ಈ ರೀತಿಯಾಗಿ ನೋಂದಣಿ ಮಾಡುವುದು ಅತ್ಯಂತ ಜರೂರ ಇರುತ್ತದೆಂದು ನನ್ನ ಅಭಿಪ್ರಾಯವಾಗಿದೆ. ಮಾನ್ಯ ಸದಸ್ಯರಾದ ಶ್ರೀ ಜಾಧವರು ಹೇಳುವಂತೆ ಒಂದು ವೇಳೆ ಲಗ್ನ ಸಮಯದಲ್ಲಿ ಸಾಕ್ಷಿದಾರರನ್ನು ಕರೆಸುವುದು ಅನವಶ್ಯಕವೆಂದು ತೋರಿದರೂ, ವರನ ಹೆಸರು. ವರನ ತಂದೆಯ ಹೆಸರು, ಕನ್ಯೆಯ ಹೆಸರು, ಕನ್ಯೆಯ ತಂದೆಯ ಹೆಸರು, ಪುರೋಹಿತನ ಹೆಸರು ಮತ್ತು ವರನ ಹಾಗೂ ಕನ್ಯೆಯ ಜೀವನ ಇತಿಹಾಸ ಮುಂತಾದವುಗಳನ್ನು ಲಗ್ನವಾಗುವ ಸಂದರ್ಭದಲ್ಲಿ ನೋಂದಣಿ ಫಾರ್ಮದಲ್ಲಿ ನಮೂದಿಸುವುದು ಅತ್ಯಂತ ಜರೂರು ಇರುತ್ತದೆ. ನಿಜವಾಗಿ ಲಗ್ನವಾಗಿದ್ದರೂ ತನ್ನ ಹೆಂಡತಿ ಅಲ್ಲವೆಂದು ವಾರಸಾ ಹಕ್ಕು ಕೊಡಲಾರದ ಉದಾಹರಣೆಗಳು ಅನೇಕ ಇರುತ್ತವೆ. ತಂಟೆ ಬರಲು ಪುರುಷನು ತನ್ನ ಬುದ್ಧಿ ಚಾತುರ್ಯದಿಂದ ಹೆಂಡತಿಯಲ್ಲವೆಂದು ಸಿದ್ಧಮಾಡುವನು. ಅದರಂತೆ ಸ್ತ್ರೀಯರಾದರೂ ಗಂಡನಲ್ಲವೆಂದು

ವಾದಿಸುವರು. ಇಂಥ ಪರಿಸ್ಥಿತಿಯಲ್ಲಿ ಮದುವೆಯ ನೋಂದಣಿ ಮಾಡಿದ ರಿಕಾರ್ಡು ಇದ್ದರೆ ಈ ತರದ ಅಡಚಣೆ ಬರಲು ಶಕ್ಯವಿಲ್ಲ. ಹಿಂದುಸ್ಥಾನದಲ್ಲಿ ನಮ್ಮ ಮುಂಬಯಿ ರಾಜ್ಯವು ಮುಂದುವರಿದ ಪ್ರಾಂತವೆಂದು ಪ್ರಸಿದ್ಧವಿರುವುದರಿಂದ ಪ್ರತಿಯೊಂದು ವಿಷಯದ ಮೇಲೆ ಅಂಕೆ ಸಂಖ್ಯೆಗಳ ಸಂಪೂರ್ಣ ಮಾಹಿತಿ ಇರುವುದು ಅತ್ಯಂತ ಜರೂರು ಇರುತ್ತದೆ. ನಮ್ಮ ರಾಜ್ಯದಲ್ಲಿ ಈ ಮೊದಲೇ ದ್ವಿಪತ್ನಿ ಪ್ರತಿಬಂಧಕ ಕಾಯದೆ ಮಾಡಿದ್ದರೂ ಅನೇಕ ಜನರು ಯುಕ್ತಿಯಿಂದ ಬೇರೆ ಕಡೆಗೆ ಹೋಗಿ ಲಗ್ನ ಮಾಡಿಕೊಳ್ಳುವ ಉದಾಹರಣೆಗಳು ಇವೆ. ದ್ವಿಪತ್ನಿ ಪ್ರತಿಬಂಧಕ ಕಾಯ್ದೆ ಆಗುವ ಪೂರ್ವದಲ್ಲಿ ಮೂರು ನಾಲ್ಕು ಹೆಣ್ಣು ಮಕ್ಕಳನ್ನು ಲಗ್ನ ಮಾಡಿಕೊಂಡ ಉದಾಹರಣೆಗಳು ಇವೆ. ಈ ರಜಿಸ್ಟರ ನೋಂದಣಿ ಇರದೇ ಇರುವ ಪಕ್ಷದಲ್ಲಿ ಪುರುಷನು ಪ್ರೇಮವಿವಾಹ ಮಾಡಿಕೊಂಡು ತನಗೆ ಬಿಡಬೇಕಾದ ಪಕ್ಷದಲ್ಲಿ ನನಗೆ ಲಗ್ನವಾಗಿಲ್ಲವೆಂದು ಬೇಜವಾಬುದಾರಿ ಉತ್ತರ ಕೊಡಬಹುದು. ಎಷ್ಟೋ ಜನರು ಲಗ್ನವಾಗಿಲ್ಲವೆಂದು ಹೇಳಿ ಅನೇಕ ಹೆಣ್ಣುಮಕ್ಕಳ ಜೀವನವನ್ನು ಹಾಳುಮಾಡಿದ ಉದಾಹರಣೆಗಳನ್ನು ಕಾಣಬಹುದು. ಹಿಂದೂ ಧರ್ಮದ ಪ್ರಕಾರ ಹೆಣ್ಣು ಗಂಡು ಲಗ್ನವಾದ ಬಳಿಕ ನೈತಿಕ ಜವಾಬುದಾರಿಯಿಂದ ಲಗ್ನ ಬಂಧನವನ್ನು ಅಲ್ಲಗಳೆಯುವುದಿಲ್ಲವೆಂದೂ ಅದಕ್ಕಾಗಿ ನೋಂದಣಿ ಮಾಡುವದು ಅವಶ್ಯಕತೆಯಿಲ್ಲವೆಂದು ಶ್ರೀ ಜಾಧವರು ವಾದಿಸಿದ್ದು ಸರಿಯಲ್ಲ. ನಮ್ಮ ಹಿಂದಿನ ಹಿರಿಯರ ನೀತಿ ಮತ್ತೆಗೂ ಮತ್ತು ಇಂದಿನ ಹೊಸ ಜನಾಂಗದ ನೀತಿಮತ್ತೆಗೂ ಭೂಮ್ಯಾಕಾಶದಷ್ಟು ಅಂತರವಿರುತ್ತದೆ. ದಿನೇ ದಿನೇ ನೀತಿಮತ್ತೆಯು ಶಿಥಿಲವಾಗುತ್ತ ನಡೆದಿರುವ ಈ ಕಾಲದಲ್ಲಿ ಬಂಧನವಿರುವುದು ಅತ್ಯಂತ ಅವಶ್ಯಕವಾಗಿದೆ.

ಇನ್ನೊಂದು ಮಹತ್ವದ ವಿಷಯವೆಂದರೆ ಈ ಹೊಸ ಕಾಯದೆಯ ಪ್ರಕಾರ ಮದುವೆಯಾದ ಒಂದು ತಿಂಗಳದೊಳಗಾಗಿ ರಜಿಸ್ಟರ ಆಫೀಸಿಗೆ ಮದುವೆಯ ನೋಂದಣಿ ಫಾರ್ಮು ತುಂಬಿ ಕಳಿಸದಿದ್ದರೆ ಶಿಕ್ಷೆ ಮತ್ತು ದಂಡ ಮಾಡಬೇಕೆಂದು ಈ ಕಲಮಿನಲ್ಲಿ ಇದೆ. ಆದರೆ ನನಗೆ ತೋರುವುದೇನೆಂದರೆ ಶಿಕ್ಷೆಯು ಅವಶ್ಯಕತೆಯಿಲ್ಲ. ಕೇವಲ ದಂಡ ಮಾತ್ರ ಮಾಡಲಿಕ್ಕೆ ಅಡ್ಡಿಯಿಲ್ಲ. ಶಿಕ್ಷೆ ಮತ್ತು ದಂಡ ಎರಡೂ ಮಾಡಬಹುದೆಂದು ಹೇಳುವುದೂ ಸೂಕ್ತವಲ್ಲ. ಯಾವುದೇ ತರದ ಅಪರಾಧ ಮಾಡಿದ ಜನರಿಗೆ ಶಾಸನವಾಗಲೇಬೇಕು. ಯಾವದೊಂದು ಕಾಯಿದೆಯ ನಿರೀಕ್ಷಣೆ ಮಾಡುವಾಗ ಬಹಿರಂಗದ ದೃಷ್ಟಿಯನ್ನೇ ಅನುಲಕ್ಷಿಸದೆ ಅದರ ಅಂತರಂಗದ ಉದ್ದೇಶದ ಕಡೆಗೂ ಸಹ ಸಾಕಷ್ಟು ಲಕ್ಷ ಕೊಡುವುದು ಅತ್ಯಂತ ಅವಶ್ಯ. ಈ ಕಾಯದೆ ಕಾಣಲಿಕ್ಕೆ ಸಾದಾ ಆಗಿದೆಯೆಂದು ಕಂಡು ಬಂದರೂ ಜನರ ಮಹತ್ವದ ಸಮಸ್ಯೆಯು ಇದರ ಮೇಲೆ ಅವಲಂಬಿಸಿರುತ್ತದೆ. ಆದುದರಿಂದ ವಿವಾಹದ

ನೋಂದಣಿ ಮಾಡುವುದು ಅತ್ಯಂತ ಅವಶ್ಯವಿರುವುದರಿಂದ ಈ ಕಾಯದೆಯಲ್ಲಿಯ 5ನೇ ಕಾಲಮನ್ನು ನಾನು ಸಮರ್ಥಿಸುತ್ತೇನೆ. ಮತ್ತು ಶ್ರೀ ಜಾಧವರ ಅಭಿಪ್ರಾಯಕ್ಕೆ ವಿರೋಧಿಸುತ್ತೇನೆ.

ಅದರಂತೆಯೇ ಶ್ರೀ ಕಾಂಬಳೆಯವರು ತಮ್ಮ ಭಾಷಣದಲ್ಲಿ ಹೇಳಿದ್ದೇನೆಂದರೆ ಹಳ್ಳಿಯ ಜನ ಅಶಿಕ್ಷಿತರು ಅಜ್ಞಾನಿಗಳು ಇರುವುದರ ಮೂಲಕ ವಿವಾಹ ನೋಂದಣಿಯ ಕಾಯಿದೆಯಿಂದ ಹಳ್ಳಿಯ ಜನರಿಗೆ ತ್ರಾಸವಾಗುವದೆಂದು ಅಂದರು. ಅವರ ಹೇಳಿಕೆಯು ವಿಚಾರ ಮಾಡುವಂತಹದಿದ್ದರೂ ಈ ಕಾಯಿದೆಯು ಹಳ್ಳಿಗಳಲ್ಲಿಯ ಅಜ್ಞಾನ ಜನರ ಹಿತದ ಸಲುವಾಗಿಯೇ ಮಾಡಲಾಗುತ್ತಿದೆ. ಹಳ್ಳಗಳ್ಳಿಯ ಅಶಿಕ್ಷಿತ ಜನರು ಸುಶಿಕ್ಷಿತವಾಗುವವರೆಗೆ ಇಂಥ ಯಾವ ಕಾಯಿದೆಯನ್ನು ಮಾಡಬಾರದೆಂದು ಆಗುತ್ತದೆ. ನನ್ನ ಅಭಿಪ್ರಾಯದಲ್ಲಿ ಸ್ವಲ್ಪ ತ್ರಾಸವಾದರೂ ಅಡ್ಡಿಯಿಲ್ಲ ಜನರಿಗೆ ಆಗುವ ಅಡಚಣೆಗಳನ್ನು ದೂರ ಮಾಡುವುದರ ಸಲುವಾಗಿ ಅದರಲ್ಲಿಯ ಪ್ರಾಮುಖ್ಯವಾಗಿ ಅಜ್ಞಾನ ಮಹಿಳಾ ಸಮಾಜದ ಮೇಲೆ ಆಗುತ್ತಿರುವ ಅನ್ಯಾಯಗಳನ್ನು ನಿವಾರಣೆ ಮಾಡುವುದರ ಸಲುವಾಗಿ ಈ ಕಾಯಿದೆಯು ಅತ್ಯಂತ ಸಹಕಾರಿಯಾಗುತ್ತದೆಂದು ನನ್ನ ಮತ್ತು ಅನೇಕ ಜನರ ಸ್ಪಷ್ಟ ಅಭಿಪ್ರಾಯವಾಗುವುದರ ಮೂಲಕ ಈ 5ನೇ ಕಲಮನ್ನು ಮತ್ತೆ ಮತ್ತೆ ಸಮರ್ಥಿಸುತ್ತೇನೆ.

ಇನ್ನೊಂದು ವಿಷಯ ಶ್ರೀಕಾಂಬಳೆಯುವರು ಹೇಳಿದ್ದೇನೆಂದರೆ ಕೆಲವು ಕಡೆಗೆ ಲಗ್ನವಾದ ನಂತರ ಒಂದು ತಿಂಗಳ ವರೆಗೆ ಗಂಡನ ಮನೆಗೆ ಮೋರೆ ನೋಡಬಾರದೆಂದು ರೂಢಿಯು ಇರುವುದರಿಂದ ಸಹಿ ಮಾಡುವುದು ಹೇಗೆ ಎಂದು ಶ್ರೀ ಕಾಂಬಳೆಯವರು ಅಭಿಪ್ರಾಯಪಟ್ಟರು. ಆದರೆ ನಮ್ಮ ದೇಶದಲ್ಲಿರುವ ಪರದಾ ಪದ್ಧತಿ ಅನುಸರಿಸುವ ಹೆಣ್ಣುಮಕ್ಕಳು ಪ್ರವಾಸ ಮಾಡುವುದನ್ನು ನೋಡುತ್ತೇವೆ. ಆದರೆ ಹಿಂದಿನ ಅಂಧಾನುಕರಣದ ಹಳೆ ರೂಢಿಗಳಿಗೆ ಪ್ರೋತ್ಸಾಹಿಸುವುದರಲ್ಲಿ ಯಾವ ಅರ್ಥವಿಲ್ಲ. ಒಮ್ಮೆ ಕಾಯಿದೆ ಮಾಡಿದ ನಂತರ ಸಹಿ ಮಾಡುವುರು ಎಂಬ ಬಗ್ಗೆ ಯಾವುದೇ ಸಂದೇಹವಿಲ್ಲ. ಈ ಎಲ್ಲ ಕಾರಣಗಳ ಮೂಲಕ ಶ್ರೀ ಜಾಧವ ಮತ್ತು ಶ್ರೀ ಕಾಂಬಳೆಯವರ ಅಭಿಪ್ರಾಯಗಳಿಗೆ ವಿರೋಧ ವ್ಯಕ್ತ ಮಾಡಿ ಈ ಹೊಸ ಕಾಯಿದೆಗೆ ನನ್ನ ಸಂಪೂರ್ಣ ಬೆಂಬಲವಿದೆಯೆಂದು ಹೇಳಿ ನನ್ನ ಭಾಷಣ ಮುಗಿಸುತ್ತೇನೆ.

# ಅನಾಥಾಶ್ರಮ - ಅಬಲಾಶ್ರಮ ಕುರಿತ ಚರ್ಚೆ

30ನೇ ಆಗಸ್ಟ್ 1954

ಸನ್ಮಾನ್ಯ ಸಭಾಪತಿಗಳೇ, ಮಾನ್ಯ ಸದಸ್ಯರಾದ ಶ್ರೀಮತಿ ಲೀಲಾವತಿ ಬ್ಯಾಂಕರ ಅವರು ತಂದಿರುವ ಹೆಣ್ಣುಮಕ್ಕಳ ಮತ್ತು ಸಣ್ಣ ಹುಡುಗರ ಅನಾಥ ಆಶ್ರಮ ಹಾಗೂ ವಸತಿ ಗೃಹಗಳ ಸುವ್ಯವಸ್ಥೆಗಾಗಿ ಲಾಯಸನ್ಸ್ ಪಡೆಯಬೇಕೆಂದ ಮಸೂದೆಗೆ ಬೆಂಬಲಕೊಟ್ಟು ಮಾತನಾಡಲು ನಾನು ನಿಂತಿರುವೆನು. ನಮ್ಮ ಭಾರತ ದೇಶದಲ್ಲಿ ಅದರಲ್ಲಿಯೂ ನಮ್ಮ ಮುಂಬಯಿ ರಾಜ್ಯದಲ್ಲಿ ಅನಾಥ ಹೆಣ್ಣುಮಕ್ಕಳ ಪರಿಸ್ಥಿತಿಯು ಬಹಳ ಶೋಚನೀಯುವಾಗಿದೆ. ಇಂಥ ಕೆಟ್ಟ ಪರಿಸ್ಥಿತಿಯನ್ನು ಸುಧಾರಿಸುವುದರ ಸಲುವಾಗಿ ಅನೇಕ ಸಮಾಜ ಸುಧಾರಕರು ಸಂಘ ಸಂಸ್ಥೆಗಳ ಮುಖಾಂತರ ಕೆಲಸ ನಡೆಸಿದ್ದಾರೆ. ಸದುದ್ದೇಶದಿಂದ ಇಂತಹ ಸಂಘ ಸಂಸ್ಥೆಗಳು ಏರ್ಪಾಡಾಗಿದ್ದರೂ ಅಲ್ಲಿರುವ ಚಿಕ್ಕ ವಯಸ್ಸಿನ ಹೆಣ್ಣುಮಕ್ಕಳ ನೀತಿ ಭ್ರಷ್ಟವಾಗದಂತೆ ಯೋಗ್ಯ ವ್ಯವಸ್ಥೆ ಹಾಗೂ ಸಂರಕ್ಷಣೆ ಇರಬೇಕಾದುದರಿಂದ ಇಂತಹ ಸಂಘ ಸಂಸ್ಥೆಗಳು ಲಾಯಸನ್ಸ ಪಡೆಯಬೇಕೆಂಬ ನಿಯಮಗಳನ್ನು ಮಾಡುವ ಈ ಬಿಲ್ಲು ಉತ್ತಮವಾಗಿದೆ. ಈ ಕಾಯಿದೆಯು ಅನಾಥ ಹೆಣ್ಣು ಮಕ್ಕಳ ಸಂರಕ್ಷಣೆಗೆ ಸಹಕಾರಿಯಾಗುವುದು. ಈ ವಿಷಯದ ಬಗ್ಗೆ ಸರಕಾರದವರು ಲಕ್ಷಕೊಡುವಂತೆ ಸಮಾಜ ಸುಧಾರಕರಾದವರೂ ಹೆಚ್ಚು ಆಸ್ಥೆ ವಹಿಸಿ ಕೆಲಸ ಮಾಡುವುದು ಅತ್ಯಂತ ಅವಶ್ಯವಾಗಿದೆ. ಅನೀತಿ ಮಾರ್ಗವನ್ನು ಬಿಡಿಸಿ ಉತ್ತಮ ನಾಗರಿಕರನ್ನಾಗಿ ಮಾಡುವುದು ಎಲ್ಲರ ಆದ್ಯ ಕರ್ತವ್ಯವೆಂದು ಹೇಳಿದರೆ ತಪ್ಪಾಗಲಾರದು. ಅನಾಥ ಹೆಣ್ಣುಮಕ್ಕಳು ಹುಡುಗರೂ ಸಹ ದೇಶದ ನಾಗರಿಕರಾಗಿದ್ದಾರೆ. ಇಂಥವರಲ್ಲಿಯೂ ಸಹ ಅನೇಕರು ರಾಷ್ಟ್ರದ ಹಿರಿಯ ಮುಂದಾಳುಗಳಾಗಿರುವ ಉದಾಹರಣೆಗಳು ಇವೆ. ಆದುದರಿಂದ ಇವರೆಲ್ಲರೂ ರಾಷ್ಟ್ರದ ಸಂಪತ್ತಾಗಿದ್ದಾರೆ. ಆವಕಾರಣ ಅನಾಥರಾದರವನ್ನು ಸನ್ಮಾರ್ಗಕ್ಕೆ ಹಚ್ಚುವ ಮತ್ತು ಸುಧಾರಿಸುವಂತೆ ಮಾಡುವ ಜವಾಬುದಾರಿಯು ಸರಕಾರದ ಮೇಲೆ ಹಾಗೂ ಜನತೆಯ ಮೇಲೆ ಇರುವುದರಿಂದ ಅನಾಥರ ಬಗ್ಗೆ ಹೆಚ್ಚು ಲಕ್ಷ ಪೂರೈಸುವುದು ಸರಕಾರ ಹಾಗೂ ಸಾರ್ವಜನಿಕರ ಆದ್ಯ ಕರ್ತವ್ಯವಾಗಿದೆ. ಈ ಕಾರ್ಯವನ್ನು ಯಶಸ್ವಿಯಾಗಿ ಮಾಡಲು ಸಮಾಜ ಸುಧಾರಕರೂ ಶ್ರೀಮಂತರೂ ಶಕ್ಯವಿದ್ದಷ್ಟು ಸಹಾಯ ಮಾಡುವುದು ಅವಶ್ಯವಾಗಿದೆ. ಸರಕಾರದಿಂದ ಧನ ಸಹಾಯ ಪಡೆದಂಥ ಅನೇಕ ಸಂಘಸಂಸ್ಥೆಗಳಲ್ಲಿ ಹಣ ದುರುಪಯೋಗವಾಗಿರುವುದನ್ನು ನಾವು ಆಗಾಗ್ಗೆ ಕೇಳುತ್ತೇವೆ. ಆದಕಾರಣ ಈಗ ಚರ್ಚೆಗೆ ಬಂದಿರುವ ಮಸೂದೆಯನ್ನು ಈ ಸಭೆಯು ಅಂಗೀಕರಿಸುವುದೆಂದು ನಂಬುತ್ತೇನೆ. ಈ ಮಸೂದೆಯನ್ನು ತಂದಿರುವುದಕ್ಕಾಗಿ ಮಾನ್ಯ ಸದಸ್ಯರಾದ ಶ್ರೀಮತಿ ಲೀಲಾವತಿ ಬ್ಯಾಂಕರರನ್ನು ಅಭಿನಂದಿಸುತ್ತೇನೆ ಮತ್ತು ನನ್ನ ಸಂಪೂರ್ಣ ಅನುಮೋದನೆಯನ್ನು ನೀಡಿ ಈ ಚಿಕ್ಕ ಭಾಷಣ ಮುಗಿಸುತ್ತೇನೆ.

# ಶಿಕ್ಷಣ ಮಸೂದೆಯ ಮೇಲಿನ ಚರ್ಚೆ

13ನೇ ಸೆಪ್ಟೆಂಬರ್ 1954

ಮಾನ್ಯ ಸಭಾಪತಿಗಳೇ, ಈ ಸಭಾಗೃಹದ ಮುಂದೆ ಮಾನ್ಯ ಶಿಕ್ಷಣ ಮಂತ್ರಿಗಳು ತಂದಿರುವ ಶಿಕ್ಷಣ ವಿಷಯದ ಬಿಲ್ಲನ್ನು ಅನುಮೋದಿಸಲು ಎದ್ದು ನಿಂತಿರುತ್ತೇನೆ. ಇದು ಅತ್ಯಂತ ಯೋಗ್ಯ ಮತ್ತು ಉಪಯುಕ್ತ ಕಾಯಿದೆ ಆಗುವವರಿಂದ ಈ ವಿಷವಾಗಿ ವಿಶೇಷ ಚರ್ಚಿಸುವುದು ಅನಾವಶ್ಯಕವೆಂದು ನನಗೆ ಅನಿಸುತ್ತದೆ.

ಈ ಬಿಲ್ಲಿನಲ್ಲಿ ಎರಡು ಮುಖ್ಯ ವಿಷಯಗಳು ಇರುತ್ತವೆ. ಸಾಲೆಗೆ ಹುಡುಗರನ್ನು ಕಳಿಸದ ಪಾಲಕರನ್ನು ಶಿಕ್ಷಿಸುವುದು ಮತ್ತು ಸಾಲೆ ತಪ್ಪಿಸಿದ ಬಗ್ಗೆ ಸಾಲೆಯ ಹೆಡ್‌ಮಾಸ್ತರರು ಕೊಡುವ ಸರ್ಟಿಫಿಕೇಟವನ್ನು ನಂಬುವದು. ಈ ಮೊದಲು ಮಾತನಾಡಿದ ಶ್ರೀ ಜಾಧವ ಹೇಳಿದ್ದೇನೆಂದರೆ ಹೆಡ್ ಮಾಸ್ತರರು ಸರ್ಟಿಫಿಕೇಟ ಕೊಡುವುದರಿಂದ ಶಿಕ್ಷಕರನ್ನು ಗಂಡಾಂತರ ಸ್ಥಿತಿಯಲ್ಲಿ ಇಟ್ಟಂತಾಗುವದೆಂದು ಹೇಳುವುದು ಸರಿಯಲ್ಲ. ಊರ ಜನರಿಗೆ ಶಿಕ್ಷಕರು ಅಂಜುವ ಕಾರಣವಿಲ್ಲ. ಹುಡುಗರು ಸಾಲೆಗೆ ಬರುವುದು ಬರಲಾರದ್ದು ಶಿಕ್ಷಕರ ಹೊರತು ಅನ್ಯರಿಗೆ ನಿಜ ಸಂಗತಿ ಗೊತ್ತಾಗುವುದು ಶಕ್ಯವಲ್ಲ. ಶಿಕ್ಷಕರು ಪ್ರಾಮಾಣಿಕರೂ ಸುಳ್ಳು ಹೇಳಲಿಕ್ಕೆ ಅಂಜುವವರೂ ಇರುವರು. ಸಾಲೆ ತಪ್ಪಿಸಿದ ಬಗ್ಗೆ ಸರ್ಟಿಫಿಕೇಟ ಕೊಡುವುದಕ್ಕೆ ಪಾಲಕರಿಂದ ಪ್ರಾರಂಭದಲ್ಲಿ ವಿರೋಧವಾದರೂ ಶಿಕ್ಷಕರು ಪ್ರಾಮಾಣಿಕತನದಿಂದ ಸರ್ಟಿಫಿಕೇಟ ಕೊಡುವದು ಗೊತ್ತಾದ ನಂತರ ವಿರೋಧವು ಕಡಿಮೆಯಾಗುವುದು. ಆ ದೃಷ್ಟಿಯಿಂದ ಈ ಬಿಲ್ಲಿನಲ್ಲಿ ಈ ಕಲಮು ಇದ್ದುದು ಅತ್ಯಂತ ಸೂಕ್ತವಾದದ್ದು. ಈ ಸರ್ಟಿಫಿಕೇಟವು ಕಳವು ಕೊಲೆ ಸುಲಿಗೆಗಳ ಬಗ್ಗೆ ಇರುವುದಿಲ್ಲ. ಈ ಸರ್ಟಿಫಿಕೇಟದಿಂದ ದಂಡವಾದರೆ ಗುನ್ಹೆಗಾರ ಲಿಸ್ಟದಲ್ಲಿ ದಾಖಲು ಮಾಡುವುದಿಲ್ಲ. ಪಾಲಕರಿಗೆ ಹುಡುಗರನ್ನು ಸಾಲೆಗೆ ಕಳಿಸಬೇಕೆಂಬ ಭಾವನೆ ಹುಟ್ಟುವ ಸಲುವಾಗಿ ಇರುತ್ತದೆ.

ಜನರ ಹೊಟ್ಟೆ ಬಟ್ಟೆ ಪ್ರಶ್ನೆಯನ್ನು ಬಿಡಿಸದ ವಿನಃ ಈ ತರದ ಕಾಯಿದೆ ಮಾಡುವದು ಅನಾವಶ್ಯಕವೆಂದು ಕೆಲ ಮಾನ್ಯ ಮಿತ್ರರು ವಾದಿಸಿದರು. ಈ ದೃಷ್ಟಿಯಿಂದ ಜನರ ಆರ್ಥಿಕ ಸ್ಥಿತಿ ಸುಧಾರಿಸುವ ವರೆಗೆ ಕೊಲೆ ಸುಲಿಗೆ ಕಳವು ಮಾಡಿದರೆ ಶಿಕ್ಷೆ ವಿಧಿಸುವುದು ತಪ್ಪೆಂದು ಅನ್ನಬೇಕಾಗುತ್ತದೆ. ನಮ್ಮ ದೇಶದ ಹಳ್ಳಿಗರಲ್ಲಿ ಕಂಡುಬರುವ ಬಡತನಕ್ಕಿಂತಲೂ ಅಜ್ಞಾನವೂ ಹೆಚ್ಚಿನ ದೋಷವಾಗಿದೆ. ಅಜ್ಞ ಜನರಿಗೆ ಕಾಯಿದೆಯ ಅಂಜಿಕೆಯು ಬೇಕೆ ಬೇಕು. ತಿಳುವಳಿಕೆಯುಳ್ಳ ಪಾಲಕರು ತಮಗೆ ತ್ರಾಸವಾದರೂ ಹುಡುಗರನ್ನು ಸಾಲೆಗೆ ಕಳಿಸುವರು.

ನೌಕರಿಯಲ್ಲಿದ್ದವರು ಒಂದು ಪ್ರಾಂತದಿಂದ ಬೇರೆ ಪ್ರಾಂತಕ್ಕೆ ವರ್ಗವಾಗಿ ಹೋದರೂ ಶಿಕ್ಷಣದ ಅನುಕೂಲತೆಗಾಗಿ ತಮ್ಮ ಹುಡುಗರನ್ನು ಮೊದಲಿನ ಊರಿನಲ್ಲಿಯೇ ಇಟ್ಟು ತಮ್ಮ ಧರ್ಮಪತ್ನಿಯನ್ನು ಮಕ್ಕಳ ವಿದ್ಯಾಭ್ಯಾಸದ ಸಲುವಾಗಿ ಅಲ್ಲಿಯೇ ಇಟ್ಟು ತಾವೊಬ್ಬರೇ ಖಾನಾವಳಿಯಲ್ಲಿ ಊಟ ಮಾಡಿ ಕಷ್ಟಜೀವನ ಸಾಗಿಸುವುದನ್ನು ನೋಡುತ್ತೇವೆ. ವಿದ್ಯೆಯ ಮಹತ್ವ ತಿಳಿಯದ ಮೂಲಕ ಅಶಿಕ್ಷಿತರೂ ಅಜ್ಞಾನಿಗಳೂ ಆದ ನಮ್ಮ ಹಳ್ಳಿಯ ಬಾಂಧವರು ಹುಡುಗರನ್ನು ಸಾಲೆಗೆ ಕಳಿಸುವ ಮನಸ್ಸು ಮಾಡುವುದಿಲ್ಲ. ಅದಕ್ಕೆ ಆರ್ಥಿಕ ಅವನತಿಯೂ ಒಂದು ಕಾರಣವೆಂದು ಬೇರೆ ಹೇಳುವ ಕಾರಣವಿಲ್ಲ. ಈ ದೃಷ್ಟಿಯಿಂದ ಈ ಕಾಯದೆ ಸಮಂಜಸವಾದದ್ದೂ ಮತ್ತು ಶಿಕ್ಷಣ ಕಾರ್ಯಕ್ಕೆ ಹೆಚ್ಚು ಸಹಾಯವಾಗುವಂತೆ ಇದ್ದದ್ದೂ ಇರುವುದರಿಂದ ಇದನ್ನು ತಂದ ಬಗ್ಗೆ ಶಿಕ್ಷಣ ಮಂತ್ರಿಗಳು ಅಭಿನಂದನೆಗೆ ಪಾತ್ರರಿರುವರು.

ಹಳ್ಳಿಗರು ವಿದ್ಯಾವಂತರಾದರೆ ಅವರ ಬಡತನ ಸಮಸ್ಯೆ ಬಿಡಿಸಲು ಸಹಾಯವಾಗುವದು. ಸರಕಾರವು ಬೇಕಾದ ಸುಧಾರಣೆಯ ಕಾಯದೆ ಮಾಡಲಿ ಆಶಿಕ್ಷಿತ ಬಂಧುಗಳು ಅದರ ಉಪಯೋಗ ಹೊಂದಲಾರರು. ಬುದ್ದಿವಂತರಾದವರು ಬುದ್ಧಿಹೀನರ ಮೇಲೆ ಪ್ರತಿದಿನ ಅನ್ಯಾಯ ಮಾಡುತ್ತಿರುವುದೂ ಬುದ್ಧಿಹೀನರು ಅದು ತಮ್ಮ ಹಣೆಬರಹವೆಂದು ತಿಳಿದು ಅದನ್ನು ಸಹನಮಾಡುತ್ತಿರುವುದು ಅವರ ಅಜ್ಞಾನದ ಫಲ. ದೇಶದಲ್ಲಿ ರೈತನು ಸುಶಿಕ್ಷಿತನಾಗದ ವಿನಃ ರೈತನ ಮೇಲೆ ಆಗುತ್ತಿರುವ ಅನ್ಯಾಯ ಮತ್ತು ಅವನ ಸುಲಿಗೆ ಶೋಷಣೆ ಬಂದಾಗಲಾರದು. ಅನ್ಯಾಯ ಮಾಡಿಸಿಕೊಳ್ಳುವವರು ಇರುವ ತನಕ ಅನ್ಯಾಯ ಮಾಡುವವರು ಇರತಕ್ಕವರೇ. ತಿಳುವಳಿಕೆ ಇಲ್ಲದಕ್ಕಾಗಿ ಸಣ್ಣ ಸಣ್ಣ ಮಾತಿಗಾಗಿ ಸ್ವಲ್ಪ ಲಾಭಕ್ಕಾಗಿ ಖೂನಿ ಆಗುವುದನ್ನು ಹಳ್ಳಿಗರಲ್ಲಿ ನಾನು ಕಣ್ಣಾರೆ ಕಂಡಿದ್ದೇನೆ. ದೇಶದ ಸುಧಾರಣೆಗೆ ಶಿಕ್ಷಣ ಪ್ರಸಾರವೇ ರಾಮಬಾಣ ಔಷಧವು. ನಾವು ಅವಿದ್ಯಾವಂತರಿದ್ದರಿಂದಲೇ ಬ್ರಿಟಿಷರು ಬಹುದಿವಸ ರಾಜ್ಯವಾಳಿದರು. ಗಾಂಧೀಜಿಯವರಿಗೆ ಸ್ವರಾಜ್ಯ ದೊರಕಿಸಲು ಬಹುದಿನ ಹಿಡಿದವು. ಭಾರತದ ಜನಾಂಗಕ್ಕೆ ಅಶಿಕ್ಷಿತನತದ ರೋಗವು ನಿವಾರಣೆಯಾಗದ ವಿನಃ ದೇಶದ ಸುಧಾರಣೆಯಾಗಲಾರದು. ಎಂಥ ಕಠೋರ ಕಾಯಿದೆ ಮಾಡಿಯಾಗಲಿ ಶಿಕ್ಷಣ ಪ್ರಸಾರ ಮಾಡುವದು ಅವಶ್ಯ.

ಈ ಬಿಲ್ಲನ್ನು ಪಾಸುಮಾಡುವ ಸಮಯದಲ್ಲಿ ನಮ್ಮ ಸರಕಾರಕ್ಕೆ ಕೆಲವು ಮಾತುಗಳನ್ನು ಸೂಚಿಸದೇ ಇರಲಾರೆನು. ನಮ್ಮ ಮುಂಬಯಿ ಸರಕಾರದವರು ಶಿಕ್ಷಣ ಕಾರ್ಯದ ಬಗ್ಗೆ ಹೆಚ್ಚು ಖರ್ಚು ಮಾಡುವದು ಎಲ್ಲರಿಗೆ ಗೊತ್ತಿದ್ದ ಮಾತು. ಆದರೂ ಹಳ್ಳಿಗಳಲ್ಲಿ ಒಕ್ಕಲಿಗರ ಮಕ್ಕಳ ಸಲುವಾಗಿ, ಹರಣಶಿಕಾರಿ, ಲಮಾಣಿ, ಹರಿಜನ ಮೊದಲಾದ ಹಿಂದುಳಿದ ವರ್ಗದ ಮಕ್ಕಳ ಶಿಕ್ಷಣಕ್ಕಾಗಿ

ಇನ್ನೂ ಹೆಚ್ಚು ಹಣ ಖರ್ಚು ಮಾಡಬೇಕು. ಮುಂಬಯಿ ರಾಜ್ಯದಲ್ಲಿ ಸಾಲೆ ಇಲ್ಲದ ಹಳ್ಳಿಯೇ ಇರಕೂಡದು. ಹೊಟ್ಟೆಯ ಪ್ರಶ್ನೆ ಬಿಡಿಸುವುದಕ್ಕೆ ಅಜ್ಞಾನದ ಪ್ರಶ್ನೆ ಬಿಡಿಸುವುದು ಅವಶ್ಯವಿದೆ. ಯಾವುದೇ ದೇಶ ಮುಂದೆ ಬರಲು ಸಮಾಜ ವಿರೋಧಿ ಕೃತ್ಯಗಳು ತಡೆಯಲು, ಒಕ್ಕಲುತನ ಸುಧಾರಣೆಯಾಗಲು ಪ್ರತಿಯೊಬ್ಬರು ಸುಶಿಕ್ಷಿತರಾಗುವುದು ಅವಶ್ಯ. ಬಡವರ ಮಕ್ಕಳಿಗೆ ಒಕ್ಕಲಿಗನ ಮಗನಿಗೆ ಮಾಧ್ಯಮಿಕ ಶಾಲೆಯಲ್ಲಿ ಸಹ ಫೀ ಇರಬಾರದು. ಸರಕಾರವು ಹಾಗೆ ಮಾಡಬೇಕೆಂದು ಭಿನ್ನಹ. ಈ ಕಾಯಿದೆ ತಂದ ಬಗ್ಗೆ ಮಂತ್ರಿಗಳನ್ನು ಅಭಿನಂದಿಸಿ, ದೇಶದ ಶಿರಿವಂತರೂ ಸಮಾಜ ಸುಧಾರಕರೂ ಶಿಕ್ಷಣ ಕಾರ್ಯಕ್ಕೆ ಶಕ್ತಿಮೀರಿ ಸಹಾಯಮಾಡಿ ಸರಕಾರದ ಉದ್ದೇಶವನ್ನು ಸಾಧಿಸುವಂತೆ ಮಾಡಲು ಎಲ್ಲರಿಗೆ ವಿನಂತಿಸಿ ಈ ಬಿಲ್ಲಿಗೆ ನನ್ನ ಹಾರ್ದಿಕ ಬೆಂಬಲ ಕೊಟ್ಟು ನನ್ನ ಭಾಷಣವನ್ನು ಮುಗಿಸುತ್ತೇನೆ.

## ಗ್ರಾಮೀಣ ಕೂಡು ರಸ್ತೆಯ ಕುರಿತ ಚರ್ಚೆ

21ನೇ ಸೆಪ್ಟೆಂಬರ್ 1954

ಮಾನ್ಯ ಸಭಾಪತಿಗಳೇ, ಈ ಸಭಾಗೃಹದ ಮುಂದೆ ಚರ್ಚೆಗೆ ಬಂದಿರುವ ರಸ್ತೆಗಳ ಬಗ್ಗೆ ಇರುವ ಬಿಲ್ಲನ್ನು ಬಹಳ ಆನಂದಿದಂದ ಸಮರ್ಥಿಸುತ್ತೇನೆ. ಯಾಕಂದರೆ ಹಳ್ಳಿಗಾಡಿನ ಯಾವುದೇ ಯೋಜನಾ ಬದ್ಧ ವಿಕಾಸದ ಪ್ರಥಮ-ಅವಶ್ಯಕತೆಗಳಲ್ಲಿ ರಸ್ತೆಗಳ ಸುಧಾರಣೆಯು ಒಂದಾಗಿದೆ. ಈ ಬಿಲ್ಲಿನಿಂದ ಹಳ್ಳಿಗರ ಸುಧಾರಣೆಗೆ ಬಹಳ ಸಹಾಯವಾಗುವದೆಂದು ಹೇಳದೆ ಇರಲಾರೆನು. ಹಳ್ಳಿಗರಿಗೆ ಬೇಕಾಗಿರುವ ಅನ್ನ ಮತ್ತು ನೀರಿನ ವ್ಯವಸ್ಥೆಯಷ್ಟೇ ರಸ್ತೆಯ ಅವಶ್ಯಕತೆಯಿರುತ್ತದೆ. ಯಾಕೆಂದರೆ ಯಾವ ಊರಿಗೆ ರಸ್ತೆಯಾಗಿಲ್ಲವೋ ಅಂಥ ಊರಿಗೆ ಯಾವ ಯಾವ ಸುಧಾರಣೆಯೂ ಹೋಗುವುದು ಶಕ್ಯವಿಲ್ಲ. ಎಷ್ಟೋ ಹಳ್ಳಿಗಳಿಗೆ ರಸ್ತೆ ಇರದೆ ಇದ್ದುದರಿಂದ ಸರ್ವಿಸ ಬಸ್ಸು ಹೋಗುವುದಿಲ್ಲ. ಅಲ್ಲಿಯ ಹಳ್ಳಿಗರ ಕುಟುಂಬ ಮತ್ತು ಚಿಕ್ಕಮಕ್ಕಳಿಗೆ ಅಜಾರಿಯಾದಾಗ ವೈದ್ಯಕೀಯ ಸಹಾಯ ಸಲಕರಣೆ ದೊರೆಯುವುದಿಲ್ಲ. ಅಂಥಹ ಹಳ್ಳಿಗಳಿಗೆ ಹೋಗಲು ರಸ್ತೆಗಳಿರದೆ ಇದ್ದ ಮೂಲಕ ಡಾಕ್ಟರರು ಅಲ್ಲಿಗೆ ಹೋಗಲಿಕ್ಕೆ ಒಪ್ಪುವುದಿಲ್ಲ. ಸರಕಾರಿ ಸಹಾಯದಿಂದ ನಡೆಯುವ ದವಾಖಾನೆಗಳು ಪ್ರತಿಯೊಂದು ಊರಿನಲ್ಲಿ ಇರದಿದ್ದರಿಂದ ಎಷ್ಟೋ ಹಳ್ಳಿಗರ ಹೆಣ್ಣುಮಕ್ಕಳು ಮತ್ತು ಚಿಕ್ಕ ಮಕ್ಕಳು ಅಜಾರಿಯಿಂದ ಬಳಲಿ ಕಷ್ಟಪಡುತ್ತಿದ್ದು ವೈದ್ಯಕೀಯ ಸಹಾಯವಿಲ್ಲದೆ ಮರಣಕ್ಕೀಡಾದುದನ್ನು ನಾನು ಪ್ರತ್ಯಕ್ಷ ಕಂಡಿದ್ದೇನೆ. ಆ ದೃಷ್ಟಿಯಿಂದ ಈಗ ಸರಕಾರದವರು ರಸ್ತೆಗಳ ಸಲುವಾಗಿ ಖರ್ಚು ಮಾಡಲಿರುವ

ಎರಡು ಕೋಟಿ ರೂಪಾಯಿಗಳಲ್ಲಿ ಕನಿಷ್ಟ ಅರ್ಧದಷ್ಟು ಹಣವನ್ನಾದರೂ ಹಳ್ಳಿ ರಸ್ತೆಗಳ ಸಲುವಾಗಿ ಖರ್ಚು ಮಾಡಬೇಕೆಂದು ಸರಕಾರಕ್ಕೆ ನಾನು ಸೂಚಿಸುತ್ತೇನೆ.

ಮುಂಬಯಿ ಮೊದಲಾದ ದೊಡ್ಡ ದೊಡ್ಡ ಶಹರುಗಳಲ್ಲಿ ವಾಸಿಸುವ ವಕೀಲರು, ಡಾಕ್ಟರರು, ವ್ಯಾಪಾರಸ್ಥರು ಉಳಿದ ಜನರು ಸುಖವಾಗಿರುವುದಕ್ಕೆ ಹಳ್ಳಿಗರ ಶ್ರಮವೇ ಮುಖ್ಯ ಕಾರಣವು. ೧೦೦ಕ್ಕೆ ೮೦ರಷ್ಟು ಜನರು ಮುಂಬಯಿ ರಾಜ್ಯದಲ್ಲಿ ಹಳ್ಳಿಗರೇ ಇದ್ದಾರೆಂಬುದು ನಿರ್ವಿವಾದ ಸಂಗತಿಯು. ಮುಂಬಯಿ ಪ್ರಾಂತದ ಸರ್ವಾಂಗ ಸುಂದರವಾದ ಉನ್ನತಿಯಾಗಬೇಕಾದರೆ ಹಳ್ಳಿಗರು ಉನ್ನತಿಯಾಗಬೇಕು. ಒಂದು ಶರೀರದ ಬಹುಭಾಗ ಕೆಟ್ಟುಹೋಗಿ ಕೆಲವು ಭಾಗಗಳು ಉತ್ತಮವಾದರೆ ಶರೀರವು ನಾಶವಾಗುವುದು ಖಂಡಿತ. ಅದರಂತೆಯೇ ಮುಂಬಯಿ ರಾಜ್ಯದಲ್ಲಿಯ ಜನ ಸಂಖ್ಯೆಯ ಬಹುಭಾಗವು ಹಳ್ಳಿಗಳಲ್ಲಿ ವಾಸಮಾಡುತ್ತಿರುವುದರಿಂದ ಅವರು ಪ್ರತಿಯೊಂದು ಸುಧಾರಣೆಯನ್ನು ಹೊಂದಿರುವುದು ಅವಶ್ಯ. ರಸ್ತೆಗಳಿಲ್ಲದ ಊರುಗಳಿಗೆ ಜವಾಬುದಾರಿ ಅಧಿಕಾರಿಗಳು, ಸಮಾಜ ಸುಧಾರಕರು, ದೊಡ್ಡ ದೊಡ್ಡ ಡಾಕ್ಟರುಗಳು ಹೋಗುವುದು ಶಕ್ಯವಿಲ್ಲ. ಹಳ್ಳಿಗನಾದರೂ ಸಹ ಮೇಲಾಧಿಕಾರಿಗಳ ಹಾಗೂ ತಜ್ಞ ಡಾಕ್ಟರರ ಕಡೆಗೆ ಹೋಗಿ ತನ್ನ ಅಡಚಣೆಗಳನ್ನು ಸರಿಪಡಿಸಿಕೊಳ್ಳುವುದು ಶಕ್ಯವಿಲ್ಲ. ಈ ದೃಷ್ಟಿಯಿಂದ ವಿಚಾರ ಮಾಡಿದರೆ ಒಂದು ಶಹರದಿಂದ ಮತ್ತೊಂದು ಶಹರಕ್ಕೆ ತಾಲೂಕಿನಿಂದ ತಾಲೂಕಿಗೆ, ಜಿಲ್ಲೆಯಿಂದ ಜಿಲ್ಲೆಗೆ ರಸ್ತೆಗಳನ್ನು ಜೋಡಿಸುವುದು ಅವಶ್ಯವಿದ್ದರೂ ಹಳ್ಳಿಯಿಂದ ಹಳ್ಳಿಗ ರಸ್ತೆಗಳನ್ನು ಜೋಡಿಸುವುದು ಅದಕ್ಕೂ ಹೆಚ್ಚಿನ ಅವಶ್ಯಕತೆಯುಳ್ಳದ್ದಾಗಿದೆ.

ಸಾರ್ವಜನಿಕ ಉಪಯೋಗಕ್ಕಾಗಿ ರಸ್ತೆಗಳನ್ನು ಹಾಕಬೇಕಾದಾಗ ಭೂಮಿಯನ್ನು ಜನರ ಕಡೆಯಿಂದ ಪಡೆದುಕೊಳ್ಳಲು ಈ ಮೊದಲು ಬಹಳ ವಿಳಂಬವಾಗುತ್ತಿತ್ತು. ಈ ಬಿಲ್ಲು ಪಾಸ ಆಗುವುದರಿಂದ ಇಂತಹ ಅಡಚಣೆಗಳು ದೂರವಾಗುವುದರಲ್ಲಿ ಸಂದೇಹವಿಲ್ಲ. ಈ ಬಿಲ್ಲಿನಲ್ಲಿರುವಂತೆ ರಸ್ತೆಗಳ ಆಜುಬಾಜು ಭೂಮಿಯನ್ನು ರಸ್ತೆಗಳ ಉಪಯೋಗಕ್ಕೆ ತೆಗೆದುಕೊಳ್ಳಬೇಕಾಗುವದರಿಂದ ಅಡ್ಡ ತಿಡ್ಡ ಇಮಾರತಿಗಳನ್ನು ಕಟ್ಟಕೂಡದಂತೆ ಪ್ರತಿಬಂಧಿಸಲ್ಪಡುವುದು. ಆದರೆ ರಸ್ತೆಯ ಎರಡೂ ಭಾಗವನ್ನು ತೆಗೆದುಕೊಳ್ಳುವುದಾದಲ್ಲಿ ಅದರ ಬೆಲೆಯನ್ನು ಕೊಡಕೂಡದೆಂದು ಮತ್ತು ಪ್ರತಿಫಲದ ಬೆಲೆಯನ್ನು ಕೊಡುವದು ಅವಶ್ಯವಿಲ್ಲವೆಂದೂ ಕೆಲವು ಮಾನ್ಯ ಸದಸ್ಯರು ಪ್ರತಿಪಾದಿಸಿದರು. ಮಾನ್ಯ ಸದಸ್ಯರಾದ ಶ್ರೀಬಾಳಾಸಾಹೇಬ ದೇಸಾಯಿಯವರು ತಮ್ಮ ಜಿಲ್ಲೆಯ ಉದಾಹರಣೆಯನ್ನು ಕೊಟ್ಟು ಅಲ್ಲಿ ರಸ್ತೆಗಳು ಹಾಯ್ದು ಹೋಗುವ ಜಾಗದ ಭೂಮಾಲಿಕರು ಪುಕ್ಕಟೆಯಾಗಿ ಕೊಟ್ಟಿರುವರೆಂದೂ ಮತ್ತು ಶ್ರಮದಾನ ಯಜ್ಞದ ಫಲವಾಗಿ ಪುಕ್ಕಟೆಯಾಗಿ ರಸ್ತೆ ತಯಾರಾದುದನ್ನು

ಹೇಳಿದರು. ಒಂದೇ ಒಂದಾದ ಉದಾಹರಣೆ ಬೇರೆ ಸರ್ವಸಾಮಾನ್ಯ ನಿಯಮ ಬೇರೆ. ಸಾವಿರಾರು ಜನರು ಶ್ರಮದಾನ ರೂಪದಿಂದ ಗ ಸಹಾಯದಿಂದ ರಸ್ತೆಗಳನ್ನು ಮಾಡುವುದಕ್ಕೆ ಸಾಧ್ಯವಿದ್ದರು ಪುಕ್ಕಟೆಯಾಗಿ ಜ ಟ್ಟಿರಬಹುದು. ರಸ್ತೆಯು ಎಲ್ಲರಿಗೂ ಉಪಯೋಗವಾಗುವಾಗ ಒಬ್ಬ ವ್ಯಕ್ತಿಯು ತನಗೆ ಸಂಬಂಧಪಟ್ಟ ಜಮೀನನ್ನು ಕೊಡುವದಕ್ಕೆ ಮನಸ್ಸು ಮಾಡಿರಬಹುದು. ಆದರೆ ಎಲ್ಲರಿಗೂ ಹಾಗೆಯೇ ಪುಕ್ಕಟೆಯಾಗಿ ಕೊಡಲಿಕ್ಕೆ ಸಾಧ್ಯವಾಗಲಾರದು. ಆದುದರಿಂದ ರಸ್ತೆಯ ಅಕ್ಕಪಕ್ಕದ ಜಮೀನನ್ನು ತೆಗೆದುಕೊಳ್ಳುವಾಗ ಅಂಥ ಜಮೀನಿನ ಯೋಗ್ಯ ಬೆಲೆಯನ್ನು ಸರಕಾರದವರು ಒಡೆಯನಿಗೆ ಅವಶ್ಯವಾಗಿ ಕೊಡುವುದು ಉಚಿತವೆಂದು ನಾನು ನಂಬುತ್ತೇನೆ.

ಇನ್ನೊಂದು ಮಾತನ್ನು ಈ ಸಂದರ್ಭದಲ್ಲಿ ಹೇಳಲು ಇಚ್ಛಿಸುತ್ತೇನೆ. ರಸ್ತೆಗಳನ್ನು ಹಾಕುವಾಗ ಇಂಜಿಯರಿಂಗ ಡಿಪಾರ್ಟ್‌ಮೆಂಟದವರ ಶಿಫಾರಸ್ಸಿನ ಪ್ರಕಾರ ರಸ್ತೆಯು ಸ್ವಲ್ಪೇ ಜಮೀನವುಳ್ಳ ರೈತನ ಹೊಲದಲ್ಲಿ ಅಥವಾ ಮಹತ್ವದ ಜಮೀನದ ಮಧ್ಯದಲ್ಲಿ ಹಾಯ್ದುಹೋಗಿ ಜಮೀನದ ಲುಕ್ಸಾನವಾದ ಉದಾಹರಣೆಗಳುಂಟು. ಆದಕಾರಣ ಹಾಗೆ ಆಗದಂತೆ ನೋಡಿಕೊಳ್ಳುವುದು ವಿಹಿತವಾದುದು. ಸಾವಿರಾರು ಎಕರೆ ಭೂಮಿಯುಳ್ಳ ಹೊಲದೊಡೆಯನ ಜಮೀನದಲ್ಲಿ ರಸ್ತೆಯಾದರೆ ಅಡ್ಡಿಯಿಲ್ಲ. ಆದುದರಿಂದ ಸ್ವಲ್ಪ ಜಮೀನು ಇದ್ದ ರೈತನ ಅದೊಂದೇ ಜಮೀನದಲ್ಲಾಗಲೀ ಅಥವಾ ಫಲವತ್ತಾದ ಜಮೀನದಲ್ಲಾಗಲಿ ರಸ್ತೆ ಹಾದುಯೋಗದೆ ಸ್ವಲ್ಪ ದೂರವಾದರೂ ಅಡ್ಡಿಯಿಲ್ಲ ಮತ್ತೊಂದು ಕಡೆಯಲ್ಲಿ ರಸ್ತೆ ಆಗುವಂತೆ ಮಾಡಬೇಕು. ರಸ್ತೆ ಆಗುವದರಿಂದ ಅವರ ಆಜುಬಾಜು ಇಮಾರತಿಗಳಾಗುವ ಸಂಭವವಿರುತ್ತದೆ. ಅದರ ಬಗ್ಗೆ ಸರಕಾರದವರು ಈ ಬಿಲ್ಲಿನಲ್ಲಿ ಮೊದಲೇ ಯೋಜನೆ ಮಾಡಿದಂತೆ ಃಜಾಣಜಾಟಜುಟಣ ಫಿಬಿಚಿಡಿಝ ಹಾಕುವದು ಸೂಕ್ತವಾಗಿದೆ. ಇದನ್ನು ಮಾನ್ಯ ಸದಸ್ಯರಾದ ಶ್ರೀಜಾಧವರು ಮತ್ತು ಶ್ರೀ ಕಾಂಬಳೆಯವರು ಟೀಕಿಸಿದ್ದು ಸಮಂಜಸವಲ್ಲ. ಸರಕಾರದಿಂದ ಪ್ರತಿಯೊಂದು ಸುಧಾರಣೆಯಾಗಬೇಕೆಂದು ಅಪೇಕ್ಷಿಸಿದಾಗ ಅದಕ್ಕಾಗಿ ಅಪರಿಮಿತ ಹಣವನ್ನು ಸರಕಾರವು ಖರ್ಚು ಮಾಡಬೇಕಾಗುತ್ತದೆಂಬುದು ಎಲ್ಲರಿಗೆ ಗೊತ್ತಿದ್ದ ಸಂಗತಿಯಾಗಿದೆ. ಖರ್ಚು ಹೆಚ್ಚಾದಂತೆ ರಾಜ್ಯದ ಉತ್ಪನ್ನವೂ ಹೆಚ್ಚಾಗಲೇಬೇಕು. ಆ ದೃಷ್ಟಿಯಿಂದ ರಸ್ತೆಗಳಾಗುವುದರಿಂದ ಇಮಾರತಿಗಳನ್ನು ಕಟ್ಟಿ ಅದರ ಹೆಚ್ಚಿನ ಲಾಭ ತೆಗೆದುಕೊಳ್ಳುವಾಗ ಸರಕಾರಕ್ಕೆ ಕೆಲವೊಂದು ಭಾಗವನ್ನು ಕೊಡುವದು ಅವಶ್ಯವಾದುದು. ಈ ಸಂದರ್ಭದಲ್ಲಿ ಸರಕಾರಕ್ಕೆ ಒಂದು ಸೂಚನೆಯನ್ನು ಮಾಡದಿರಲಾರೆನು. ಚಹಾದ ಅಂಗಡಿ ಮೊದಲಾದವುಗಳು ಇದ್ದುದದಾದರೆ ಬೇಕಾದಷ್ಟು

ಯೋಗ್ಯ ಚಾರ್ಜು ಹಾಕಬಹುದು. ಆದರೆ ರಸ್ತೆಯ ಪಕ್ಕದಲ್ಲಿ ತನ್ನ ಜಮೀನದಲ್ಲಿ ದನಗಳಿಗೆ ಬೇಕಾಗುವ ಕೊಟ್ಟಿಗೆ ಮತ್ತು ಒಕ್ಕಲಿಗನು ತಾನು ಇರುವುದಕ್ಕೆ ಬೇಕಾಗುವ ಮನೆಯನ್ನು, ಒಕ್ಕಲತನ ಉಪಯೋಗಕ್ಕಾಗಿ ಕಟ್ಟಿಸಿದರೆ ಅದರ ಮೇಲೆ ಸರಕಾರದವರು ಟ್ಯಾಕ್ಸ ಹಾಕಬಾರದು.

ಮಾನ್ಯ ಸದಸ್ಯರಾದ ಶ್ರೀ ಕಾಂಬಳೆಯವರು ಒಂದು ಹಳ್ಳಿಯ ಉದಾಹರಣೆಯನ್ನು ಹೇಳಿ ಹರಿಜನರ ಹೊಲವನ್ನು ರಸ್ತೆಯ ಸಲುವಾಗಿ ತೆಗೆದುಕೊಂಡು ಹರಿಜನರಿಗೆ ತ್ರಾಸ ಕೊಟ್ಟಿದ್ದಾರೆಂದು ಪಕ್ಷಪಾತ ಮಾಡಿದ್ದಾರೆಂದೂ ಪ್ರತಿಪಾದಿಸಿದರು. ಈ ಸಂಗತಿಯು ನಿಜವಾಗಿದ್ದರೆ ಸಂಬಂಧಪಟ್ಟ ಮಂತ್ರಿಗಳಿಗೆ ತಿಳಿಸಿ ಅವರಿಗೆ ಖಾತ್ರಿಯಾಗುವಂತೆ ಮಾಡಿಕೊಟ್ಟರೆ ಅದರ ಪರಿಹಾರವಾಗದೇ ಇರಲಾರದೆಂದು ನನಗೆ ಆತ್ಮ ವಿಶ್ವಾಸವಿದೆ. ಯಾವನೇ ಒಬ್ಬ ಅಧಿಕಾರಿಯಿಂದ ತಪ್ಪು ಆದಲ್ಲಿ ಅದು ಸರಕಾರದ ಧೋರಣೆ ಎಂದು ತಿಳಿದುಕೊಳ್ಳುವುದು ಅಷ್ಟೊಂದು ಯೋಗ್ಯವಲ್ಲ. ಇಂದಿನ ಕಾಲದಲ್ಲಿ ಮಹಾತ್ಮ ಗಾಂಧೀಜಿಯವರ ದಿವ್ಯ ಉಪದೇಶದ ಪರಿಣಾಮವಾಗಿ ಈ ನಮ್ಮ ಸರಕಾರದಿಂದಾಗಲಿ ಜನತೆಯಿಂದಾಗಲೀ ಹರಿಜನರ ಮೇಲೆ ಅನ್ಯಾಯವಾಗುವದು ಬಹಳ ಕಡಿಮೆಯಾಗಿದೆಂದು ನನ್ನ ಪ್ರಾಮಾಣಿಕ ಅಭಿಪ್ರಾಯವಾಗಿದೆ. ಸರಕಾರದವರು ಲ್ಯಾಂಡ್ ರೆವ್ಹೆನ್ಯೂ ಸರಚಾರ್ಜು ಬಿಲ್ಲನ್ನು ಪರತ ತೆಗೆದುಕೊಂಡಿರುವುದರಿಂದ ಅದರ ಬದಲು ಅನೇಕ ತರದ ಬೇರೆ ಬೇರೆ ಬಿಲ್ಲುಗಳನ್ನು ಪಾಸ ಮಾಡಿ ಅವುಗಳ ಮುಖಾಂತರ ಹಣವನ್ನು ವಸೂಲ ಮಾಡುವ ಯುಕ್ತಿಯನ್ನು ಮಾಡಿದ್ದದೆಂದು ಮಾನ್ಯ ಶ್ರೀ ಕಾಂಬಳೆಯವರು ಆರೋಪಿಸಿದರು. ಈ ಆರೋಪದಲ್ಲಿ ಎಳ್ಳಷ್ಟು ಹುರುಳಿಲ್ಲ.

ಕೊನೆಯದಾಗಿ ನಾನು ಹೇಳುವದೇನೆಂದರೆ ಇಂದಿನ ಸರಕಾರದವರು ಹಳ್ಳಿಗರ ಸುಧಾರಣೆಯ ಕಡೆಗೆ ಸಾಕಷ್ಟು ಲಕ್ಷ ಪೂರೈಸುತ್ತಿದ್ದರೂ ಇನ್ನೂ ಹೆಚ್ಚು ಲಕ್ಷ ಕೊಡುವುದು ಅವಶ್ಯವಿದೆ. ಹಳ್ಳಿಗರ ದುಸ್ಥಿತಿಯ ಪರಿಚಯವು ವರ್ತಮಾನ ಪತ್ರದಲ್ಲಿಯ ಸಮಾಚಾರವನ್ನು ಓದುವುದರಿಂದಾಗಲಿ ಎಂದಾದರೂ ಒಂದು ದಿನ ಹಳ್ಳಿಗೆ ಹೋಗಿ ನೋಡುವುದರಿಂದಾಗಲಿ ನಿಜವಾದ ಕಲ್ಪನೆಯನ್ನು ಶಹರ ವಾಸಿಗಳಿಗೆ ಬಾರದು. ತಾವೆಲ್ಲರೂ ಅವರ ಅಡಚಣೆಗಳನ್ನು ತಿಳಿದುಕೊಂಡಿರಬಹುದು. ಆದರೆ ನಾನು ಯಾವಾಗಲೂ ಹಳ್ಳಿಯಲ್ಲಿಯೇ ವಾಸಮಾಡಿಕೊಂಡಿರುವುದರಿಂದ ಹಳ್ಳಿಗರ ಆರ್ಥಿಕ ಸಾಮಾಜಿಕ ಹೀನ ಸ್ಥಿತಿಯನ್ನು ಚೆನ್ನಾಗಿ ಕಂಡಿದ್ದೇನೆ. ಒಕ್ಕಲಿಗ ಬಾಂಧವರು ಪ್ರತಿಯೊಂದು ರೀತಿಯಿಂದ ಮುಂದೆ ಬರಬೇಕಾದರೆ ಆ ಊರುಗಳಿಗೆ ಯೋಗ್ಯ ಅಧಿಕಾರಿಗಳು, ಸಮಾಜ ಸುಧಾರಕರು ಭೆಟ್ಟಿಕೊಡುವುದು ಅವಶ್ಯವಾಗಿದೆ. ಈ ಭೆಟ್ಟಿಕೊಡುವದಾಗಬೇಕಾದರೆ ವಾಹನಗಳ ಸೌಕರ್ಯವಿರಬೇಕು. ವಾಹನಗಳು

ಹೋಗಲು ರಸ್ತೆಗಳು ಅತ್ಯಂತ ಅವಶ್ಯವುಳ್ಳವಾಗಿವೆ. ಉತ್ತಮ ಶಿಕ್ಷಕರು ಸಹ ರಸ್ತೆಗಳಿಲ್ಲದ ಊರಿಗೆ ಹೋಗಿ ಇರಲು ಇಚ್ಛಿಸುವುದಿಲ್ಲ. ಜವಾಬುದಾರಿ ಅಧಿಕಾರಿಗಳು ಸಮಾಜ ಸುಧಾರಕರು ಉತ್ತಮ ವಕ್ತಾರರು ಮಂತ್ರಿಗಳು ಯಾರೂ ಭೆಟ್ಟಿಕೊಡಲಾರದಂಥ ರಸ್ತೆಗಳಿಲ್ಲದ ಅನೇಕ ಹಳ್ಳಿಗಳು ನಮ್ಮ ಮುಂಬಯಿ ರಾಜ್ಯದಲ್ಲಿ ಅವೆ. ಈ ದೃಷ್ಟಿಯಿಂದ ನಮ್ಮ ಒಕ್ಕಲಿಗ ಬಾಂಧವರಿಗೆ ನೀರಿನ ವ್ಯವಸ್ಥೆ, ಆರೋಗ್ಯದ ವ್ಯವಸ್ಥೆ, ಶಿಕ್ಷಣದ ವ್ಯವಸ್ಥೆ ಮತ್ತು ಒಕ್ಕಲುತನ ಸುಧಾರಣೆ ಮೊದಲಾದವುಗಳು ಸಿಗಬೇಕಾದುದು ಅವಶ್ಯವಿದೆ. ಒಕ್ಕಲಿಗರು ಆರ್ಥಿಕ ಪರಿಸ್ಥಿತಿಯಿಂದ ಅತ್ಯಂತ ಹಿಂದುಳಿದವರಿರುವದರಿಂದ ತಮ್ಮ ಉದ್ಧಾರ ಮಾಡಿಕೊಳ್ಳುವ ಶಕ್ತಿ ಸಾಮರ್ಥ್ಯವು ದುರ್ದೈವದಿಂದ ಅವರಲಿಲ್ಲ. ಮಂತ್ರಿಗಳು, ಅಧಿಕಾರಿಗಳು, ಸಮಾಜ ಸುಧಾರಕರು ತಾವಾಗಿಯೇ ಹಳ್ಳಿಗಳಿಗೆ ಹೊಗಿ ಅವರ ಉನ್ನತಿಯ ಬಗ್ಗೆ ಪ್ರಯತ್ನಿಸುವುದು ಅತ್ಯಂತ ಅವಶ್ಯವಿದೆ. ಆ ದೃಷ್ಟಿಯಿಂದ ಎಲ್ಲಕ್ಕಿಂತಲೂ ಮೊದಲು ರಸ್ತೆಗಳ ಅವಶ್ಯಕತೆಯಿದೆಯೆಂದು ಮತ್ತೊಮ್ಮೆ ಹೇಳದಿರಲಾರೆನು. ಈ ತರದ ಸುಧಾರಣೆಯ ಸಲುವಾಗಿ ಸರಕಾರವು ಎರಡು ಕೋಟಿ ರೂಪಾಯಿ ಹಣ ಖರ್ಚು ಮಾಡಲು ಯೋಜನೆ ಮಾಡಿದ್ದು ಮತ್ತು ರಸ್ತೆಗಳನ್ನು ಮಾಡುವಾಗ ಬರುವ ತೊಂದರೆಗಳನ್ನು ನಿವಾರಿಸಲು ಈ ಬಿಲ್ಲನ್ನು ತಂದ ಬಗ್ಗೆ ಮಾನ್ಯ ಮಂತ್ರಿಗಳನ್ನು ಅಭಿನಂದಿಸುತ್ತೇನೆ. ಎಲ್ಲರಿಗೂ ಆಧಾರಸ್ತಂಭರಾದ ಹಳ್ಳಿಗರ ಸಲುವಾಗಿ ಸರಕಾರದವರು ಪ್ರತಿಯೊಂದು ವಿಷಯದಲ್ಲಿಯೂ ಹೆಚ್ಚಾಗಿ ಖರ್ಚು ಮಾಡಬೇಕೆಂದು ಸರಕಾರಕ್ಕೆ ವಿನಂತಿಸಿ. ವಿಜಾಪೂರ ಜಿಲ್ಲೆಯ ಹಳ್ಳಿಗಳಿಗೆ ರಸ್ತೆಗಳಕೊರತೆ ವಿಶೇಷವಾಗಿದ್ದು ಈ ಅಡಚಣೆಯನ್ನು ದೂರಮಾಡಲು ನಮ್ಮ ಸರಕಾರವು ಪ್ರಯತ್ನಿಸಬೇಕೆಂದು ಹೇಳಿ ನನ್ನ ಮಾತನ್ನು ಮುಗಿಸುತ್ತೇನೆ.

## ಗ್ರಾಮೀಣ ಚರ್ಮೋದ್ಯಮ ಕುರಿತ ಚರ್ಚೆ

28ನೇ ಸೆಪ್ಟೆಂಬರ್ 1954

ಮಾನನೀಯ ಸಭಾಪತಿಗಳೇ, ಈ ಸಭಾಗೃಹದ ಚರ್ಚೆ ನಡೆದಿರುವ ಚರ್ಮದ ಉದ್ಯೋಗದ ಸುಧಾರಣೆಯ ಕುರಿತು ಮಾನ್ಯ ಸದಸ್ಯರಾದ ಶ್ರೀಕಾಬಾಡಿಯವರು ತಂದಿರುವ ಠರಾವನ್ನು ಅಂತಃಕರಣಪೂರ್ವಕವಾಗಿ ಅನುಮೋದಿಸಲು ನಾನು ನಿಂತಿರುವೆನು. ಇಂದೊಂದು ಕಾಣಲಿಕ್ಕೆ ಸಣ್ಣ ಠರಾವು ಇದ್ದರೂ ಅತ್ಯಂತ ಮಹತ್ವದ್ದಾಗಿದೆ. ಈ ಠರಾವು ಪಾಸಾಗುವುದರಿಂದ ಚರ್ಮಕಾರ ಸಮಾಜಕ್ಕೂ ಒಕಲಿಗರೂ ಮತ್ತು ಸರಕಾರಕ್ಕೂ ವಿಶೇಷ ಸಹಾಯವಾಗುವದು. ಈ ಚರ್ಮಕಾರ

ಸಮಾಜದ ಜನರು ಹಿಂದುಸ್ಥಾನದಲ್ಲಿ ಒಟ್ಟು ಜನಸಂಖ್ಯೆಯ 1/20 ರಷ್ಟು ಇರುವರು. ನಮ್ಮ ಮುಂಬಯಿ ಪ್ರಾಂತದಲ್ಲಿ ಇವರ ಜನಸಂಖ್ಯೆಯು 12.5 ಲಕ್ಷ ಇರುವದು. ಇವರು ಎಂದಿನಿಂದಲೂ ಭಿಕ್ಷೆ ಬೇಡುವ ವೃತ್ತಿಯುವರಲ್ಲ. ಕಾಯಕವೇ ಕೈಲಾಸ ಎಂಬ ಮಹಾನುಭಾವರಾದ ಬಸವಣ್ಣನವರ ಆರ್ಥಿಕ ಸುಧಾರಣೆಗೆ ಜೀವಾಳವಾಗಿರುವ ತತ್ವದಂತೆ ನಡೆಯುವ ಉದ್ಯೋಗಶೀಲರಾಗಿರುವರು. ಬ್ರಿಟಿಷರ ಕಾಲದಲ್ಲಿ ಎಲ್ಲರ ಉದ್ಯೋಗಗಳಂತೆ ಈ ಜನರ ಉದ್ಯೋಗವಾದರೂ ರಸಾತಳಕ್ಕೆ ಇಳಿಯಿತು. ಈ ವ್ಯವಸಾಯವು ಸರಕಾರದ ಅಲಕ್ಷ್ಯತನದಿಂದ ಕೆಟ್ಟು ಹೋದರೆ ಮತ್ತು ಸಂಪೂರ್ಣವಾಗಿ ಕೈ ಬಿಟ್ಟರೆ ಈ ಮೊದಲೇ ನಿರುದ್ಯೋಗಿಯಾದ ಜನರು ಗುಂಪುಗುಂಪಾಗಿ ತಿರುಗಾಡುತ್ತಿದ್ದಾಗ ಭಾರತದಲ್ಲಿ ಮತ್ತೆ ಎರಡು ಕೋಟಿ ಜನರ ನಿರುದ್ಯೋಗದ ಸಮಸ್ಯೆಯನ್ನು ಭಾರತ ಸರಕಾರಕ್ಕೆ ಬಿಡಿಸಬೇಕಾಗುವುದು. ಈ ಪ್ರಶ್ನೆಯು ಒಂದೇ ಪ್ರಾಂತದ ಸಮಸ್ಯೆಯಾಗಿಲ್ಲ. ಈ ಸಮಸ್ಯೆಯನ್ನು ಸಮಗ್ರ ಭಾರತದ ದೃಷ್ಟಿಯಿಂದ ನೋಡುವದು ಅಗತ್ಯವಿದೆ.

ಚರ್ಮಕಾರ ಸಮಾಜದಲ್ಲಿ ಒಕ್ಕಲುತನ ಮಾಡುವವರ ಸಂಖ್ಯೆ ಕಡಿಮೆ. ಇದು ಅವರ ವಂಶಪರಂಪರವಾಗಿ ಬಂದ ಉದ್ಯೋಗವಾಗಿದೆ. ಚರ್ಮಕಾರ ಸಮಾಜದಲ್ಲಿ ಮಚಗಾರರು ಸ್ವಲ್ಪ ಸಂಘಟಿತರಾಗಿ ದೊಡ್ಡ ಶಹರುಗಳಲ್ಲಿ ವಾಸಮಾಡಿ ಶಿಕ್ಷಣ ಪಡೆದು ಸುಧಾರಣೆ ಹೊಂದುತ್ತಿದ್ದಾರೆ. ಮಚಗಾರರಗಿಂತ ಢೋರ ಸಮಾಜವು ಹಿಂದುಳಿದದ್ದಿದೆ. ಮತ್ತು ಅದರಲ್ಲಿಯೂ ಮಾದಿಗರ ಸಮಾಜವು ಹೇಳ ತೀರದಷ್ಟು ಹಿಂದುಳಿದದ್ದಿದೆ. ಮಾದಿಗರು ಕೇವಲ ಹಳ್ಳಿಯಲ್ಲಿ ಇರುವರು. ಪ್ರತಿಯೊಂದು ಊರಲ್ಲಿ ಒಂದೆರಡು ಮನೆಗಳಾದರೂ ಅವೆ. ಈ ಚರ್ಮಕಾರ ಸಮಾಜುದವರು ಹರಿಜನರಾಗಿರುವರು. ಗಾಂಧೀಜಿಯವರ ಆತ್ಮಕ್ಕೆ ಶಾಂತಿ ಸಿಗಬೇಕಾದರೆ ಹರಿಜನರ ಉದ್ಧಾರವಾಗಬೇಕು. ಕೇವಲ ಗುಡಿಗುಂಡಾರ ಪ್ರವೇಶಕ್ಕೆ ಪರವಾನಿಗಿ ಕೊಟ್ಟರೆ ಸಾಮಾಜಿಕ ದೃಷ್ಟಿಯಿಂದ ಸ್ಥಾನಮಾನ ಹೆಚ್ಚಾಗಬಹುದು. ಆದರೆ ಹರಿಜನರು ಮೇಲಕ್ಕೇರಬೇಕಾದರೆ ಮುಖ್ಯವಾಗಿ ಅವರ ಆರ್ಥಿಕ ಪರಿಸ್ಥಿತಿ ಸುಧಾರಿಸುವುದು ಅಗತ್ಯವಾಗಿದೆ. ಹರಿಜರನರನ್ನು ಸಮಾಜದಲ್ಲಿ ತುಚ್ಛೀಕರಿಸಲಿಕ್ಕೆ ಅವರ ಬಡತನವೇ ಮುಖ್ಯ ಕಾರಣ. ಚರ್ಮಕಾರ ಸಮಾಜದಲ್ಲಿಯ ಚಿಕ್ಕಮಕ್ಕಳು ಶಹರುಗಳಲ್ಲಿ ಪಾಲಿಸ್ ಡಬ್ಬಿ ಹಿಡಿದುಕೊಂಡು ಹೊಟ್ಟೆಯ ಪಾಡಿಗಾಗಿ ಎದುರು ಕಂಡ ಜನರನ್ನು ನಮಸ್ಕರಿಸುತ್ತಾ ಪಾಲಿಸ್ ಮಾಡಲು ಕೊಡಿರೆಂದು ಯಾಚನೆ ಮಾಡುವ ಕರುಣಾಜನಕ ಸ್ಥಿತಿಯನ್ನು ಕಂಡರೆ ನಿಜವಾಗಿ ಮಾನವನ ಹೃದಯವು ಕರಗದೇ ಇರದು. ಈ ಜನರನ್ನು ನೋಡುವ ದೃಷ್ಟಿಯಲ್ಲಿ ಸಹ ಬದಲಾಗಲಿಕ್ಕೆ ಬೇಕು. ಇವರು ಕೀಳರೆಂದು ಇವರು ನಮ್ಮ ಸೇವಕರೆಂದು ತಿಳಿಯದೆ ನಮ್ಮ ಸಹಾಯಕ ಬಂಧುಗಳೆಂದು

ಮಾತಿನಲ್ಲಿ ಅಷ್ಟೇ ಹೇಳದೆ ಈ ಭಾವನೆಯನ್ನು ಅಂತಃಕರಣದಲ್ಲಿ ಅಳವಡಿಸಿಕೊಳ್ಳಬೇಕು. ಹೀಗೆ ಮಾಡುವದು ಸವರ್ಣೀಯರೆಂದು ಅನಿಸಿಕೊಳ್ಳುವವರ ಆದ್ಯಕರ್ತವ್ಯವಾಗಿದೆ.

ಹಿಂದುಸ್ತಾನದಲ್ಲಿ ಒಕ್ಕಲುತನವೇ ಮುಖ್ಯವಾಗಿ ಹೆಚ್ಚು ಜನರ ಉದ್ಯೋಗವಾಗಿದೆ. ಒಕ್ಕಲುತನಕ್ಕೆ ಬೇಕಾಗುವ ಮೊಟ್ಟೆ, ಮಿಣಿ, ಬಾರಕೋಲ, ಉಳಿದ ಸಾಮಾನುಗಳು, ಒಕ್ಕಲಿಗನ ಕಾಲುಗಳನ್ನು ಸುರಕ್ಷಿಸಲಿಕ್ಕೆ ಚಪ್ಪಲಿಗಳನ್ನು ತಯಾರ ಮಾಡಿಕೊಡುವವರು ಮಚುಗಾರ ಬಂಧುಗಳೆ. ಈ ಜನರ ಸಹಾಯವಿಲ್ಲದೆ ಒಕ್ಕಲುತನ ಸುಸೂತ್ರವಾಗಿ ಸಾಗಲಾರದು. ಇತ್ತೀಚೆಗೆ ಈ ವ್ಯವಸಾಯವು ಅಧೋಗತಿಗೆ ಹೋಗುತ್ತಿರುವುದರಿಂದ ಒಕ್ಕಲಿಗರು ತಮಗೆ ಅವಶ್ಯವಿದ್ದ ಚರ್ಮದ ಸಾಮಾನುಗಳನ್ನು ತರಲಿಕ್ಕೆ ತಮ್ಮ ಕೆಸಲವನ್ನು ಬಿಟ್ಟು ಶಹರುಗಳಿಗೆ ಹೋಗಬೇಕಾಗುತ್ತದೆ. ಇನ್ನೊಂದು ಮಾತು ಹೇಳಬೇಕಾದುದೇನೆಂದರೆ ಮೊದಲಿನ ಕಾಲದಲ್ಲಿ ಅಂದರೆ ಹತ್ತಿಪ್ಪತ್ತು ವರ್ಷಗಳ ಹಿಂದೆ ಸಹ ಚರ್ಮಕಾರರು ಒಕ್ಕಲುತನಕ್ಕೆ ಬೇಕಾಗಿರುವ ಉಪಯುಕ್ತವಿದ್ದ ಸಾಮಾನುಗಳನ್ನು ಮಾಡಿಕೊಡುವುದರ ಸಲುವಾಗಿ ಅವರಿಗೆ ಆಯಾ ಎಂದು ಧಾನ್ಯದ ರೂಪದಿಂದ ಕೊಡುವ ಪರಿಪಾಠವಿದ್ದಿತು. ಇತ್ತೀಚೆಗೆ ಮಧ್ಯಂತರ ಕಾಲದಲ್ಲಿ ಧಾನ್ಯದ ಧಾರಣಿ ಏರಿದ್ದರಿಂದ ಆಯಾ ಕೊಡುವ ಪದ್ಧತಿಯು ಬಂದಾಗಲಿಕ್ಕೆ ಬಂದಿದೆ. ಈ ಪರಿಸ್ಥಿತಿಯಲ್ಲಿ ಚರ್ಮಕಾರ ಸಮಾಜಕ್ಕೆ ದೊರೆಯುವ ಜನತೆಯ ಸಹಾಯ ಕಡಿಮೆಯಾಗುತ್ತ ನಡೆದಿರುವುದರಿಂದ ಸರಕಾರದ ಆರ್ಥಿಕ ನೆರವು ಸಿಗದಹೊರ್ತು ಗತ್ಯಂತರವಿಲ್ಲ.

ಇತ್ತೀಚೆಗೆ ಯಾಂತ್ರಿಕ ಸಲಕರಣೆಯಿಂದ ಬಾಟಾ ಮುಂತಾದ ಕಂಪನಿಗಳು ಯಂತ್ರಗಳ ಸಹಾಯದಿಂದ ಚರ್ಮದ ಸಾಮಾನುಗಳನ್ನು ಮಾಡಿ ಅಗ್ಗ ದರದಿಂದ ಮಾರುತ್ತಿರುವುದರಿಂದ ಈ ಜನರ ವ್ಯವಸಾಯದ ಮೇಲೆ ಬಹಳ ಕೆಟ್ಟ ಪರಿಣಾಮವಾಗುತ್ತಿದೆ. ಒಂದು ಯಂತ್ರ ಸಾವಿರಾರು ಜನರ ಉದ್ಯೋಗವನ್ನು ನುಂಗಿ ನೀರು ಕುಡಿಯುವ ಬಕಾಸುರನಂತೆ ಅದೆ ಎನ್ನಲು ಅಡ್ಡಿಯಿಲ್ಲ. ಈ ಚರ್ಮದಿಂದ ತಯಾರಾಗುವ ಸಾಮಾನುಗಳು ಭಾರತಕ್ಕೆ ಬೇಕಾಗುವಷ್ಟು ಭಾರತದಲ್ಲಿಯೇ ತಯಾರಾಗಬೇಕು. ಭಾರತವು ಎಲ್ಲ ವಿಷಯದಲ್ಲಿ ಸ್ವಯಂಪೂರ್ಣವಾಗಿರುವದು ಅವಶ್ಯವಿದೆ. ಹಿಂದುಸ್ಥಾನ ಕೈಗಾರಿಕೆಯ ವ್ಯವಸಾಯಗಳಲ್ಲಿ ಎರಡನೇ ಉದ್ಯೋಗವಾದ ಚರ್ಮದ ಉದ್ಯೋಗವು ಸ್ವಯಂಪೂರ್ಣವಾಗುವದು ಅತ್ಯಂತ ಅವಶ್ಯವಾಗಿದೆಯೆಂದು ಹೇಳದಿರಲಾರೆನು.

ಇನ್ನೊಂದು ದುರ್ದೈವದ ಸಂಗತಿಯೆಂದರೆ ನಮ್ಮ ದೇಶದಲ್ಲಿಯ ಕಚ್ಚಾ ಮಾಲನ್ನು ಪರದೇಶಕ್ಕೆ ಕಳಿಸಿ ಸ್ವಲ್ಪ ಹಣವನ್ನು ಸಂಪಾದಿಸಿ ಮುಂದೆ ಅದೇ ಕಚ್ಚಾ ಮಾಲಿನಿಂದ ತಯಾರಾದ ಪಕ್ಕಾ ಮಾಲು ಹೆಚ್ಚು ಹಣ ಕೊಟ್ಟು

ಕೊಂಡುಕೊಳ್ಳುವುದರಿಂದ ಪರದೇಶಕ್ಕೆ ಅಪರಿಮಿತ ಹಣವು ಹರಿದು ಹೋಗಿ ನಾವು ಬಡತನದಿಂದ ಬಳಲುತ್ತಿದ್ದೇವೆ. ಈ ಚರ್ಮಗಾರಿಕೆಯ ಸ್ಥಿತಿಯಾದರೂ ಹಾಗೆಯೇ ಅದೆ. ಕಚ್ಚಾ ಮಾಲು ಪರದೇಶಕ್ಕೆ ಕಳಿಸಲ್ಪಡುತ್ತದೆ. ಕಚ್ಚಾ ಮಾಲು ಕಳಿಸುವ ದೇಶವು ಆರ್ಥಿಕ ದೃಷ್ಟಿಯಿಂದ ಎಂದೂ ಭದ್ರತೆ ಹೊಂದಲಾರದು. ಬಾಟಾ ಮೊದಲಾದ ಚರ್ಮದ ಸಾಮಾನು ಮಾರಾಟ ಮಾಡುವ ಕಂಪನಿಯ ಅಂಗಡಿಗಳು ನಮ್ಮ ಮುಂಬಯಿ ರಾಜ್ಯದಲ್ಲಿ ಪ್ರತಿಯೊಂದು ಶಹರದಲ್ಲಿ ಇರುತ್ತವೆ. ಈ ಮೊದಲೇ ಮಾನ್ಯ ಸದಸ್ಯರೊಬ್ಬರು ಸೂಚಿಸಿದಂತೆ ಒಂದು ಲಕ್ಷ ವಸತಿಯುಳ್ಳ ಜನಸಂಖ್ಯೆಯ ಮೇಲಿನ ಶಹರುಗಳಲ್ಲಿಯಷ್ಟೇ ಇಂಥ ಅಂಗಡಿಗಳು ಇರಬೇಕೇ ವಿನಃ ಸಣ್ಣ ಊರುಗಳಲ್ಲಿ ಇರಕೂಡದು.

ನಮ್ಮ ದೇಶದಲ್ಲಿ ತಯಾರಾಗುವ ಸಾಮಾನುಗಳನ್ನೇ ತೆಗೆದುಕೊಳ್ಳಬೇಕೆಂದು ಹುಕುಮು ಮಾಡಿಯಾಗಲಿ ಅಥವಾ ದೇಶ ಭಕ್ತರು ದೇಶಾಭಿಮಾನದ ಮಾತುಗಳನ್ನಷ್ಟೇ ಹೇಳಿದರೆ ನಡೆಯದು. ಜಗತ್ತು ದಿನದಿನಕ್ಕೆ ಸಮೀಪವಾಗುತ್ತಾ ನಡೆದಿದೆ. ಅನೇಕ ಸುಂದರ ಪದಾರ್ಥಗಳನ್ನು ನೋಡಿ ಸುಂದರವಿಲ್ಲದ ಪದಾರ್ಥಗಳನ್ನು ತೆಗೆದುಕೊಳ್ಳಲು ಮನಸ್ಸು ಆಗಲಾರದ್ದು ಮಾನವನ ಸಹಜ ಸ್ಥಿತಿ. ಈಗ ಖಾದಿ ಅರಿವೆಯಲ್ಲಿಯೇ ಒಳ್ಳೇ ನಯವಾದ ಮನೋಹರವಾದ ಪದಾರ್ಥಗಳನ್ನು ತಯಾರು ಮಾಡುವಂತೆ ಚರ್ಮದ ಸಾಮಾನುಗಳನ್ನು ಸಹ ಒಳ್ಳೆ ಮನೋಹರವಾಗಿಯೂ ಆಕರ್ಷಕವಾಗಿಯೂ ತಯಾರು ಆಗುವಂತೆ ಮಾಡುವದು ಅವಶ್ಯವಿದೆ. ಅದಕ್ಕಾಗಿ ಚರ್ಮಕಾರ ಉದ್ಯೋಗ ಕಲಿಯುವವರ ಸಲುವಾಗಿ ಉತ್ತಮ ಶಾಲೆಗಳು ಪ್ರತಿಯೊಂದು ಜಿಲ್ಲೆಯಲ್ಲಿ ಆಗಬೇಕು. ನಮ್ಮ ಸರಕಾರದವರು ಈ ವಿಷಯದ ಕಡೆಗೆ ಅಲಕ್ಷಿಸಿಲ್ಲ. ಅಲ್ಲಲ್ಲಿ ಪಾರಾಪೆಟಿಕ್ ಸ್ಕೂಲ್ ತೆಗೆದಿದ್ದಾರೆ. ಆದರೆ ಇಷ್ಟೇ ಶಿಕ್ಷಣ ಈ ವಿಷಯದಲ್ಲಿ ಸಾಲದು. ಈ ಉದ್ಯೋಗದ ಸಂಪೂರ್ಣ ಜ್ಞಾನವು ಸಿಗುವ ಸಲುವಾಗಿ ಸ್ಕಾಲರಶಿಪ್ ಕೊಟ್ಟು ಉಚ್ಚ ಶಿಕ್ಷಣದ ಸಲುವಾಗಿ ಪರದೇಶಕ್ಕೆ ಕಳಿಸಿಕೊಡುವುದು ಅವಶ್ಯ. ಕಾಲಮಾನ ಪರಿಸ್ಥಿತಿಗೆ ಅನುಸಾರವಾಗಿ ಪ್ರತಿಯೊಂದು ಉದ್ಯೋಗದಲ್ಲಿ ಪ್ರಗತಿಯಾಗುವದು ಅವಶ್ಯವಿದ್ದಂತೆ ಚರ್ಮಕಾರರ ಸಾಮಾನುಗಲ್ಲಿ ಸಹ ಪ್ರಗತಿಯಾಗಬೇಕು. ಒಂದನೇ ಪಂಚ ವಾರ್ಷಿಕ ಯೋಜನೆಯಲ್ಲಿ ಮುಂಬಯಿ ಹತ್ತಿರ ಬಾಂದ್ರಾದಲ್ಲಿ ಒಂದು ಸಾಲೆಯ ಸಲುವಾಗಿ ಸರಕಾರದವರು ಹೆಚ್ಚು ಹಣ ಖರ್ಚು ಮಾಡಿರುವರು. ಮುಂಬಯಿ ಕಾರ್ಪೊರೇಷನ್ನವು ಒಂದು ಸಣ್ಣ ಸರಕಾರದಷ್ಟು ಉತ್ಪನ್ನವುಳ್ಳದ್ದಾಗಿದೆ. ಈ ಸಾಲೆಯನ್ನು ಮುಂಬಯಿ ಕಾರ್ಪೊರೇಷನ್ನವು ನಡೆಸಬಹುದು. ಆದಕಾರಣ ಅಲ್ಲಿ ಖರ್ಚು ಮಾಡದೆ ಬೇರೆ ಯಾವುದಾದರೊಂದು ಜಿಲ್ಲೆಯ ಸ್ಥಳದಲ್ಲಿ ಖರ್ಚು ಮಾಡಿದ್ದರೆ ಯೋಗ್ಯವಾಗುತ್ತಿತ್ತೆಂದು ನನ್ನ ಅಭಿಪ್ರಾಯ. ಆದರೂ ಎರಡನೇ ಪಂಚವಾರ್ಷಿಕ ಯೋಜನೆಯಲ್ಲಾದರೂ ಇಂಥ ಸಾಲೆಗಳಿಗೆ ಹೆಚ್ಚಾಗಿ ಆಸ್ಪದ ಸಿಗುವದು ಅವಶ್ಯವಿದೆ.

ಈ ಚರ್ಮಕಾರರ ವ್ಯವಸಾಯುದ ಜನರು ಪ್ರತಿಯೊಂದು ಕಡೆ ಸಹಕಾರಿ ಸಂಘ ಸ್ಥಾಪಿಸಬೇಕು. ಸಣ್ಣ ಹಳ್ಳಿಗಳಲ್ಲಿ ಒಬ್ಬಿಬ್ಬರು ಇರುವುದರಿಂದ 8–10ಸಣ್ಣ ಹಳ್ಳಿಗಳು ಕೂಡಿ ಸಹಕಾರಿ ಸಂಘಗಳನ್ನು ಸ್ಥಾಪಿಸಬೇಕು. ಸರಕಾರದವರು ಕೆಲದಿನಗಳ ಮಟ್ಟಿಗೆ ಸೆಕ್ರಟರಿ ಪಗಾರ ಸರಕಾರದವರು ಕೊಡುವದು ಸ್ತುತ್ಯವಾದರೂ ಇಷ್ಟೇ ಸಾಲದು ಈ ಜನರ ಸಂಘಗಳಿಗೆ ಚರ್ಮಕಾರರ ಉದ್ಯೋಗವು ಬೆಳೆಯುವುದರ ಸಲುವಾಗಿ ಬೇಕಾಗುವಷ್ಟು ಹಣ ಹತ್ತು ವರ್ಷಗಳವರೆಗೆ ಬಡ್ಡಿಯಿಲ್ಲದೆ ಕೊಡಬೇಕು ಮತ್ತು ಪೋಲಿಸರಿಗೆ, ಹೋಮ ಗಾರ್ಡ್ಸರಿಗೆ ಬೇಕಾಗುವ ಚಪ್ಪಲಿಗಳ ಬಗ್ಗೆ ಮತ್ತು ಚರ್ಮದ ಸಾಮಾನುಗಳ ಸಲುವಾಗಿ ಯಾವನೊಬ್ಬ ವ್ಯಕ್ತಿಗೆ ಕೆಲಸವನ್ನು ವಹಿಸಿಕೊಡದೆ, ಸಹಕಾರಿ ಸಂಘಗಳಿಗೆ ಟೆಂಡರ್ ಕೊಡುವದು ಮತ್ತು ಸಾಮಾನು ತೆಗೆದುಕೊಳ್ಳುವುದು ಅವಶ್ಯವಿದೆ. ವ್ಯಕ್ತಿಗೆ ಯಾವ ಟೆಂಡರ್ ಕೊಡಬಾರದು. ಚರ್ಮಕಾರ ಸಮಾಜದವರಾದರೂ ಸರಕಾರದ ಕಡೆಗೆ ಯಾಚನೆ ಮಾಡದೆ ಕೇವಲ ಪರಾವಲಂಬಿಗಳಾಗಿ ಕೂಡದೆ ಸರಕಾರದ ಧೋರಣೆಯ ಪ್ರಕಾರ ಸಹಕಾರೀ ಸಂಘಗಳನ್ನು ಸ್ಥಾಪಿಸಿಕೊಂಡು ಅವುಗಳ ಮುಖಾಂತರ ತಮ್ಮ ದಂಧೆಯು ಸರ್ವಾಂಗಸುಂದರವಾಗಿ ಉತ್ತೇಜನ ಹೊಂದುವಂತೆ ಮಾಡಬೇಕು. ಮತ್ತೊಂದು ಸಂಗತಿಯೆಂದರೆ ಇತ್ತೀಚೆಗೆ ನವಸಾರಿ ಲೆದರ ವರ್ಕಿಂಗ ಸೆಂಟರ್ ಬಂದಾಗಿದೆಂದು ಕೇಳುತ್ತೇನೆ. ಅಂಥ ಕೇಂದ್ರಗಳನ್ನು ಹಿಂದುಳಿದ ಭಾಗದ ಕರ್ನಾಟಕದ ಜಿಲ್ಲೆಗಳಲ್ಲಿ ಪ್ರಾಮುಖ್ಯವಾಗಿ ವಿಜಾಪೂರ ಜಿಲ್ಲೆಗೆ ಕೊಡಬೇಕೆಂದು ವಿನಂತಿಸದೇ ಇರಲಾರೆನು.

ಕೊನೆಯದಾಗಿ ಚರ್ಮದ ಉದ್ಯೋಗದ ಸುಧಾರಣೆಯ ಬಗ್ಗೆ ಚೌಕಶಿ ಮಾಡುವದರ ಸಲುವಾಗಿ ಒಂದು ತಜ್ಞ ಸಮಿತಿಯನ್ನು ನೇಮಿಸಬೇಕೆಂದು ಈ ಠರಾವನ್ನು ಶ್ರೀಕಬಾಡಿಯವರು ತಂದಿದ್ದಾರೆ. ಆದರೆ ಮುಂಬಯಿ ರಾಜ್ಯದಲ್ಲಿ ಇಂಥ ಅನೇಕ ಸಮಸ್ಯೆಗಳಿವೆ. ಈ ದಂಧೆಯಂತೆ ಮುಂಬಯಿ ಪ್ರಾಂತದಲ್ಲಿ ಬಡಿಗ, ಕಮ್ಮಾರ, ಕುಂಬಾರ, ಬಳಿಗಾರ, ನೇಕಾರ, ಕಂಬಳಿ ತಯಾರ ಮಾಡುವ ಕುರುಬರೇ ಮೊದಲಾದ ಎಲ್ಲ ಕೈಗಾರಿಕೆಗಳಿಗೆ ಉತ್ತೇಜನ ಸಿಗುವಂತೆ ಏನು ಮಾಡಬೇಕೆಂಬ ಬಗ್ಗೆ ವಿಚಾರ ಮಾಡಲು ಒಂದು ಸಮಿತಿಯನ್ನು ನೇಮಿಸುವದು ಅತ್ಯವಶ್ಯವಾಗಿದೆಯೆಂದು ಸರಕಾರಕ್ಕೆ ಅಗ್ರಹಪೂರ್ವಕವಾಗಿ ಇದೇ ಸಂದರ್ಭದಲ್ಲಿ ಸೂಚಿಸುತ್ತೇನೆ. ಇದೊಂದು ವಿಷಯವನ್ನು ವಿಚಾರಮಾಡುತ್ತಿರುವಾಗ ಅನ್ಯವ್ಯವಸಾಯದ ವಿಷಯಗಳು ಮುಂದೆ ಬಂದು ನಿಲ್ಲುತ್ತವೆ. ಮುಂಬಯಿ ಪ್ರಾಂತದಲ್ಲಿಯ ಕೈಗಾರಿಕೆಯ ಎಲ್ಲ ವ್ಯವಸಾಯಗಳಿಗೆ ನೇಮಿಸುವದು ಅವಶ್ಯವಿದೆಯೆಂದು ಮತ್ತೊಮ್ಮೆ ಹೇಳಿ ಈ ಠರಾವನ್ನು ತಂದ ಮಾನ್ಯ ಮಿತ್ರರಾದ ಶ್ರೀಕಾಬಾಡಿಯವರನ್ನು ಅಭಿನಂದಿಸಿ, ಈ ಠರಾವಿಗೆ ಬೆಂಬಲ ಕೊಟ್ಟು ನನ್ನ ಭಾಷಣವನ್ನು ಮುಗಿಸುತ್ತೇನೆ.

# ಮುಂಗಡ ಪತ್ರದ ಮೇಲಿನ ಚರ್ಚೆ

8ನೇ ಮಾರ್ಚ್ 1955

ಮಾನ್ಯ ಸಭಾಪತಿಗಳೇ, ನಮ್ಮ ಮುಂಬಯಿ ಪ್ರಾಂತದ ಮಾನ್ಯ ಅರ್ಥಮಂತ್ರಿಗಳವರು ಈ ಸಭೆಗೆ ಸಾದರ ಪಡಿಸಿದ ಕೊರೆತೆಯಿಲ್ಲದ ಅಂದರೆ ಚಿಕ್ಕ ಉಳಿತಾಯದ ಮುಂಗಡ ಪತ್ರಿಕೆಯ ಬಗ್ಗೆ ಮಾತನಾಡಲು ನನಗೆ ಸಂತೋಷವಾಗುತ್ತದೆ. ಹೋದ ವರುಷಕ್ಕಿಂತ ಈ ವರುಷ ಶಿಕ್ಷಣ ಖಾತೆಗೆ 3 ಕೋಟಿ 35 ಲಕ್ಷ ರೂಪಾಯಿ ಹೆಚ್ಚು ಖರ್ಚು ಮಾಡಿದರೂ ಯಾವುದೇ ಹೊಸ ಕರ ಹೇರಿಲ್ಲ. ಮತ್ತು ಸದ್ಯಕ್ಕಿರುವ ಕರ ಭಾರ ಹೆಚ್ಚಿಸಿಲ್ಲದಿದ್ದರೂ ಈ ಉಳಿತಾಯದ ಮುಂಗಡ ಪತ್ರಿಕೆ ಸಾದರ ಪಡಿಸಿದ್ದಕ್ಕೆ ಮಾನ್ಯ ಅರ್ಥಮಂತ್ರಿಗಳವರು ನಿಜವಾಗಿಯೂ ಅಭಿನಂದನೆಗೆ ಪಾತ್ರರು.

ಈ ವರ್ಷದ ಮುಂಗಡ ಪತ್ರಿಕೆಯನ್ನು ಕಾಂಗ್ರೇಸ್ ಸದಸ್ಯರೆಲ್ಲ ಶ್ಲಾಘಿಸಿರುವರಲ್ಲದೆ ವಿರೋಧಿ ಪಕ್ಷದ ಸದಸ್ಯರಾದ ಶ್ರೀ ರಾಮದಾಸ ಕಿಲಾಚಂದರವರೂ ಮತ್ತು ಅನೇಕ ಪತ್ರಿಕಾಕರ್ತರೂ ಶ್ಲಾಘಿಸಿರುತ್ತಾರೆ. ವಿರೋಧಿ ಪಕ್ಷದ ಮಾನ್ಯ ಸದಸ್ಯರಾದ ಶ್ರೀಜಾಧವರು ಇದು ರೈತರ ಉನ್ನತಿಗೆ ಸಹಕಾರಿಯಾಗಿಲ್ಲವೆಂದರೆ ಮಾನ್ಯ ಶ್ರೀ ಜೋಶಿಯವರು ಇದು ತೋರಿಕೆಗೆ ಸುಂದರವಿದೆಯೆಂದು ಅಂದಿರುವರು. ಮಾನ್ಯ ಶ್ರೀ ಭರೂಚಾರವರೂ ಸಹ ಈ ಮುಂಗಡ ಪತ್ರಿಕೆಯನ್ನು ಟೀಕಿಸಿರುವರು. ಮಾನ್ಯ ಶ್ರೀಭಗೀರಥ ಝಾರವರು ಭಾವನಾ ಪ್ರಧಾನ ಭಾಷಣ ಮಾಡಿದರು. ಮುಂಬಯಿ ರಾಜ್ಯದಲ್ಲಿಯ ಎಲ್ಲ ಜನತೆಯ ಸರ್ವಾಂಗೀಣ ಉನ್ನತಿಯಾಗಲು ಸಾವಿರಾರು ಕೋಟಿ ಹಣ ಬೇಕಾಗುವುದು. ನಮ್ಮ ಪ್ರಾಂತದ ವಾರ್ಷಿಕ ಉತ್ಪನ್ನವಾದ 72 ಕೋಟಿ ರೂಪಾಯಿಯಲ್ಲಿಯೇ ಎಲ್ಲ ಸುಧಾರಣೆಯಾಗುವುದು ಸಾಧ್ಯವಿಲ್ಲ. ಹಿಂದುಸ್ತಾನದಲ್ಲಿ ಮತ್ತು ಅದರ ಅಂಗವಾದ ನಮ್ಮ ಮುಂಬಯಿ ರಾಜ್ಯದಲ್ಲಿ 100ಕ್ಕೆ 80 ರಷ್ಟು ಹಳ್ಳಿಗರಿದ್ದಾರೆಂಬ ಸಂಗತಿಯು ಈ ಸಭಾಗೃಹದ ಕಾಂಗ್ರೇಸ ಮತ್ತು ವಿರೋಧಿ ಪಕ್ಷದ ಎಲ್ಲ ಸದಸ್ಯರು ಒಪ್ಪುವ ಮಾತು. ಈ ಮುಂಗಡ ಪತ್ರಿಕೆಯು ಹಳ್ಳಿಗರ ಉದ್ಧಾರಕ್ಕೆ ಸಹಯಾಕವಾಗಿದೆಯೋ ಇಲ್ಲವೋ ವಿಚಾರ ಮಾಡೋಣ. ಭಾರತದಲ್ಲಿಯ ಜನತೆಯ ಉದ್ಧಾರದ ಸಲುವಾಗಿಯೇ ಪಂಚವಾರ್ಷಿಕ ಯೋಜನೆಯನ್ನು ತಯಾರಿಸಲಾಗಿದೆ. ಅದರ ಕಾರ್ಯಾಚರಣೆಗಾಗಿ ಮುಂಬಯಿ ರಾಜ್ಯದಲ್ಲಿ ಐದು ವರ್ಷಗಳಲ್ಲಿ 136ಕೋಟಿ ರೂಪಾಯಿ ಖರ್ಚು ಮಾಡಿರುವುದಲ್ಲದೆ ಈ ವರ್ಷ ಸುಮಾರು 33 ಕೋಟಿ ರೂಪಾಯಿ ಖರ್ಚು ಮಾಡಲಿದ್ದಾರೆ. ಇದಲ್ಲದೆ ಕಡಿಮೆ ಉತ್ಪನ್ನದ ಜನರ ಸಲುವಾಗಿ ವಸತಿ ಮುಂತಾದ್ದರ ಬಗ್ಗೆ 17.5 ಕೋಟಿ

ಹಣದ ಯೋಜನೆಯನ್ನು ತಯಾರಿಸಿ ಭಾರತ ಸರ್ಕಾರಕ್ಕೆ ಕಳುಹಿಸಿ ಕೊಡಲಾಗಿದೆ. ರೈತನ ಉದ್ಧಾರವಾಗಬೇಕಾದರೆ ಅವನ ಅಜ್ಞಾನ ತೊಲಗಬೇಕು. ಮತ್ತು ಅವನ ಆರ್ಥಿಕ ಪ್ರಗತಿಗೆ ಸಹಾಯಕವಾಗಲು ಶೇತಕೀ ಸುಧಾರಣೆಯಾಗಬೇಕು. ರೈತನ ಸುಧಾರಣೆಗಾಗಿ, ಶಿಕ್ಷಣ, ಆರೋಗ್ಯ, ಶೇತಕೀ ಸುಧಾರಣೆ ಮುಂತಾದ ವಿಷಯವಾಗಿ ಈ ಮುಂಗಡ ಪತ್ರಿಕೆಯು ಸಹಾಯವಾಗಲಿದೆ. ಶಿಕ್ಷಣದ ವಿಷಯವಾಗಿ ಈಗಾಗಲೇ 13 ಕೋಟಿ ರೂಪಾಯಿ ಖರ್ಚು ಮಾಡುತ್ತಿದ್ದು ಈ ವರ್ಷ 1 ಕೋಟಿ 35 ಲಕ್ಷ ರೂಪಾಯಿ ಖರ್ಚು ಮಾಡುವವರಿರುವರು. ಈಗ ಒಂದು ಸಾವಿರ ಶಿಕ್ಷಕರನ್ನು ನೇಮಿಸಿದ್ದು ಇನ್ನುಮುಂದೆ ಆರು ಸಾವಿರ ಶಿಕ್ಷಕರನ್ನು ನೇಮಿಸಿಕೊಳ್ಳಲಿರುವರು. ಒಟ್ಟು 10 ಸಾವಿರ ಶಿಕ್ಷಕರು ಹೆಚ್ಚಾಗುವರು. ಇದರಿಂದ ಈಗ ಒಂದು ಸಾವಿರ ಜನಸಂಖ್ಯೆಯುಳ್ಳ ಹಳ್ಳಿಯಲ್ಲಿ ಶಾಲೆ ಇದ್ದರೆ, ಇನ್ನುಮುಂದೆ 500 ಜನಸಂಖ್ಯೆಯುಳ್ಳ ಪ್ರತಿಯೊಂದು ಹಳ್ಳಿಯಲ್ಲಿಯೂ ಸಹ ಸಾಲೆ ಪ್ರಾರಂಭಿಸಲ್ಪಡುತ್ತದೆ. ಏಳು ಸಾವಿರ ಶಾಲಾ ಕಟ್ಟಡಗಳು ಆಗಿವೆ. ನಮ್ಮ ಜಿಲ್ಲೆಯಲ್ಲಿ ತಾಂಡೆಗಳಲ್ಲಿ ಸುಂದರ ಶಾಲಾ ಕಟ್ಟಡ ತಯಾರಾಗಿದೆ. ಈ ವರ್ಷ ಬಿಲ್ಡಿಂಗ ಸಲುವಾಗಿ 50 ಲಕ್ಷ ಹಣ ಹಾಕಿರುವರು. ಯುನಿವ್ಹರ್ಸಿಟಿ ಬಗ್ಗೆ ಶೇಕಡಾ 25 ರಷ್ಟು ಪ್ರಮಾಣ ಹೆಚ್ಚು ಮಾಡಿರುವರು. ಇದು ಶಿಕ್ಷಣದ ಸಹಾಯದ ಮಾತಾಯಿತು. ಕಾಲೇಜು ಹಾಯಸ್ಕೂಲ ಶಿಕ್ಷಣಕ್ಕಿಂತ ಅದರ ತಳಹದಿಯ ಶಿಕ್ಷಣವಾದ ಪ್ರಾಥಮಿಕ ಶಿಕ್ಷಣಕ್ಕೆ ಹೆಚ್ಚು ಸಹಾಯ ಮಾಡಿದ್ದು ಅತ್ಯಂತ ಶ್ಲಾಘನೀಯವಾದುದು.

ಇನ್ನು ರೈತನಿಗೆ ಆಧಾರವಾಗಿರುವ ಒಕ್ಕಲುತನದ ಸುಧಾರಣೆ ಭುಮಿಯ ಸುಧಾರಣೆ ಬಗ್ಗೆ ಕೈಕೊಂಡಿರುವ ಕಾರ್ಯಗಳ ಬಗ್ಗೆ ಸಹಾಯ ಮಾಡಿರುವುದನ್ನು ನೋಡಿದರೆ ರೈತನಿಗೆ ಕೇವಲ ಬಾವಿ ಸಲುವಾಗಿ 50 ಲಕ್ಷ ಕೊಡಲಿದ್ದಾರೆ. ಒಟ್ಟು 250 ಲಕ್ಷ ರೂಪಾಯಿ ಹಣ ಸಾಲ ರೂಪವಾಗಿ ಕೊಡಲಿದ್ದಾರೆ. ಮತ್ತು 850 ಲಕ್ಷ ಬಾಕಿ ಇದೆ. ಜಮೀನ ಸುಧಾರಣೆಗೆ ಅತ್ಯಂತ ಸಹಾಯಕವಾಗಲಿರುವ ಒಡ್ಡುಗಳ ಸಲುವಾಗಿ ಹಣ ಖರ್ಚು ಮಾಡಲಾಗುವದು. ಇದಲ್ಲದೆ ಮೆಕಾನಿಕಲ್ ಕಲ್ಟಿವೇಶನ್ ಮಾಡಲು ಯಾಂತ್ರಿಕ ಸಲಕರಣೆ ಅಂದರೆ ಟ್ರ್ಯಾಕ್ಟರ್, ಬುಲ್ಡೋಝರ್‌ಗಳನ್ನು ಕೊಟ್ಟು ಸಹಾಯ ಮಾಡಿದ್ದಾರೆ. ಯಾಂತ್ರಿಕ ಸಲಕರಣೆಗಳಿಂದ ಸರಕಾರಕ್ಕೆ ಉತ್ಪನ್ನವಿದೆಯೆಂದು ಮತ್ತು ಬಂದು ಮಾಡಬೇಕೆಂದು ಮಾನ್ಯ ಶ್ರೀ ಭರೂಚಾರವರು ಹೇಳುವದು ಸರಿಯಾಗಲಾರದು. ಟ್ರ್ಯಾಕ್ಟರ್, ಬುಲ್‌ಡೋಝರ್‌ಗಳಿಂದ ನಮ್ಮ ವಿಜಾಪೂರ ಜಿಲ್ಲೆಯಲ್ಲಿ ಒಕ್ಕಲುತನಕ್ಕೆ ಬಹಳ ಸಹಾಯವಾಗಿದೆ. ಅವಕ್ಕೆ ಜನರ ಬೇಡಿಕೆಯಾದರೂ ವಿಶೇಷವಾಗಿದೆ. ಸಹಕಾರಿ ಸಂಘಗಳನ್ನು ಸ್ಥಾಪಿಸಿ ಅವುಗಳ ಮುಖಾಂತರ ಈ ಕೆಲಸ ಮಾಡಬೇಕೆಂದು ಮಾನ್ಯ ಶ್ರೀ ಭರೂಚಾರವರ ಅಭಿಪ್ರಾಯವು ಸಮಂಜಸವಾಗಿದ್ದರೂ ಜನರಲ್ಲಿ ಇನ್ನೂ ಸಂಘಟನೆ ಅಷ್ಟು ಬೆಳೆದಿಲ್ಲ.

ಭೂಮಿಗೆ ನಿರುಣಿಸುವದರ ಸಲುವಾಗಿ ದೊಡ್ಡ ನೀರಾವರಿ ಯೋಜನೆಯ ಬಗ್ಗೆ ಈ ಮುಂಗಡ ಪತ್ರಿಕೆಯಲ್ಲಿ ಘಟಪ್ರಭಾ ಮೊದಲಾದ ಯೋಜನೆಗಳ ಸಲುವಾಗಿ 786 ಲಕ್ಷ ರೂಪಾಯಿ ಖರ್ಚು ಮಾಡಲಾಗುವುದೆಂದು ಅದೆ 1885 ಚಿಕ್ಕ ನೀರಾವರಿ ಕೆಲಸ ಪ್ರಾರಂಭಿಸಿದವುಗಳಲ್ಲಿ ಈಗಾಗಲೇ 1180 ಕೆಲಸಗಳು ಮುಗಿದಿವೆ.

ಜನತೆಯ ಆರೋಗ್ಯದ ಸಲುವಾಗಿ ನಮ್ಮ ಸರಕಾರವು ಬಹಳ ಸಹಾಯಮಾಡಿದೆ. ಮಲೇರಿಯಾ ರೋಗವು ಸಂಪೂರ್ಣವಾಗಿ ಇಲ್ಲದಂತಾಗಿದೆ. ಈ ಸಂದರ್ಭದಲ್ಲಿ ಆರೋಗ್ಯದ ಬಗ್ಗೆ ಒಂದು ಸೂಚನೆಯನ್ನು ಮಾಡಬೇಕೆಂದಿರುವೆನು. ಇತ್ತೀಚೆಗೆ ಉತ್ತಮ ಆಹಾರದ ಕೊರತೆಯ ಮೂಲಕ ಕ್ಷಯರೋಗಿಗಳ ಸಂಖ್ಯೆ ಹೆಚ್ಚಾಗುತ್ತಿದೆ. ಕ್ಷಯರೋಗವು ಪ್ರಾರಂಭದಲ್ಲಿ ಉಪಚಾರ ಮಾಡಿದರೆ ತೀವ್ರ ಗುಣವಾಗುವದು. ಬಲಿತ ಬಳಿಕ ಹತ್ತಾರು ಸಾವಿರ ರೂಪಾಯಿ ಖರ್ಚು ಮಾಡಬೇಕಾಗುತ್ತದೆ. ಅಲ್ಲದೆ ಗುಣವಾದರೂ ಸಹ ನಿಶ್ಚಿತವಾಗಿ ಹೇಳಲು ಬರುವಂತಿಲ್ಲ. ಒಂದು ವೇಳೆ ಗುಣವಾದರೆ ಮನೆತನದ ಸಂಪತ್ತೆಲ್ಲ ಖರ್ಚಾಗಿ ಬಿಡುತ್ತದೆ. ಆದ್ದರಿಂದ ಪ್ರಾರಂಭದಲ್ಲಿ ಈ ರೋಗದ ಚಿಕಿತ್ಸೆ ಮಾಡಿ ಉಪಾಯ ಮಾಡುವದು ಉತ್ತಮ. ಪ್ರತಿಯೊಂದು ತಾಲೂಕಿಗೆ ಸರಕಾರೀ ಆಸ್ಪತ್ರೆ ಇದ್ದೇ ಇರುವರು. ಅಲ್ಲಿಯ ಡಾಕ್ಟರರಿಗೆ ಕ್ಷಯರೋಗ ನಿವಾರಣೆಯ ಶಿಕ್ಷಣ ಕೊಟ್ಟು ಅದರ ಉಪಚಾರ ಮಾಡುವದು ಅವಶ್ಯವಿದೆ.

ಕಾಯದೆ ಮತ್ತು ಸುವ್ಯವಸ್ಥೆಯ ಸಲುವಾಗಿ ನಮ್ಮ ಸರಕಾರವು ಲಕ್ಷ ಕೊಡುತ್ತಿದ್ದರೂ ಆ ಬಗ್ಗೆ ಇನ್ನಿಷ್ಟು ಲಕ್ಷಕೊಡುವುದು ಅವಶ್ಯವಿದೆ. ಸ್ವಾತಂತ್ರ್ಯ ಪ್ರಾಪ್ತಿಯಾದ ನಂತರ ಸ್ವತಂತ್ರವೆಂದರೆ ಸ್ವೇಚ್ಛಾವೃತ್ತಿಯಾಗಿದೆಯೆಂದು ಕೆಲವರು ತಿಳಿದಿದ್ದಾರೆ. ಆಡಳಿತೆಯಲ್ಲಿ ಇನ್ನಷ್ಟು ಬಿಗುವು ಅಗತ್ಯವಿದೆ. ಹೋಮಗಾರ್ಡ್ಸ್‌ದ ಅವಶ್ಯಕತೆಯಿಲ್ಲವೆಂದು ಶ್ರೀ ಭರೂಚಾರ ವಾದ ಯೋಗ್ಯವಲ್ಲ. ಹೋಮಗಾರ್ಡ್ಸ್ ಜನರು ಕೆಲಸ ಮಾಡುವ ಸಮಾಜ ಸೇವಕರದ್ದು ಅವರಿಂದ ಜನತೆಗೆ ಬಹಳ ಸಹಾಯವಾಗುತ್ತಲಿದೆ.

ಈ ನಮ್ಮ ಸರಕಾರವು ಕೈಕೊಂಡಿರುವ ಕಾರ್ಯಗಳಲ್ಲಿ ಹೊಸ ಸುಧಾರಣೆಗಳಿಲ್ಲವೆಂದು ಅನ್ನುವುದು ತಪ್ಪು. ಜನತೆಯ ಕೆಲಸ ತೀವ್ರ ಆಗಬೇಕೆಂದು ಸದ್ದುದ್ದೇಶದಿಂದ ಪಿ.ಡಬ್ಲ್ಯೂ.ಡಿ. ರಸ್ತೆ, ನೀರಿನ ಪೂರೈಕೆ ಮೊದಲಾದ ಕೆಲಸಗಳನ್ನು ಡಿ.ಎಲ್.ಬಿ.ಕಡೆಗೆ ಕೊಟ್ಟು ಅಧಿಕಾರ ವಿಕೇಂದ್ರಿಕರಣ ಮಾಡಿದ್ದು ಸ್ತುತ್ಯವಾದುದು. ನಮ್ಮ ಜಿಲ್ಲೆಯಲ್ಲಿ ಡಿಸ್ಟ್ರಿಕ್ಟ ಲೋಕಲ್ ಬೋರ್ಡದ ಆದರ್ಶ ಕಾರ್ಯಕರ್ತರಾಗಿರುವ ಇಂಜಿನಿಯರಿಂದ ಹಳ್ಳಿಗರಿಗೆ ಅಪಾರ ಲಾಭವಾಗಿದೆ. ಪಂಚಾಯತಿಗಳ ಸಂಖ್ಯೆ ಸಹ 4 ಸಾವಿರ ಇದ್ದದ್ದು ಈಗ 6 ಸಾವಿರಕ್ಕೆ ಬಂದು ಮುಟ್ಟಿದೆ.

ನಮ್ಮ ಅರ್ಥ ಮಂತ್ರಿಯವರು ಪಾಶ್ಚಾತ್ಯ ಪದ್ಧತಿಯ ವೈದ್ಯಕೀಯ ಪದವೀಧರರಾಗಿದ್ದರೂ ಆಯುರ್ವೇದದ ಸುಧಾರಣೆಯ ಬಗ್ಗೆ ಲಕ್ಷ ಕೊಟ್ಟದ್ದು ಬಹಳ ಆನಂದದ ಸಂಗತಿಯಾಗಿದೆ. ಆಯುರ್ವೇದದ ವಿದ್ಯೆಯು ಇಂದಿನ ವರೆಗೆ ದುರ್ಲಕ್ಷಿಸಲ್ಪಟ್ಟದ್ದರಿಂದ ಯಾವ ಪ್ರಗತಿ ಅಥವಾ ಬದಲಾವಣೆ ಆಗಿಲ್ಲ. ಈ ಮೂಲಕ ಆಯುರ್ವೇದದ ಪದ್ಧತಿಯಲ್ಲಿ ಸಂಶೋಧನೆಯ ಕೆಲಸ ನಡೆಸುವುದು ಅಗತ್ಯವಾಗಿದೆ. ಇದಲ್ಲದೆ ಮುಖ್ಯ ಮಂತ್ರಿಗಳವರ ಕಡೆಗೆ ಒಕ್ಕಲುತನ ಮೊದಲಾವುಗಳ ಬಗ್ಗೆ ಸಂಶೋಧನೆಯ ಕಾರ್ಯ ನಡೆಸಲು 3 ಲಕ್ಷ ಹಣ ಇಟ್ಟಿರುವದು ಯೋಗ್ಯವಾದರೂ ಶ್ರೀಮತಿ ಬಾಬರವರು ಹೇಳಿದಂತೆ ಇಷ್ಟು ಹಣವು ಸದ್ಯಕ್ಕೆ ಕಡಿಮೆಯಾಗುವದು. ಹಿಂದುಳಿದ ವರ್ಗಗಳ ಸಲುವಾಗಿ ಸರಕಾರವು ಅಲಕ್ಷ ಮಾಡುವದೆಂಬ ವಾದದಲ್ಲಿ ಯಾವ ಹುರುಳಿಲ್ಲ. ನಮ್ಮ ಸರಕಾರವು ಆ ಬಗ್ಗೆ ಸಾಕಷ್ಟು ಲಕ್ಷ ಕೊಡುತ್ತಿದೆ.

ಇನ್ನೊಂದು ವಿಷಯದ ಬಗ್ಗೆ ನಮ್ಮ ಸರಕಾರಕ್ಕೆ ಮತ್ತು ಮಾನ್ಯ ಮಂತ್ರಿಗಳಿಗೆ ಭಿನ್ನವಿಸಿಕೊಳ್ಳುವುದೇನಂದರೆ ಮುಂಬಯಿ ರಾಜ್ಯದಲ್ಲಿ ವಿಜಾಪೂರ ಜಿಲ್ಲೆಯು ಮೇಲಿಂದ ಮೇಲೆ ದುಷ್ಕಾಳ ಬೀಳುವ ಜಿಲ್ಲೆಯೆಂಬುದು ಸರಕಾರಕ್ಕೆ ಗೊತ್ತಿದೆ. ಮತ್ತು ಎಷ್ಟೋಸಾರಿ ಹೇಳಲಾಗಿದೆ. ವಿಜಾಪೂರ ಜಿಲ್ಲೆಯಲ್ಲಿ ಐದು ಹೊಳೆಗಳು ಹರಿಯುತ್ತಿದ್ದರೂ ಅವುಗಳ ಉಪಯೋಗವಾಗದೇ ನೀರಿನ ಅಪಾರ ಸಂಪತ್ತು ಹರಿದುಹೋಗಿ ಸಮುದ್ರಕ್ಕೆ ಕೂಡಿ ಹೋಗುತ್ತಲಿದೆ. ಹೊಳೆಗಳ ನೀರಿನ ಪಾತಾಳಿ ತೀರ ಮೇಲಕ್ಕೆ ಇರುವುದರಿಂದ ಉಪಯೊಗವಾಗುವುದಿಲ್ಲವೆಂದು ಉತ್ತರ ಹೇಳಲಾಗುತ್ತದೆ. ನೀರಾವರಿ ಯೋಜನೆ ಮಾಡಿ ನೀರನ್ನು ಒಕ್ಕಲುತನಕ್ಕೆ ಉಪಯೋಗಿಸಿಕೊಳ್ಳಲಿಕ್ಕೆ ಬರುವಂತೆ ಏನಾದರೂ ಮಾಡಬೇಕು. ವಿವಿಧ ಶೋಧಗಳಿಂದ ಭರದಿಂದ ಪ್ರಗತಿ ಮಾಡಿಕೊಳ್ಳುತ್ತಿರುವ ಈಗಿನ ಸುಧಾರಣೆಯ ಕಾಲದಲ್ಲಿ ಬಾವಿಗಳು ಬೀಳದ ಸ್ಥಳಗಳಲ್ಲಿ ಟ್ಯೂಬವೆಲ್ಸ ಅಂದರೆ ಕೊಳವೆ ಬಾವಿಗಳನ್ನಾದರೂ ತೆಗೆಸಿ ನೀರಿನ ಉಪಯೋಗ ಮಾಡಿಕೊಳ್ಳುತ್ತಿರುವಂತೆ, ಐದು ಹೊಳೆಗಳ ನೀರಿನ ಉಪಯೋಗವನ್ನು ಮಾಡಿಕೊಳ್ಳಲು ಬರುವಂತೆ ಏನಾದರೂ ಯೋಜನೆ ಮಾಡಬೇಕು. ವಿಜಾಪೂರ ಜಿಲ್ಲೆಯ ಭೂಮಿ ಫಲವತ್ತಾಗಿದೆ. ನೀರಿನ ಪೂರೈಕೆಯಾದರೆ ಮುಂಬಯಿ ರಾಜ್ಯ ಸಾಕುವಷ್ಟು ಅನ್ನಧಾನ್ಯ ಬಿಜಾಪೂರ ಜಿಲ್ಲೆಯಲ್ಲಿ ಬೆಳೆಯಬಹುದು. ದುಷ್ಕಾಳ ಬಿದ್ದಾಗ ಪರಿಹಾರ ಕಾರ್ಯಗಳಿಗಾಗಿ ವಿಜಾಪೂರ ಜಿಲ್ಲೆಯಲ್ಲಿ ಬಹಳಷ್ಟು ಹಣ ಖರ್ಚು ಮಾಡಬೇಕಾಗುತ್ತದೆ. ಅದೇ ಹಣವನ್ನು ಯಾವುದಾದರೊಂದು ನೀರಾವರಿ ಯೋಜನೆಗೆ ಖರ್ಚು ಮಾಡಿದರೆ ದುಷ್ಕಾಳದ ಬವಣೆಯನ್ನು ತಪ್ಪಿಸಿದಂತಾಗುತ್ತದೆ. ಅನ್ನಧಾನ್ಯವೂ ಹೆಚ್ಚಾಗಿ ಬೆಳೆಯಬಹುದು. ದುಷ್ಕಾಳ ಪರಿಹಾರ ಕಾರ್ಯಗಳಿಗೆ ಖರ್ಚಾಗುವ ಹಣದ ಉಳಿತಾಯವೂ ಆಗುವದು. ಇದೊಂದು ಖಾಯಂ

ಸ್ವರೂಪದ ಯೋಜನೆಯಾಯಿತು. ಇನ್ನು ತಾತ್ಪೂರ್ತಿಕವಾಗಿ ಮಾಡಬೇಕಾದ ಕೆಲಸದ ಬಗ್ಗೆ ಹೇಳಬಯಸುತ್ತೇನೆ. ವಿಜಾಪೂರ ಜಿಲ್ಲೆಯ ಉತ್ತರ ಭಾಗದಲ್ಲಿ ನೀರಿನ ಅಭಾವವಿರುವ ಇಂಡಿ, ಸಿಂದಗಿ, ಬಾಗೇವಾಡಿ, ಮುದ್ದೇಬಿಹಾಳ ತಾಲೂಕುಗಳಲ್ಲಿ ಬಾವಿ ಬೀಳುತ್ತವೆ. ಅಲ್ಲಿ ಒಬ್ಬ ಸ್ಪೆಷಲ್ ಆಫೀಸರ್‌ನನ್ನು ನೇಮಿಸಿ ಬಾವಿ ತೆಗೆಸುವ ಬಗ್ಗೆ ಸಂಶೋಧನೆ ಮಾಡಬೇಕು. ಅಲ್ಲಿಯ ರೈತರಿಗೆ ತಗಾಯಿ ಹಣದ ಸಹಾಯ ದೊರೆಯುವಂತೆ ಅನುಕೂಲ ಮಾಡಬೇಕು. 50 ಲಕ್ಷ ರೂಪಾಯಿ ತಗಾಯಿ ಹಣ ಮಂಜೂರು ಮಾಡಬೇಕು. ಅಂದರೆ ತೀವ್ರವಾಗಿ ಬಾವಿಗಳನ್ನು ತೆಗೆಯಿಸಲು ರೈತನಿಗೆ ಅನುಕೂಲವಾಗದು. ಸರಕಾರದವರು ಕೊಡುವ ತಗಾಯಿ ಹಣವಾದರೂ ಪುಕ್ಕಟೆಯಾಗಿ ಕೊಡಲಾಗುವುದಿಲ್ಲ. ಯಾಕಂದರೆ ತಗಾಯಿ ಹಣವನ್ನು ರೈತರು ಬಡ್ಡಿ ಸಹಿತವಾಗಿ ಸರಕಾರಕ್ಕೆ ಪರತ ಕೊಡುವರು. ತಗಾಯಿ ಹಣವು ಎಲ್ಲವೂ ರೈತರಿಗೆ ಮುಟ್ಟುವಂತೆ ಮಾಡಬೇಕು. ಯಾಕಂದರೆ ತಗಾಯಿ ಹಣ ದೊರಕಿಸುವುದಕ್ಕಾಗಿಯೇ ಮೊದಲೇ ಅರ್ಧದಷ್ಟು ಹಣ ರೈತನು ಖರ್ಚು ಮಾಡಬೇಕಾಗುವುದು. ಹಾಗೆ ಆಗದಂತೆ ನೋಡಿಕೊಳ್ಳುವುದು ಅವಶ್ಯವಿದೆ. ಜೀತಾ ಹಳ್ಳಿಗಳಲ್ಲಿ ಬಂದಾರ ಕಟ್ಟುವುದರಿಂದ ಕೆಳಗಿನ ಹೊಲಗಳಲ್ಲಿ ಅಪಾರ ಧಾನ್ಯ ಉತ್ಪಾದನೆಯಾಗುವುದು. ಬಂಧಾರವಿಲ್ಲದೆ ಇದ್ದ ಮೂಲಕ ಹಳ್ಳದಲ್ಲಿ ನೀರು ವ್ಯರ್ಥವಾಗಿ ಹರಿದುಹೋಗುತ್ತಿರುವುದನ್ನು ನೋಡಿದರೆ ನಮಗೆ ಅತಿ ದುಃಖವಾಗುವದು.

ವಿರೋಧಿ ಪಕ್ಷದ ಯಾವತ್ತು ಸದಸ್ಯರು ಮದ್ಯಪಾನ ಪ್ರತಿಬಂಧದ ಸಲುವಾಗಿ ಟೀಕೆ ಮಾಡಿದರು. ಸುಮ್ಮನೆ ಟೀಕಿಸುವುದಕ್ಕಿಂತ ಸರಕಾರದ ಜೊತೆಗೆ ಎಲ್ಲಾ ಜನತೆಯೂ ಮನಸ್ಸು ಮಾಡಿ ಸಹಕರಿಸಿದರೆ ನಿಶ್ಚಿತವಾಗಿ ಯಶಸ್ವಿಯಾಗುವದು. ಪರದೇಶಗಳಲ್ಲಿ ಪಾನ ಪ್ರತಿಬಂಧವು ಯಶಸ್ವಿಯಾಗಿಲ್ಲವೆಂದು ಹೇಳಿ ಪರದೇಶದ ಉದಾಹರಣೆ ಕೊಡುವುದರಲ್ಲಿ ಯಾವ ಹುರುಳಿಲ್ಲ. ಎಲ್ಲಿ ಜನತೆಯ ಸಹಕಾರವಿದೆಯೋ ಅಲ್ಲಿ ನಿಶ್ಚಿತವಾಗಿ ಯಶಸ್ವಿಯಾಗುವದೆಂಬುದರಲ್ಲಿ ಯಾವ ಸಂದೇಹವು ಇಲ್ಲ. ನಮ್ಮ ವಿಜಾಪೂರ ಜಿಲ್ಲೆಗೆ ಬಂದು ಬೇಕಾದರೆ ನೋಡಲಿ. ವಿಜಾಪೂರ ಜಿಲ್ಲೆಯಲ್ಲಿ ಸಂಪೂರ್ಣವಾಗಿ ಬಂದು ಆಗಿ ಪಾನಪ್ರತಿಬಂಧವು ಹೇಗೆ ಯಶಸ್ವಿಯಾಗಿದೆ ಎಂಬುದನ್ನು ತೋರಿಸಿಕೊಡುತ್ತೇನೆ. ಅಲ್ಲಿಯ ಶ್ರೀನಾಯಿಕ ಡಿ.ಎಸ್.ಪಿ. ಮತ್ತು ಶ್ರೀಅಂಗಡಿ ವಕೀಲರು ಅನೇಕ ಸಮಾಜ ಸೇವಕರು ಎಲ್ಲ ಜನತೆಯ ಸಹಕಾರದಿಂದ ಮಿತಿಮೀರಿ ಸಹಾಸಮಾಡಿ ಯಶಸ್ವಿಯಾಗಿ ಮಾಡಿದ್ದಾರೆ. ಕೆಲವು ಕಡೆ ಅಡವಿಯಲ್ಲಿ ಕಳ್ಳ ಭಟ್ಟಿಶೆರೆ ತಯಾರಾಗುತ್ತಿರಬಹುದು. ಒಂದೆರಡು ಉದಾಹರಣೆಗಳು ಅಪವಾದವಾಗಿರಬಹುದು. ಪಾನಪ್ರತಿಬಂಧವು ಎಲ್ಲರ ಹಿತದ ಸಲುವಾಗಿ ಇದೆ. ಆದರೆ ಕೆಲವರು ಟೀಕಿಸಿದ್ದೇನೆಂದರೆ ಪಾನಪ್ರತಿಬಂಧದಿಂದ ಸರಕಾರಕ್ಕೆ ಬರುವ

ಉತ್ಪನ್ನವೂ ಹೋಯಿತು. ಮತ್ತು ಅದರ ಸಲುವಾಗಿ ಎಲ್ಲರೂ ಟ್ಯಾಕ್ಸ್ ಕೊಡಬೇಕಾಗುತ್ತದೆಂದು ಹೇಳುವದು ಸರಿಯಲ್ಲ. ಕುಡುಕರ ಪರಿವಾರದ ಜನರ ದುರ್ದೆಶೆ ಕಂಡರೆ ದುಃಖವಾಗದೇ ಇರದು. ಪಾನಪ್ರತಿಬಂಧವು ಜಾರಿಯಲ್ಲಿ ಬಂದ ನಂತರ ಎಷ್ಟೋ ಬಡ ಕುಟುಂಬಗಳು ಸುಖದಿಂದ ಜೀವಿಸುತ್ತಿರುವರೆಂಬುದನ್ನು ನೋಡಿದರೆ ಎಷ್ಟು ಲಾಭವಾಗಿದೆಯೆಂಬುದು ಕಂಡುಬರುವದು.

ಸರಕಾರದವರು ಟ್ಯಾಕ್ಸ್ ಹಾಕದ ಹೊರತು ಉತ್ಪನ್ನವೂ ಬರಲಾರದು. ಉತ್ಪನ್ನವೇ ಇಲ್ಲದಿದ್ದರೆ ಖರ್ಚು ಮಾಡಲಿಕ್ಕೆ ಬರಲಾರದು. ಕೂಲಿಕಾರರು ನಿರುದ್ಯೋಗಿಗಳಾಗಬಾರದು. ಒಕ್ಕಲಿಗರು ಅಭ್ಯುದಯ ಹೊಂದಬೇಕು. ಶಿಕ್ಷಣ ಕೊಡಲಿಕ್ಕೆ ಹೆಚ್ಚು ಹಣ ಖರ್ಚು ಆಗಬೇಕು. ದುಷ್ಕಾಳ ಬಿದ್ದರೆ ಜನತೆಯನ್ನು ಸಂರಕ್ಷಿಸಬೇಕು. ಆದರೆ ಟ್ಯಾಕ್ಸ್ ಹಾಕಬಾರದು. ಅಂದರೆ ಹೇಗೆ ನಡೆಯುವದು. ಜನತೆಗಿರುವ ಅಡಚಣೆಗಳ ವರ್ಣನೆ ಮಾಡಿ ಭಾವನೋದ್ರೇಕದಿಂದ ಭಾಷಣ ಮಾಡಿ ಹೇಳಲಿಕ್ಕೆ ಎಲ್ಲರಿಗೆ ಬರುವದು. ಆದರೆ ಇರುವ ಉತ್ಪನ್ನದಲ್ಲಿ ಎಲ್ಲವನ್ನು ಸಾಧಿಸಲು ಹೇಗೆ ಖರ್ಚು ಮಾಡಬೇಕೆಂಬ ಬಗ್ಗೆ ಯೋಗ್ಯ ಮಾರ್ಗದರ್ಶನ ಮಾಡುವುದು ಬಲು ಕಠಿಣ. ಈ ಮುಂಗಡ ಪತ್ರಿಕೆಯು ಪರಿಪೂರ್ಣವಿದ್ದು ಜನತೆಯ ಅಡಚಣೆಗಳನ್ನೆಲ್ಲ ಒಮ್ಮೆಲೆ ನಿವಾರಣೆ ಮಾಡಬಲ್ಲದೆಂದು ಯಾರೂ ಹೇಳಲಾರರು. ಸರಕಾರಕ್ಕೆ ದೊರೆಯುವ ಉತ್ಪನ್ನವು ನಿರ್ದಿಷ್ಟವಾಗಿರುವಾಗ ಇದ್ದುದರಲ್ಲಿಯೇ ಶಕ್ಯವಿದ್ದಷ್ಟು ಹಣ ಖರ್ಚು ಮಾಡಿ ಜನತೆಯ ಕಲ್ಯಾಣವನ್ನು ಸಾಧಿಸಲಾಗಿದೆ. ವಿನಾ ಕಾರಣವಾಗಿ ಪ್ರತಿಯೊಂದಕ್ಕೂ ಟೀಕಿಸುವುದು ಸಮಂಜಸವಲ್ಲ. ಎಲ್ಲ ಸುಧಾರಣೆಗಳೂ ಒಮ್ಮೆಲೆ ಆಗಲಾರವು. ಆದರೆ ಕ್ರಮೇಣ ಸಾಧಿಸಲು ನಮ್ಮ ಸರಕಾರವು ಯಾವಾಗಲೂ ಪ್ರಯತ್ನಿಸುತ್ತಿದೆ. ಪರದೇಶಗಳ ಉದಾಹರಣೆ ಕೊಡುವದು ಸರಿಯಲ್ಲ. ನಮ್ಮ ದೇಶವೇ ಆದರ್ಶ ಉದಾಹರಣೆಯಾಗಿದೆ. ನಮ್ಮ ದೇಶದಲ್ಲಿ ಸಾಧು ಸತ್ಪುರುಷರು ಸಂತರು ಮಹಾತ್ಮರು ಆಗಿ ಹೋದವರು ಜಗತ್ತಿಗೆ ಹಿಂದುಸ್ಥಾನವು ಉದಾಹರಣೆಯಾಗುವಂತೆ ಕಾರ್ಯಮಾಡಿ ತೋರಿಸಿದ್ದಾರೆ. ಆದುದರಿಂದ ಮದ್ಯಪಾನ ಪ್ರತಿಬಂಧವನ್ನು ಟೀಕಿಸದೆ ಅದನ್ನು ಯಶಸ್ವಿಯಾಗುವಂತೆ ಸಹಕರಿಸಬೇಕಾಗಿ ವಿನಂತಿ ಮಾಡಿಕೊಳ್ಳುತ್ತೇನೆ. ಇನ್ನೊಂದು ಸಂಗತಿಯೆಂದರೆ ಆಹಾರ ಧಾನ್ಯ ಹೆಚ್ಚು ಬೆಳೆಸುವ ಕಾರ್ಯದಲ್ಲಿ ನಮ್ಮ ಸರಕಾರವು ಜಪಾನಿ ಪದ್ಧತಿಯಿಂದ ಭತ್ತ ಬೆಳೆಯುವುದನ್ನು ಕಾರ್ಯ ರೂಪದಲ್ಲಿ ತರಲು ಪ್ರಯತ್ನಿಸುತ್ತಿದ್ದಾರೆ. ಹೀಗೆ ನಮ್ಮ ಸರಕಾರವು ಎಲ್ಲ ಬಗೆಯಿಂದ ಪ್ರಗತಿಯನ್ನು ಸಾಧಿಸುತ್ತಿದೆ. ಆದಕಾರಣ ಈ ಮುಂಗಡ ಪತ್ರಿಕೆಯನ್ನು ಸಾದರಪಡಿಸಿದ ಅರ್ಥಮಂತ್ರಿಯವರಾದ ಮಾನ್ಯ ಡಾಕ್ಟರ ಜೀವರಾಜ ಮೆಹತಾರವರನ್ನು ಅಭಿನಂದಿಸಿ ಈ ಮುಂಗಡ ಪತ್ರಿಕೆಗೆ ನನ್ನ ಅನುಮೋದನೆ ನೀಡಿ ನನ್ನ ಭಾಷಣ ಮುಗಿಸುತ್ತೇನೆ.

# ಬಿಕ್ಷಾಟನೆಯ ಕುರಿತ ಚರ್ಚೆ

**10ನೇ ಮಾರ್ಚ್ 1955**

ಮಾನನೀಯ ಸಭಾಪತಿಗಳೇ, ಈಗ ಸಭಾಗೃಹದಲ್ಲಿ ಚರ್ಚಿಸುತ್ತಿರುವ ಮಾನ್ಯ ಸದಸ್ಯರಾದ ಶ್ರೀ ಭರೂಚಾರವರು ತಂದಿರುವ ಮುಂಬಯಿ ಭಿಕ್ಷುಕರ ವಿಷಯದ ಸುಧಾರಣೆಯ ಮಸೂದೆಗೆ ವಿರೋಧಿಸಲು ನಾನು ನಿಂತಿರುವೆನು. ಭಿಕ್ಷುಕರಿಂದ ಸಾರ್ವಜನಿಕರಿಗೆ ಆಗುವ ತೊಂದರೆಯು ಬಗ್ಗೆ ಮಾನ್ಯ ಭರೂಚಾರವರಿಗಿರುವ ಕಳಕಳಿಯ ಬಗ್ಗೆ ನನಗೆ ಸಹಾನುಭೂತಿಯಿದ್ದರೂ ಈ ಬಿಲ್ಲು ಪಾಸಾಗುವುದರಿಂದ ಸಾರ್ವಜನಿಕರಿಗೆ ಸಹಾಯುವಾಗದಿದ್ದರಿಂದ ವಿರೋಧಿಸುತ್ತೇನೆ. ಭಿಕ್ಷೆ ಬೇಡುವದು ಅಪರಾಧವೆಂದು ಕಾಯಿದೆ ಇದ್ದರೂ ಜನರು ಭಿಕ್ಷೆ ಕೊಡುತ್ತಿರುವುದರಿಂದ ಕಾಯಿದೆ ಫಲಕಾರಿಯಾಗಿಲ್ಲ. ಆದ್ದರಿಂದ ದಾನ ಕೊಡುವವರಿಗೆ ಸಹ ಶಾಸನ ಮಾಡಬೇಕೆಂಬುದೇ ಅವರು ಈಗ ತಂದಿರುವ ಬಿಲ್ಲಿನ ಮುಖ್ಯ ಉದ್ದೇಶವಾಗಿದೆ.

ಭಿಕ್ಷೆ ಬೇಡುವದು ದಿನದಿನಕ್ಕೆ ಹೆಚ್ಚಾಗುತ್ತಿರುವ ಕಾರಣವನ್ನು ಕಂಡುಹಿಡಿಯುವದು ಮೊದಲನೇ ಕೆಲಸವಾಗಿದೆ. ಬ್ರಿಟಿಷರು ತಮ್ಮ ರಾಜ್ಯ ನಡೆಸುತ್ತಿದ್ದ ಕಾಲದಲ್ಲಿ ಭಾರತದ ಬಹುಜನ ಉದ್ಯೋಗ ದಂಧಗಳನ್ನು ಬಂದು ಮಾಡಿ ನಿರುದ್ಯೋಗಿಗಳನ್ನಾಗಿ ಮಾಡಿದರು. ಅಂದು ಕೈಬಿಟ್ಟ ಉದ್ಯೋಗಗಳು ಸ್ವಾತಂತ್ರ ದೊರೆತರೂ ಬೆಳವಣಿಗೆ ಹೊಂದದಾಗಿವೆ. ಮತ್ತು ದೇಶದಲ್ಲಿ ಜನಸಂಖ್ಯೆಯೂ ದಿನದಿನಕ್ಕೆ ವಿಪರೀತವಾಗಿ ಬೆಳೆಯುತ್ತಲಿದೆ. ನಿರುದ್ಯೋಗತನದಿಂದ ಬಡವರಾದ ಜನರು ಮತ್ತು ಅವರ ಪರಿವಾರದವರು ಅನಿವಾರ್ಯವಾಗಿ ಭಿಕ್ಷೆ ಬೇಡುತ್ತಾರೆ. ದೇಶದಲ್ಲಿಯ ಜನರ ನಿರುದ್ಯೋಗ ಸಮಸ್ಯೆಯನ್ನು ಬಿಡಿಸದ ಹೊರತು ಭಿಕ್ಷೆ ಬೇಡುವದು ಬಂದಾಗಲಾರದು. ಈ ತರದ ಕಾಯದೆ ಮಾಡಿದರೆ ಬಡಜನರು, ನಿರುದ್ಯೋಗಿಗಳು ಉಪವಾಸ ಸಾಯಬೇಕಾಗುತ್ತದೆ. ನಿರುದ್ಯೋಗ ಸಮಸ್ಯೆ ಬಗೆಹರಿಯದ ವಿನಃ ಎಂಥ ಕಾಯಿದೆ ಮಾಡಲಿ, ಸರಕಾರವು ವಿಶ್ವ ಪ್ರಯತ್ನ ಮಾಡಲಿ, ಭಿಕ್ಷಾಟನೆ ಬಂದಾಗದು. ಈ ಭಿಕ್ಷಾಟನೆ ವೃತ್ತಿಯ ತಾಯಿಯಾದ ಬಡತನದ ನಿವಾರಣೆ ಮಾಡುವ ಬಗ್ಗೆ ಸರಕಾರವೂ ಜನತೆಯೂ ಲಕ್ಷ ಕೊಡುವದು ಅವಶ್ಯವಿದೆ. ಮಾನ್ಯ ಸದಸ್ಯರಾದ ಶ್ರೀಜಾಧವ ತಮ್ಮ ಭಾಷಣದಲ್ಲಿ ಉದಾಹರಣೆಗಳನ್ನು ಕೊಟ್ಟು ದಾನದ ಬಗ್ಗೆ ಭಾರತೀಯರ ಧಾರ್ಮಿಕ ಭಾವನೆಯನ್ನು ಟೀಕಿಸಿದರು. ಪಾಶ್ಚಾತ್ಯ ರಾಷ್ಟ್ರಗಳಲ್ಲಿಯ ರೀತಿಗಳನ್ನು ವರ್ಣಿಸಿದರು. ಪಾಶ್ಚಾತ್ಯ ರಾಷ್ಟ್ರದವರ ಪ್ರತಿಯೊಂದು ವಿಚಾರವು ಯೋಗ್ಯವೆಂದೂ ಭಾರತೀಯರ ಪ್ರತಿಯೊಂದು ಧಾರ್ಮಿಕ ವಿಚಾರ ತಪ್ಪೆಂದು ತಿಳಿಯುವದು ಸಮಂಜಸವಲ್ಲ.

ಭಿಕ್ಷುಕ ವೃತ್ತಿಯೂ ಕೀಳತನದ್ದೆಂದು ನಮ್ಮ ಪೂರ್ವಜರ ಮತ. ಧರೆಗೆ ಯಾಚನೆಗಿಂತ ಲಘುತರವುಂಟೇ ಎಂಬುದಾಗಿ ಭಿಕ್ಷಾವೃತ್ತಿಯನ್ನು ನಮ್ಮ ಹಿರಿಯರು ಹಳೆದಿದ್ದಾರೆ. ಜಗತ್ತಿನ ಆದರ್ಶ ಸಮಾಜ ಸುಧಾರಕರಲ್ಲಿ ಒಬ್ಬರಾದ ಮಹಾತ್ಮ ಬಸವಣ್ಣನವರು ಒಂದು ವಚನದಲ್ಲಿ 'ಕಾಯಕವೇ ಕೈಲಾಸ'ಎಂದು ಹೇಳಿದ್ದಾರೆ. ಅಂದರೆ ಪ್ರತಿಯೊಬ್ಬನೂ ದುಡಿದೇ ಉಣಬೇಕು. ಬೇಡಕೊಂಡು ತಿನ್ನಬಾರದೆಂದು ಮಂತ್ರಿಯಾಗಿ ರಾಜ್ಯಭಾರ ಮಾಡುವಾಗ ಕಟ್ಟಪ್ಪಣೆ ಮಾಡಿದ್ದರು. ಮತ್ತು ಆ ತರದ ಅಡಚಣೆ ಮಾಡುವಂತೆ ಮಾಡಿದರು. ಶ್ರೀಜಾಧವರು ಹೇಳಿದಂತೆ ಈಗಿನ ಕಾಲದಲ್ಲಿ ಧಾರ್ಮಿಕ ಭಾವನೆಯ ಉಪಯೋಗವಿಲ್ಲವೆಂದೆನ್ನವುಜದು ಸಮಂಜಸವಲ್ಲ. ಕಾಯಿದೆ ಕಾನೂನುಗಳ ಅಂಜಿಕೆಗಿಂತ ನೀತಿಯ ಮತ್ತು ಧಾರ್ಮಿಕ ಭಾವನೆಯ ಅಂಜಿಕೆಯಿಂದ ಸಮಾಜ, ದೇಶ ಹೆಚ್ಚು ಸುಧಾರಿಸುತ್ತದೆ. ಇಂಗ್ಲೀಷ ಮಾತಿನಲ್ಲಿ ಹೀಗೆ ಹೇಳಿದೆ : 'A man without religion is like a horse without a bridal' ಈಗಿನ ಸಮಾಜ ಅಶಾಂತತೆಗೆ ಧರ್ಮ ವೃತ್ತಿ ಕಡಿಮೆಯಾದದ್ದೇ ಕಾರಣವು. ದಾನವೆಂದರೆ, ಇಲ್ಲದವರಿಗೆ ಇದ್ದವರು ಸಹಾಯ ಮಾಡುವ ನ್ಯಾಯಪದ್ಧತಿಯು. ಭಾರತೀಯರು ದಾನಕ್ಕೆ ಬಹಳ ಮಹತ್ವ ಕೊಟ್ಟಿರುವರು. ದಾನ ಮಾಡುವುದು ಭಾರತೀಯರ ಉಚ್ಚ ಸಂಸ್ಕೃತಿಯ ಒಂದು ಮಹತ್ವದ ತತ್ವವು. ಭಾರತದಲ್ಲಿ ಅನೇಕ ಶಿಕ್ಷಣ ಸಂಸ್ಥೆಗಳು ದಾನದ ಹಣದಿಂದಲೇ ಸ್ಥಾಪಿಸಿ ಸಂರಕ್ಷಣ ಹೊಂದಿವೆ. ಬಿಹಾರದಲ್ಲಿ ಹಿಂದಕ್ಕೆ ಭೂಕಂಪವಾಗಿ ಹಾನಿಗೀಡಾದ ವೇಳೆಯಲ್ಲಿ ಆಗಿನ ಗವರ್ನ್ಹರರು ಕೂಡಿಸಿದ ಹಣಕ್ಕಿಂತ ಜನರು ಬಾಬು ರಾಜೇಂದ್ರ ಪ್ರಸಾದರಿಗೆ ದಾನ ರೂಪವಾಗಿ ಕಳುಹಿಸಿದ ಹಣ ಎಷ್ಟೋ ಹೆಚ್ಚಾಗಿತ್ತು. ಕರ್ನಾಟಕದಲ್ಲಿ ಶಿರಸಂಗಿಯ ದೇಸಾಯರಾದ ಲಿಂಗರಾಜರು ವಿದ್ಯಾರ್ಥಿಗಳ ಸಹಾಯಕ್ಕಾಗಿ ತಮ್ಮ ಸಂಸ್ಥಾನವನ್ನೇ ದಾನವಾಗಿ ಕೊಟ್ಟರು. ಈ ದಾನದಿಂದ ಸಾವಿರಾರು ವಿದ್ಯಾರ್ಥಿಗಳು ವಿದ್ಯಾದಾನವನ್ನು ಇಂದಿಗೂ ಪಡೆಯುತ್ತಿದ್ದಾರೆ. ಈ ದಾನ ಕೊಡುವ ವೃತ್ತಿಯನ್ನು ನಾಶಗೊಳಿಸಬಾರದು. ಅಪಾತ್ರತೆಗೆ ಕೊಡುವ ದಾನವನ್ನು ಸತ್ಪಾತ್ರತೆಗೆ ಹೋಗುವಂತೆ ಸಮಾಜ ಸುಧಾರಕರು ಪ್ರಯತ್ನಿಸಬೇಕು. 'ಸತ್ಪಾತ್ರದೊಳ್ ದಾನಮಂ' ಎಂದು ನಮ್ಮ ಪೂರ್ವಿಕರ ಉಪದೇಶವಿದೆ. ಇತ್ತೀಚೆಗೆ ಜನರಲ್ಲಿ ವಿದ್ಯಾಸಂಸ್ಥೆಗಳಂಥ ಉತ್ತಮ ಕಾರ್ಯಗಳಿಗೆ ದಾನಕೊಡುವ ವೃತ್ತಿ ಬೆಳೆಯುಹತ್ತಿದೆ.

The Deputy Speaker: ನೀವು ಹೇಳುತ್ತಿರುವುರು ಬೇರೆ ವಿಷಯುವಾಗಿದೆ. ಭಿಕ್ಷುಕರ ಮಸೂದೆಗೆ ಸಂಬಂಧಿಸಿದ್ದನ್ನು ಅಷ್ಟೇ ಹೇಳಬೇಕು.

Shri Shankargouda Y.Patil: ಯಾವುದೇ ಕಾಯುದೆ ಮಾಡುವಾಗ ಅದರಿಂದಾಗುವ ಲಾಭವೆಷ್ಟು ಮತ್ತು ಬಹುಜನರ ಮನಸ್ಸಿನ ಮೇಲೆ ಅದರಿಂದ

ಆಗುವ ಪರಿಣಾಮವೇನು ಎಂಬುದನ್ನು ಅವಶ್ಯ ವಿಚಾರ ಮಾಡತಕ್ಕದ್ದು. ದಾನಕೊಡುವ ಜನರನ್ನು ಶಿಕ್ಷಿಸಬೇಡೆಂಬ ಕಾಯಿದೆ ಪಾಸಾದರೆ ಸದಯಾಂತಃಕರಣಗಳು ಧರ್ಮವಂತರಾದ ಜನರ ಅಂತಃಕರಣಕ್ಕೆ ಪೆಟ್ಟು ತಗಲುವುದು. ಭಿಕ್ಷುಕರಲ್ಲಿ ಸಾಧುಸತ್ಪುರುಷರು, ಅನಾಥ ಮಕ್ಕಳು, ಶಕ್ತಿಹೀನರು, ನಿರುದ್ಯೋಗಿಗಳು ಮುಂತಾದವರು ಇರುವರು. ಕೆಲವರು ಇದು ಉದ್ಯೋಗವೆಂದೇ ಕಲ್ಪಿಸಿ ಢೋಂಗತನ ಮಾಡಿ ದುಡ್ಡು ಸಂಪಾದಿಸುವುದುಂಟು. ಆದರೆ ಅವರ ಮೋರೆಯ ಲಕ್ಷಣದ ಮೇಲೆಯೇ ಗೊತ್ತಾಗುವುದು. ಆದ್ದರಿಂದ ಈ ವಿಷಯವಾಗಿ ನಮ್ಮ ಮುಂಬಯಿ ಸರಕಾರವು ಸಾಕಷ್ಟು ಲಕ್ಷ ಕೊಡಹತ್ತಿದೆ. ಶಿರಿವಂತರು, ಸಮಾಜ ಸುಧಾರಕರು ಭಿಕ್ಷುಕವೃತ್ತಿ ಕಡಿಮೆ ಆಗುವ ಬಗ್ಗೆ ಸಂಘ ಸಂಸ್ಥೆಗಳನ್ನು ನಿರ್ಮಿಸಿ ಅದರ ನಿವಾರಣೆಗಾಗಿ ಪ್ರಯತ್ನಿಸುವುದು ಅದ್ಯ ಕರ್ತವ್ಯವಾಗಿದೆ. ಮಾನ್ಯ ಶ್ರೀ ಜಾಧವರು ಪಾನಪ್ರತಿಬಂಧಕ ಕಾಯಿದೆ ಏಕೆ ಮಾಡಿದರು? ಕಾಯಿದೆಯ ಬದಲು ಪ್ರಚಾರ ಮಾಡಬೇಕಾಗಿತ್ತು ಅಂದರು. ಆದರೆ ಭಿಕ್ಷಾಟನೆ ಮತ್ತು ಪಾನ ಪ್ರತಿಬಂಧಕ ಎರಡೂ ಒಂದೇ ಆಗಲಾರವು. ಬಡವರು ಅನ್ನವಿಲ್ಲದ್ದಕ್ಕಾಗಿ ಹಸಿದು ಭಿಕ್ಷಾಟನೆ ಮಾಡುವರು. ಕುಡಿಯದಿದ್ದರೆ ಯಾರೂ ಸಾಯುವುದಿಲ್ಲ. ಅನ್ನವಿಲ್ಲದಿದ್ದರೆ ಮನುಷ್ಯನು ಬದುಕಲಾರನು. ದಾನ ಕೊಡುವುದರಿಂದ ಜನರಿಗೆ ತ್ರಾಸವಾಗುವುದಿಲ್ಲ. ಕುಡುಕತನದಿಂದ ಜನರಿಗೆ ತ್ರಾಸವಾಗುವುರಿಂದ ಕಾಯದೆ ಮಾಡಿರುವರು. ದಾನ ಕೊಡುವುದರಿಂದ ಯಾವ ಕೆಟ್ಟ ಪರಿಣಾಮವ್ರೂ ಆಗುವುದಿಲ್ಲ. ಉಪವಾಸ ಸಾಯುವವರನ್ನು ಕಂಡರೆ ಎಂತವರಾದರೂ ದಾನ ಕೊಡುವರು. ಆದ್ದರಿಂದ ಈ ತರದ ಕಾಯಿದೆ ಮಾಡಿದಾನ ಮಾಡುವ ಪವಿತ್ರ ವೃತ್ತಿಯನ್ನು ಬಂದು ಮಾಡುವುದು ಪಾಪಕರವಾದುದು ಎಂದು ಹೇಳಿ ಈ ತರದ ಕಾಯಿದೆಯಿಂದ ಸಮಾಜಕ್ಕಾಗಲಿ ದೇಶಕ್ಕಾಗಲಿ ಯಾವ ತರದ ಲಾಭವಿಲ್ಲೆಂದು ಹೇಳಿ ಈಗ ಬಂದಿರುವ ಬಿಲ್ಲಿಗೆ ವಿರೋಧಿಸಿ ನನ್ನ ಮಾತನ್ನು ಮುಗಿಸುತ್ತೇನೆ.

## ಮುಂಗಡ ಪತ್ರದ ಮೇಲಿನ ಚರ್ಚೆ

**10ನೇ ಮಾರ್ಚ್ 1955**

ಮಾನ್ಯ ಸಭಾಪತಿಗಳೇ,ನಮ್ಮ ಅರ್ಥ ಮಂತ್ರಿಯವರು ಈ ಸಭೆಗೆ ಸಾದರಪಡಿಸಿದ ಈ ವರ್ಷದ ಅಂದಾಜು ಪತ್ರಿಕೆಯ ಬಗ್ಗೆ ಮಾತನಾಡಬೇಕೆಂದು ನಾನು ನಿಂತಿರುವೆನು. ಉಳಿತಾಯದ ಅಂದಾಜು ಪತ್ರಿಕೆಯನ್ನು ಸಾದರ ಪಡಿಸಿದ ನಮ್ಮ ಹಣಕಾಸಿನ ಮಂತ್ರಿಯವರನ್ನು ಅಭಿನಂದಿಸುತ್ತೇನೆ.

ನಮ್ಮ ಮಂತ್ರಿ ಮಂಡಳವು ಮುಂಬಯಿ ರಾಜ್ಯದಲ್ಲಿ ಕಲ್ಯಾಣಕಾರೀ ರಾಜ್ಯ ಸ್ಥಾಪನೆಯಾಗುವಂತೆ ಪ್ರಯತ್ನ ನಡೆಸಿದೆ ಎಂಬುದನ್ನು ಯಾರೂ ಅಲ್ಲಗಳೆಯಲಾರರು. ಕಲ್ಯಾಣಕಾರೀ ರಾಜ್ಯವಾಗುವುದರಿಂದ ಎಲ್ಲ ಪ್ರಜೆಗಳು ಸುಖಿಗಳಾಗುವರು. ಇದೇ ಮುಖ್ಯ ಉದ್ದೇಶವಾಗಿದೆ. ಮುಂಬಯಿ ರಾಜ್ಯದಲ್ಲಿ ಕನ್ನಡ ಭಾಷೆಯನ್ನಾಡುವ ನಾಲ್ಕು ಜಿಲ್ಲೆಗಳಿವೆ. ಔದ್ಯೋಗಿಕ ಪ್ರಗತಿಯ ದೃಷ್ಟಿಯಿಂದ ನೋಡಿದರೆ ಈ ನಾಲ್ಕೂ ಜಿಲ್ಲೆಗಳು ಹಿಂದುಳಿದವುಗಳಾಗಿವೆ ಎಂಬುದನ್ನು ಯಾರು ಅಲ್ಲಗಳೆಯಲಾರರು. ಸನ್ 1947ನೆಯ ಇಸ್ವಿಯಿಂದ ಕರ್ನಾಟಕದಲ್ಲಿ ಒಂದು ಮೆಡಿಕಲ್ ಕಾಲೇಜ ಸ್ಥಾಪಿಸಬೇಕೆಂದು ಬೇಡಿಕೊಳ್ಳುತ್ತಿದ್ದರೂ ಸಹ ಇನ್ನೂವರೆಗೆ ದುರ್ದೈವದಿಂದ ಒಂದು ಮೆಡಿಕಲ್ ಕಾಲೇಜ್ ಸ್ಥಾಪನೆಯಾಗದೆ ಇರುವುದು ಅಸಮಧಾನವನ್ನುಂಟುಮಾಡುತ್ತಿದೆ. ಕರ್ನಾಟಕ ಯುನಿವ್ಹರ್ಸಿಟಿ ಸ್ಥಾಪನೆಯಾಯಿತು. ಆದರೆ ಮೆಡಿಕಲ್ ಕಾಲೇಜ್ ಸ್ಥಾಪನೆಯಾಗದೆ ಹಾಗೆಯೇ ಉಳಿದಿದೆ. ಹುಬ್ಬಳ್ಳಿಯಲ್ಲಿ ಒಂದು ಮೆಡಿಕಲ್ ಕಾಲೇಜ್ ಸ್ಥಾಪಿಸುವುದರ ಸಲುವಾಗಿ ಮುಂದಿನ ವರ್ಷದ ಬಜೆಟದಲ್ಲಿಯಾದರೂ ಹಣ ಮಂಜೂರು ಮಾಡಬೇಕೆಂದು ನಾನು ವಿನಂತಿ ಮಾಡಿಕೊಳ್ಳುತ್ತೇನೆ.

ಕರ್ನಾಟಕದ ನಾಲ್ಕು ಜಿಲ್ಹೆಗಳಲ್ಲಿ ಕಾರವಾರ ಮತ್ತು ಬಿಜಾಪೂರ ಜಿಲ್ಹೆಗಳು ಬಹಳ ಹಿಂದುಳಿದವುಗಳಾಗಿವೆ. ಕಾರವಾರ ಜಿಲ್ಲೆಯಲ್ಲಿ ಅರಣ್ಯ ಸಂಪತ್ತು ಹೇರಳವಾಗಿದೆ. ಅಲ್ಲಿ ಬಿದರು ಬೇಕಾದಷ್ಟು ಇದೆ. ಬಿದರಿನ ಉಪಯೋಗ ಮಾಡಿಕೊಂಡು ಕಾಗದದ ಕಾರಖಾನೆಯೊಂದನ್ನು ಪ್ರಾರಂಭಿಸಬಹುದು. ಈ ಬಗ್ಗೆ ನಮ್ಮ ಸರಕಾರದವರು ವಿಚಾರ ನಡೆಸಿ ಕಾರವಾರ ಜಿಲ್ಲೆಯಲ್ಲಿ ಕಾಗದದ ಕಾರಖಾನೆಯೊಂದನ್ನು ಪ್ರಾರಂಭಿಸಿ ಔದ್ಯೋಗಿಕ ಪ್ರಗತಿಯಾಗುವಂತೆ ಮಾಡಬೇಕೆಂದು ಸೂಚಿಸುತ್ತೇನೆ.

ನೀರಾವರಿಯ ಬಗ್ಗೆ ಈ ವರ್ಷದ ಅಂದಾಜು ಪತ್ರಿಕೆಯಲ್ಲಿ ಸಾಕಷ್ಟು ಹಣ ತೆಗೆದಿಡಲ್ಪಟ್ಟಿಲ್ಲ. ನೀರಾವರಿ ಯೋಜನೆಯ ಬಗ್ಗೆ ನಮ್ಮ ಸರಕಾರವು ಹೆಚ್ಚು ಆಸ್ಥೆವಹಿಸಿದ್ದು ಸಂತೋಷದ ಸಂಗತಿಯಾಗಿದೆ. ಮಹಾರಾಷ್ಟ್ರ ಗುಜರಾತದಲ್ಲಿಯ ನೀರಾವರಿ ಯೋಜನೆಯಂತೆಯೇ ಕರ್ನಾಟಕದಲ್ಲಿಯೂ ನೀರಾವರಿ ಯೋಜನೆಯೊಂದನ್ನು ಪ್ರಾರಂಭ ಮಾಡಬೇಕು. ಘಟಪ್ರಭಾ ಯೋಜನೆಯೊಂದನ್ನು ಕರ್ನಾಟಕದಲ್ಲಿ ಈಗಾಗಲೇ ಪ್ರಾರಂಭಿಸಲಾಗಿದೆ. ಅದರಂತೆ ಮಲಪ್ರಭಾ ನದಿಯ ನೀರಾವರಿ ಯೋಜನೆಯೊಂದನ್ನು ಪ್ರಾರಂಭಿಸಬೇಕು. ವಿಜಾಪೂರ ಜಿಲ್ಲೆಯೂ ಯಾವಾಗಲೂ ಬರಗಾಲದ ಪ್ರದೇಶವಾಗಿದೆ. ಅಲ್ಲಿ ನೀರಾವರಿ ಯೋಜನೆ ಸಾಕಷ್ಟು ಇಲ್ಲ. ಕುಡಿಯುವ ನೀರು ಸಹ ಅನೇಕ ಭಾಗಗಳಲ್ಲಿ ದೊರೆಯುವುದಿಲ್ಲ. ಬೀಳಗಿ,

ಸಿಂದಗಿ ತಾಲೂಕುಗಳಲ್ಲಿ ಒಂದು ಸ್ಪೇಷಲ್ ನೀರಾವರಿ ಯೋಜನೆಯನ್ನು ಮಾಡಬೇಕು. ಮುಂಬಯಿ ಸರಕಾರದವರು ನೀರಿನ ಅಭಾವವಿದ್ದ ಉಳಿದ ಭಾಗಗಳಲ್ಲಿ ಕೆಲವು ಕಡೆ ಸ್ಪೇಷಲ್ ಸ್ಕೀಮ್ ಮಾಡಿದಂತೆ ವಿಜಾಪೂರ ಜಿಲ್ಲೆಯ ಬೀಳಗಿ ಪೇಠಾದ 10 ಹಳ್ಳಿಗಳ ಬಗ್ಗೆ ಬಾಗೇವಾಡಿ ತಾಲೂಕದ ನಿಡಗುಂದಿ ಮತ್ತು ಸಿಂದಗಿ ತಾಲೂಕದ ತಿಳಗೂಳ ವಗೈರೆ ಹಳ್ಳಿಗಳ ಸಲುವಾಗಿ ಸ್ಪೇಷಲ್ ವ್ಯವಸ್ಥೆ ಮಾಡಬೇಕು. ಈ ಸಲ ಚಡಚಣದ ಹಳ್ಳ ಕಟ್ಟುವ ವಿಷಯ ಮಾಡುವವರಿದ್ದು ಅದು ಅತ್ಯಂತ ಅವಶ್ಯಕತೆಯುಳ್ಳದ್ದು. ಕರ್ನಾಟಕ-ಮಹಾರಾಷ್ಟ್ರ ವ್ಯಾಪಾರಕ್ಕೆ ಸಹಾಯವಾಗುತ್ತಿದ್ದು ಅದನ್ನು ತೀವ್ರ ಮುಗಿಸುವುದು ಅವಶ್ಯವಿದೆ. ಆರೋಗ್ಯ ಖಾತೆಯ ಬಗ್ಗೆ ಒಂದೆರಡು ಸೂಚನೆಗಳನ್ನು ಮಾಡಬೇಕೆಂದಿರುವೆನು. ಆದರೆ ವೇಳೆಯ ಅಭಾವದ ಮೂಲಕ ಹೆಚ್ಚಿಗೆ ಹೇಳದೆ ನನ್ನ ಸೂಚನೆಗಳನ್ನು ಆಲೋಚಿಸಬೇಕೆಂದು ವಿನಂತಿಸಿ ಮಾನ್ಯ ಅರ್ಥ ಮಂತ್ರಿಯವರನ್ನು ಮತ್ತೊಮ್ಮೆ ಅಭಿನಂದಿಸಿ ನನ್ನ ಭಾಷಣ ಮುಗಿಸುತ್ತೇನೆ.

## ಎಸ್ಟಿಮೇಟ್ಸ್ ಕಮಿಟಿಯ ರಿಪೋರ್ಟ ಮೇಲಿನ ಚರ್ಚೆ

1ನೇ ಏಪ್ರಿಲ್ 1955

ಮಾನ್ಯ ಸಭಾಪತಿಗಳೇ, ಇಂದು ನಡೆದ ಎಸ್ಟಿಮೇಟ್ಸ್ ಕಮಿಟಿಯ ರಿಪೋರ್ಟುಗಳ ಮೇಲಿನ ಚರ್ಚೆಯಲ್ಲಿ ಭಾಗವಹಿಸಿ ಒಂದೆರಡು ವಿಷಯಗಳ ಬಗ್ಗೆ ಮಾತನಾಡಬೇಕೆಂದು ನಾನು ನಿಂತಿರುವೆನು. ವಿರೋಧಿ ಪಕ್ಷದ ಮಾನ್ಯ ಸದಸ್ಯರನೇಕರು ಮಾತನಾಡಿ ಸರಕಾರದವರು ಮಾಡಿದ ಕಾರ್ಯವನ್ನು ಟೀಕಿಸಿದ್ದಾರೆ. ಆದರೆ ಎಸ್ಟಿಮೇಟ್ಸ್ ಕಮೀಟಿಯ ಸೂಚನೆಯನ್ನು ಅನುಸರಿಸಿ ಕೈಕೊಂಡ ಕಾರ್ಯವನ್ನು ಪ್ರಶಂಸಿಸಿಲ್ಲ. ನಾನು ಹೆಚ್ಚಿಗೆ ವೇಳೆಯನ್ನು ತೆಗೆದುಕೊಳ್ಳದೇ ನನಗೆ ಹೇಳಬೇಕಾದ ಒಂದೆರಡು ವಿಷಯಗಳ ಬಗ್ಗೆ ಸ್ವಲ್ಪದರಲ್ಲಿ ಹೇಳಬಯಸುತ್ತೇನೆ.

ಸರಕಾರದವರು ಕೈಕೊಂಡ ಟ್ರಾಕ್ಟರ ಯೋಜನೆಯ ಬಗ್ಗೆ ಇದರಲ್ಲಿ ಸರಕಾರಕ್ಕೆ ಬಹಳ ಹಾನಿಯಾಗಿದೆಯೆಂದು ಟೀಕೆ ಮಾಡಿದರು. ಈ ಟ್ರಾಕ್ಟರುಗಳನ್ನು ಮಾರಲು ಹೋದರೆ ಬಹಳ ಕಡಿಮೆ ಬೆಲೆ ಬರುವುದೆಂದು ಟೀಕಿಸಿದರು. ಆದರೆ ಈ ಟ್ರಾಕ್ಟರುಗಳನ್ನು ತರಿಸುವಾಗ ಇದ್ದ ಪರಿಸ್ಥಿತಿಯ ಬಗ್ಗೆ ಯಾರೂ ವಿಚಾರ ಮಾಡಿಲ್ಲವೆಂಬಂತೆ ಕಾಣುತ್ತದೆ. ಯಾಕಂದರೆ ಆಗ ದೇಶದಲ್ಲಿ ಆಹಾರ ಧಾನ್ಯದ ಕೊರತೆ ಬಹಳವಾಗಿತ್ತು. ಹೆಚ್ಚು ಆಹಾರ ಧಾನ್ಯ ಬೆಳೆಯಬೇಕೆಂಬ ಉದ್ದೇಶದಿಂದ ಒಕ್ಕಲುತನಕ್ಕೆ ಎಲ್ಲ ಬಗೆಯಿಂದ ಸಹಾಯ ಸಹಾಕಾರಗಳನ್ನು ಕೊಡಲಾಯಿತು. ಭೂಮಿಯನ್ನು ಚೆನ್ನಾಗಿ ಹಸನ ಮಾಡಲು ಟ್ರಾಕ್ಟರ ಯೋಜನೆಯನ್ನು ಮಾಡಲಾಯಿತು.

ಟ್ರಾಕ್ಟರ ಉಪಯೋಗ ಮಾಡಿದ್ದರಿಂದ ಹೆಚ್ಚು ಆಹಾರ ಧಾನ್ಯ ಬೆಳೆಯಲು ಬಹಳ ಸಹಾಯವಾಯಿತು. ಇದರಿಂದ ಆಹಾರ ಧಾನ್ಯದ ಕೊರತೆಯು ದೂರಾಯಿತು. ಆದ ಕಾರಣ ಈಗ ಟ್ರಾಕ್ಟರಗಳನ್ನು ಮಾರಿದರೆ ಕಡಿಮೆ ಬೆಲೆ ಬರುವದು ಮತ್ತು ಹಾನಿಯಾಗುವುದೆಂದು ಟೀಕಿಸುವದು ಯೋಗ್ಯವಲ್ಲ.

ಸ್ಟೇಟ್ ಟ್ರಾನ್ಸಪೋರ್ಟದ ಸ್ಪೇರ್ ಪಾರ್ಟ್ಸದ ವ್ಯವಹಾರದಲ್ಲಿ ಬಹಳ ಹಾನಿಯಾಗಿದೆಯೆಂದು ಹೇಳಲಾಯಿತು. ಆದರೆ ಈ ವಿಷಯದ ಬಗ್ಗೆ ಎಸ್ಟಿಮೇಟ್ಸ ಕಮೀಟಿಯೂ ಯೋಗ್ಯ ಸೂಚನೆಗಳನ್ನು ತನ್ನ ರೀಪೋರ್ಟದಲ್ಲಿ ಮಾಡಿದೆ. ಈ ಸೂಚನೆಗಳ ಪ್ರಕಾರ ತಕ್ಕ ಕ್ರಮ ತೆಗೆದುಕೊಳ್ಳಲಾಗುವುದೆಂದು ನನಗೆ ಭರವಸೆ ಇದೆ. ಆದಕಾರಣ ಈ ಬಗ್ಗೆ ನಾನು ಹೆಚ್ಚಿಗೆ ಹೇಳಲು ಇಚ್ಛಿಸುವುದಿಲ್ಲ.

ಅಮೋನಿಯಮ್ ಸಲ್ಫೇಟದ ವ್ಯವಹಾರದಲ್ಲಿ ಬಹಳ ಅಫರಾತಫರಾ ಆಗಿದೆ ಮತ್ತು ಸರಕಾರಕ್ಕೆ ಬಹಳ ಹಾನಿಯಾಗಿದೆಯೆಂದು ಸಹ ಅನೇಕ ಸದಸ್ಯರು ಟೀಕೆ ಮಾಡಿದ್ದಾರೆ,

ಮುಂಬಯಿ ಪ್ರಾಂತದಲ್ಲಿ ಪ್ರಾರಂಭಿಸಲಾದ ಲಿಫ್ಟ್ ಇರಿಗೇಷನ್ ಯೋಜನೆಯ ಬಗ್ಗೆ ರಿಪೋರ್ಟ್‌ದಲ್ಲಿ ಸೂಚನೆಗಳನ್ನು ಮಾಡಲಾಗಿದೆ. ಕರ್ನಾಟಕದಲ್ಲಿಯ ಲಿಫ್ಟ್ ಇರಿಗೇಷನ್‌ದ ಬಗ್ಗೆ ಮಾನ್ಯ ಸದಸ್ಯರಾದ ಶ್ರೀ ಕೋಠಾಳೆಯವರು ತಮ್ಮ ಭಾಷಣದಲ್ಲಿ ಈ ಮೊದಲೇ ವಿವರವಾಗಿ ಹೇಳಿದ್ದಾರೆ. ನಮ್ಮ ವಿಜಾಪೂರ ಜಿಲ್ಲೆಯಲ್ಲಿಯ ಲಿಫ್ಟ್ ಇರಿಗೇಷನ್‌ದ ಬಗ್ಗೆ ಸ್ವಲ್ಪ ಹೇಳಬೇಕೆನ್ನುತ್ತೇನೆ. ವಿಜಾಪೂರ ದುಷ್ಕಾಳದ ಜಿಲ್ಲೆಯಾಗಿದೆ ಎಂಬುದು ಈ ಸಭಾಗೃಹದ ಎಲ್ಲ ಸದಸ್ಯರಿಗೂ ಗೊತ್ತಿದೆ. ಮತ್ತು ಸರಕಾರಕ್ಕೂ ಸಹ ಗೊತ್ತಿದೆ. ವಿಜಾಪೂರ ಜಿಲ್ಲೆಯಲ್ಲಿ ಯಾವ ಸಣ್ಣ ದೊಡ್ಡ ನೀರಾವರಿ ಯೋಜನೆಗಳಿಲ್ಲ. ನೀರಿನ ಕೊರತೆಯೂ ಯಾವಗಲೂ ಇದೆ. ಬರಗಾಲವು ಮೇಲಿಂದ ಮೇಲೆ ಬೀಳುವದು. ಆದಕಾರಣ ಈಗಾಗಲೇ ವಿಜಾಪೂರ ಜಿಲ್ಲೆಯಲ್ಲಿ ಪ್ರಾರಂಭಿಸಲಾಗಿರುವ ಯಾವ ಲಿಫ್ಟ್ ಇರಿಗೇಷನ್ ಯೋಜನೆಯನ್ನು ಬಂದು ಮಾಡಬಾರದು. ಎಸ್ಟಿಮೇಟ್ಸ ಕಮೀಟಿಯು ಶಿಫಾರಸ್ಸು ಮಾಡಿದಂತೆ ಬೆಟರಮೆಂಟ್ ಟ್ಯಾಕ್ಸ್ ಹಾಕಿ ಹಣ ವಸೂಲಿ ಮಾಡಬಹುದು. ಯಾತದ ನೀರಾವರಿ ಯೋಜನೆಯಿಂದ ಸರಕಾರಕ್ಕೆ ಹಾನಿಯಾಗುತ್ತದೆ ಎಂಬುದು ನಿಜ. ಆದರೆ ಲಾಭ ಪಡೆಯಬೇಕೆಂಬ ಉದ್ದೇಶದಿಂದ ಸರಕಾರದವರು ಈ ಯೋಜನೆಯನ್ನು ಪ್ರಾರಂಭಿಸಿಲ್ಲ. ವಿಜಾಪೂರ ಜಿಲ್ಲೆಯ ಬರಗಾಲದ ಪರಿಸ್ಥಿತಿಯನ್ನು ಲಕ್ಷ್ಯದಲ್ಲಿ ತೆಗೆದುಕೊಳ್ಳಬೇಕು. ಮುಂಬಯಿ ರಾಜ್ಯದಲ್ಲಿ ಬರಗಾಲದ ಬಗ್ಗೆ ವಿಜಾಪೂರ ಜಿಲ್ಲೆ ಪ್ರಸಿದ್ಧವಿದೆ. ವಿಜಾಪೂರ ಜಿಲ್ಲೆಯಲ್ಲಿಯ ಜನರೂ ಸಹ ಬಡತನದ ಮೂಲಕ ಈ ಯೋಜನೆಗಳನ್ನು

ತಮ್ಮ ಕಡೆಗೆ ತೆಗೆದುಕೊಂಡು ನಡೆಸಿಕೊಂಡು ಹೋಗುವಷ್ಟು ಆರ್ಥಿಕ ಪರಿಸ್ಥಿತಿಯು ಸಮಾಧಾನಕರವಿಲ್ಲದ ಮೂಲಕ ಅವರಿಗೆ ಶಕ್ಯವಿಲ್ಲ. ಘಟಪ್ರಭಾ ಯೋಜನೆಯಿಂದ ಕೆಲವೊಂದು ಭಾಗದಲ್ಲಿ ಅಷ್ಟೇ ನೀರಾವರಿ ಯೋಜನೆಯ ಲಾಭ ದೊರೆಯುವುದೆಂಬುದು ನಿಜ. ಉಳಿದ ಭಾಗದಲ್ಲಿ ಯಾವ ಬೇರೆ ನೀರಾವರಿ ಯೋಜನೆಗಳಿಲ್ಲ. ಆದಕಾರಣ ಯಾತದ ನೀರಾವರಿ ಯೋಜನೆಯಲ್ಲಿಯ ಯಾವುದೊಂದನ್ನು ಸಹ ಬಂದುಮಾಡಬಾರದು. ಮತ್ತು ಎಲ್ಲವನ್ನು ಹಾಗೆಯೇ ಚಾಲೂ ಇಡಬೇಕೆಂದು ನಾನು ಸರಕಾರಕ್ಕೆ ನಮ್ರಪೂರ್ವಕವಾಗಿ ಪ್ರಾರ್ಥನೆ ಮಾಡಿಕೊಳ್ಳುತ್ತೇನೆ. ಯಾತದ ನೀರಾವರಿ ಯೋಜನೆಯಿಂದ ಜನತೆಯ ಸುಧಾರಣೆಯಾಗುತ್ತದೆ. ಜನತೆಯ ಕಲ್ಯಾಣದ ಸಲುವಾಗಿ ಹಾನಿಯ ಕಡೆಗೆ ನೋಡದೆ, ಈ ಯೋಜನೆಗಳನ್ನು ಸರಕಾರದವರೇ ನಡೆಸುವರೆಂದು ಆಶಿಸುತ್ತೇನೆ. ಹೀಗಿರುವುದರಿಂದ ಸರಕಾರದವರು ಯಾವ ಯೋಜನೆಯನ್ನು ಬಂದು ಮಾಡದೆ ಎಲ್ಲವನ್ನೂ ಚಾಲು ಇಡಬೇಕೆಂದು ಮತ್ತೊಮ್ಮೆ ಪ್ರಾರ್ಥಿಸಿ ನನ್ನ ಭಾಷಣ ಮುಗಿಸುತ್ತೇನೆ.

# ಎರಡನೆ ಅವಧಿಯ ಚರ್ಚೆಗಳು–1957–1962

## 1957–58 ನೇ ಸಾಲಿನ ಬಜೆಟ್ ಅಧಿವೇಶನದ ಚರ್ಚೆ

3ನೇ ಜೂನ್ 1957

ಶ್ರೀ ಎಸ್.ವೈ.ಪಾಟೀಲ(ಸಿಂದಗಿ)– ಮಾನ್ಯ ಸಭಾಪತಿಗಳೇ, ಮಾನ್ಯ ಸಭಾಗೃಹದ ಮುಂದೆ ಮಾನ್ಯ ಅರ್ಥ ಸಚಿವರು ಮಂಡಿಸಿದ ಬಡ್ಜೆಟನ್ನು ಕೂಲಂಕುಷವಾಗಿ ಅವಲೋಕಿಸಿದೆ. ನಮ್ಮ ವಿರೋಧ ಪಕ್ಷದ ಸದಸ್ಯರು ಹೇಳಿದಂತೆ ಈ ಬಡ್ಜೆಟ್ಟು ನಿರಾಶದಾಯಕವಿರದೆ ಆಶಾದಾಯಕವಾಗಿದೆ ಎಂದು ಹೇಳಿ ನಮ್ಮ ವಿಜಾಪೂರ ಜಿಲ್ಲೆಯ ವಿಷಯವಾಗಿ ಕೆಲವು ಸಂಗತಿಗಳನ್ನು ಮಾನ್ಯ ಸಚಿವರ ಗಮನಕ್ಕೆ ತರಬಯಸುತ್ತೇನೆ.

ಸಾಧಾರಣವಾಗಿ ಹಳೆಯ ಮೈಸೂರಿನ ಮಾನ್ಯ ಸದಸ್ಯರುಗಳಿಗೆ ವಿಜಾಪೂರ ಜಿಲ್ಲೆಯ ಪರಿಸ್ಥಿತಿ ಅಷ್ಟು ಚೆನ್ನಾಗಿ ಗೊತ್ತಿರಲಿಕ್ಕಿಲ್ಲ ಎಂದು ತಿಳಿದಿದ್ದೇನೆ. ಈ ಮೈಸೂರು ರಾಜ್ಯ, ಅತಿ ಫಲವತ್ತಾದ ಭೂಮಿ ಇರುವ ಜಿಲ್ಲೆಗಳಲ್ಲಿ ವಿಜಾಪೂರ ಜಿಲ್ಲೆಯೂ ಒಂದು ಎಂಬುದನ್ನು ತಾವು ಲಕ್ಷದಲ್ಲಿಡಬೇಕು. ಅಲ್ಲಿ ಐದು ಹೊಳೆಗಳು ಹರಿದರೂ ಘಟಪ್ರಭಾ ಒಂದರ ಹೊರತು ಬೇರೆ ನೀರಾವರಿ ಯೋಜನೆಗಳು ಇರುವುದಿಲ್ಲ. ಅದರ ಒಂದು ಭಾಗವಾದ ಎಡದಂಡೆ ಕಾರ್ಯವೇ ಮುಗಿದಿಲ್ಲ. ಇಷ್ಟು ಹೊಳೆಗಳು ಹರಿಯುತ್ತಿದ್ದರೂ ನೀರಾವರಿ ಯೋಜನೆಗಳು ಇಲ್ಲದ್ದರಿಂದ ಯಾವಾಗಲೂ ದುಷ್ಕಾಲ ಬೀಳುತ್ತದೆ. 1917ರಿಂದ ಇಂದಿನವರೆಗಿನ 18 ಸಲ ದುಷ್ಕಾಲ ಬಿದ್ದಿದೆ. 1918ನೇ ಇಸವಿಯ ಒಂದೇ ವರುಷದಲ್ಲಿ ದುಷ್ಕಾಲದ ತಾತ್ಪೂರ್ತಿಕ ಕೆಲಸಕ್ಕಾಗಿ ಒಂದು ಕೋಟಿ ಅರವತ್ತೈದು ಲಕ್ಷ ಹಣ ಖರ್ಚಾಯಿತು. ದುಷ್ಕಾಲ ಬಿದ್ದಾಗ ನಮ್ಮ ರೈತರು ದನಕರುಗಳ ರಕ್ಷಣೆಗಾಗಿ ಗುಳಿಹೋಗುವ ಕನಕರತೆಯ ದೃಶ್ಯ ಬಹಳ ದುಃಖ ಉಂಟುಮಾಡುತ್ತದೆ. ಇನ್ನು ಮುಂದೆ ಈ ದುರ್ಗತಿ ನಮ್ಮ ಜಿಲ್ಲೆಗೆ ತಪ್ಪಬೇಕು.

1. ಘಟಪ್ರಭಾ ಎಡದಂಡೆ ಯೋಜನೆ ತೀವ್ರ ಮುಗಿಯಬೇಕು. ಬಲದಂಡೆ ಯೋಜನೆ ಪ್ರಾರಂಭವಾಗಬೇಕು.
2. ಅಪ್ಪರ್ ಕೃಷ್ಣಾ ಪ್ರಾಜೆಕ್ಟು, ಛಾಯಾ ಯೋಜನೆ, ಡೋಣ್ ಯೋಜನೆಗಳು ತೀವ್ರ ಆಗುವಂತೆ ಮಾಡಬೇಕು.

3. ಬಬಲೇಶ್ವರ, ನಾಗಾಠಾಣ, ತಡವಲಗಾ ಮೊದಲಾದ ನೀರಾವರಿ ಕೆರೆಗಳ ಕಾರ್ಯ ತೀವ್ರ ಮುಗಿಯಬೇಕು.

4. ವಿಜಾಪೂರ ಜಿಲ್ಲೆಯ ಇಂಡಿ, ಸಿಂದಗಿ, ಬಾಗೇವಾಡಿ, ವಿಜಾಪೂರ ತಾಲೂಕಿನ ಹಳ್ಳಿಗಳಲ್ಲಿ ನೀರಾವರಿಗಾಗಿ ಬಾವಿಗಳಾಗಬೇಕಾಗಿವೆ. ಇವುಗಳ ಸಲುವಾಗಿ 8–10 ಲಕ್ಷ ರೂಪಾಯಿಗಳನ್ನು ಕೊಟ್ಟು ತೀವ್ರ ಬಾವಿ ಆಗುವಂತೆ ಮಾಡಬೇಕು. ಇನ್ನೊಂದು ಸಂಗತಿ ಈಗ ಎನ್.ಇ.ಎಸ್. ಸ್ಕೀಮ್‌ಗಳಲ್ಲಿ ಬಾವಿಗಳಿಗಾಗಿ ಇಷ್ಟೇ ಹಣ ಕೊಡಬೇಕೆಂದು ನಿಗದಿ ಮಾಡಿ ಹೆಚ್ಚಿಗೆ ಹಣ ಕೊಡುವುದಿಲ್ಲ. ಇದು ಸಾಕಾಗುವುದಿಲ್ಲ. ಆದಕಾರಣ ಈ ನೀರಾವರಿ ಬಾವಿಗಳ ಸಲುವಾಗಿ ಹೆಚ್ಚಿನ ಹಣವನ್ನು ಒದಗಿಸಬೇಕು. ಕೇವಲ ನೀರಾವರಿ ಯೋಜನೆಗಳಾದರೆ ತೀರದು. ನೀರಾವರಿಗೆ ಅನುಕೂಲವಾಗುವಂತಹ ಭೂಮಿಯನ್ನು ಕೂಡ ಸರಿ ಪಡಿಸಬೇಕು. ಇದರ ಸಲುವಾಗಿ ಬುಲ್‌ಡೋಜರ್‌ಗಳನ್ನು ತರಿಸಿ ಸರಿಪಡಿಸುವ ಅವಶ್ಯಕತೆಯಿದೆ. ಕೆಲವು ವಿರೋಧ ಪಕ್ಷದ ಸದಸ್ಯರು ಈ ಸರಕಾರದ ಟ್ರ್ಯಾಕ್ಟರುಗಳು ಅಥವಾ ಬುಲ್‌ಡೋಜರ್‌ಗಳ ಬಗ್ಗೆ ಟೀಕಿಸಿದರು. ಆದರೆ ನಮ್ಮ ವಿಜಾಪೂರ ಜಿಲ್ಲೆಗೆ ಇದರಿಂದ ಉಪಯೋಗವಾಗಿದೆ ಮತ್ತು ಸಹಾಯವಾಗಿದೆ. ಆದ್ದರಿಂದ ಈ ರೀತಿಯ ಉತ್ತಮ ಬುಲ್‌ಡೋಜರ್‌ಗಳನ್ನು ಮತ್ತ ಟ್ರ್ಯಾಕ್ಟರ್‌ಗಳನ್ನು ಅವಶ್ಯವಾಗಿ ಸರಕಾರ ಇಡಬೇಕು. ಇವುಗಳನ್ನು ಇಡುವುದರಿಂದ ಮುಂದಕ್ಕೆ ಉತ್ತಮವಾಬಹುದು.

ರಸ್ತೆಗಳ ಪರಿಸ್ಥಿತಿ ರಾಜ್ಯಪಾಲರು ತಮ್ಮ ಭಾಷಣದಲ್ಲಿ ಗುಲ್ಬರ್ಗ–ವಿಜಾಪೂರ ಜಿಲ್ಲೆಗಳ ರಸ್ತೆ ಸರಿಯಾಗಿಲ್ಲವೆಂದು ಹೇಳಿದ್ದಾರೆ. ವಿಜಾಪೂರ ಜಿಲ್ಲೆಯಲ್ಲಿ ಬಹುತರವಾಗಿ ಎಲ್ಲ ರಸ್ತೆಗಳಿಗೆ ಪೂಲು ಇಲ್ಲದೆ ಇರುವುದರಿಂದ ಮಳೆಗಾಲದಲ್ಲಿ ವ್ಯಾಪಾರಕ್ಕೆ ಮತ್ತು ಜನಗಳಿಗೆ ಪ್ರವಾಸಕ್ಕೆ ತೊಂದರೆಯಾಗುತ್ತದೆ. ಕೃಷ್ಣಾ ನದಿಗೆ ಕೋರ್ತಿ ಹತ್ತಿರ, ಧನ್ನೂರು ಹತ್ತಿರ, ಭೀಮಾ ನದಿಗೆ ದೇವಣಗಾವ ಹತ್ತಿರ, ಡೋಣಿ ನದಿಗೆ ಹಿಟ್ಟನಹಳ್ಳಿ ಸಾತಿಹಾಳ ಹತ್ತಿರ ಪೂಲುಗಳಾಗಬೇಕಲ್ಲದೆ ತೆಂಗಿನ ಹಳ್ಳಿಗಳ ರಸ್ತೆಗೂ ಪೂಲು ಆಗಬೇಕಾಗಿವೆ.

ಮಾನ್ಯ ಮಂತ್ರಿಗಳೂ ಮತ್ತು ಮಾನ್ಯ ಸದಸ್ಯರೂ ವಿಜಾಪೂರ ಜಿಲ್ಲೆಯ ಬಗ್ಗೆ ಇರುವ ತೊಂದರೆಗಳನ್ನು ತಿಳಿದುಕೊಂಡು ಅದರ ಉನ್ನತಿಗೆ ಸಹಾಯ ಮಾಡಬೇಕೆಂದು ಆಶಿಸುತ್ತೇನೆ. ಹಳೆಯ ಮೈಸೂರು ಸಂಸ್ಥಾನದಲ್ಲೂ ಇಂಥ ಜಿಲ್ಲೆಗಳು ಬೇರೆ ಇದ್ದರೂ ಅವುಗಳ ಪರಿಚಯ ಇವರಿಗೆ ಅಷ್ಟಾಗಿ ಇಲ್ಲ. ಅವರು

ಇಂಥ ದುಷ್ಕಾಳ ನೋಡಿ ಸೂಕ್ತ ಪರಿಹಾರವನ್ನು ಸೂಚಿಸುವ ಉದ್ದೇಶದಿಂದ ಒಂದು ತಜ್ಞರ ಸಮಿತಿಯನ್ನು ನೇಮಿಸುವುದು ಅವಶ್ಯಕ. ಹದಿನಾಲ್ಕು ಲಕ್ಷಕ್ಕೆ ಮೇಲ್ಪಟ್ಟು ಜನ ಯಾವಾಗಲೂ ಇಲ್ಲಿ ಕಷ್ಟಪಡುತ್ತಿದ್ದಾರೆಂಬುದನ್ನು ತಾವುಗಳ ದಯವಿಟ್ಟು ಗಮನಿಸಬೇಕು. ಒಕ್ಕಲುತನ ಮಾಡುವ ರೈತರು ದೇಶದ ಆಧಾರ ಸ್ತಂಭಗಳಂತಿರುವರು. ಈ ದಿನ ತಮ್ಮ ಮನೆಗಳನ್ನು ಬಿಟ್ಟು ಬಹಳ ಚಿಂತಾಜನಕ ಸ್ಥಿತಿಯಲ್ಲಿದ್ದಾರೆ. ಆದ್ದರಿಂದ ದಯವಿಟ್ಟು ಏನಾದರೂ ಯೋಜನೆ ಮಾಡಿ ಒಂದು ನೀರಾವರಿ ಯೋಜನೆಯನ್ನು ಇಲ್ಲಿ ಕೈಕೊಂಡು ಇಲ್ಲಿನ ದುಷ್ಕಾಳ ನಿವಾರಣೆ ಮಾಡಬೇಕೆಂದು ಭಿನ್ನವಿಸಿಕೊಳ್ಳುತ್ತೇನೆ. ವಿಜಾಪೂರ ಜಿಲ್ಲೆಗೆ ನೀರಾವರಿ ಯೋಜನೆಯಾದರೆ ಬಾಗೇವಾಡಿ ಒಂದೇ ತಾಲೂಕು ಇಡೀ ಮೈಸೂರು ರಾಜ್ಯಕ್ಕೆ ಬೇಕಾಗುವಷ್ಟು ಆಹಾರ ಧಾನ್ಯಗಳನ್ನು ಒದಗಿಸಬಲ್ಲದು. ವಿಜಾಪೂರದಲ್ಲಿ ಈಗ ಡಿಸ್ಟ್ರಿಕ್ಟ್ ಫ್ಯಾಮಿನ್ ರಿಲೀಫ್ ಕಮಿಟಿಯೊಂದನ್ನು ಮಾಡಿದ್ದಾರೆ. ಇದರ ಆಶ್ರಯದಲ್ಲಿ ನೀರಾವರಿ ಯೋಜನೆಯನ್ನು ಕೈಕೊಳ್ಳುವುದರ ಜೊತೆಗೆ ಅಲ್ಲಿನ ರೈತಾಪಿ ಜನರಿಗೆ ಅನುಕೂಲವಾಗುವಂತೆ ಒಕ್ಕಲುತನ ಸುಧಾರಣೆಯನ್ನೂ ಒಡನೆಯೇ ಕೈಕೊಳ್ಳುವುದು ಅವಶ್ಯಕ.

ಇನ್ನೊಂದು ವಿಚಾರ, ಈಗ ಸರಕಾರದವರು 6–8ಲಕ್ಷ ರೂಪಾಯಿಗಳ ಆಯವ್ಯಯದಲ್ಲಿ ಎಲ್ಲಿ ರಾಷ್ಟ್ರೀಯ ವಿಸ್ತರಣಾ ಯೋಜನೆಯಿದೆಯೋ ಅಲ್ಲಿ ನೀರಾವರಿ ಬಾವಿಗಳ ಸಲುವಾಗಿ 30–40 ಸಾವಿರ ರೂಪಾಯಿಗಳನ್ನು ಕೊಡುತ್ತಿದ್ದಾರೆ. ಈ ಯೋಜನೆಯ ಪ್ರಕಾರ ಒಕ್ಕಲುತನಕ್ಕೆಂದು ನಿರ್ದಿಷ್ಟ ಹಣವನ್ನು ಕೂಡ ಕೊಟ್ಟು ತಕ್ಕ ರೂಪದಲ್ಲಿ ಸಹ ಸಹಾಯಮಾಡಬೇಕೆಂದು ಹೇಳುತ್ತೇನೆ.

ವಿಜಾಪೂರದ ಬಗ್ಗೆ ಇನ್ನೊಂದು ವಿಚಾರವನ್ನು ಸ್ವಲ್ಪ ಮಟ್ಟಿಗೆ ಈಗಾಗಲೇ ಹೇಳಿದ್ದೇನೆ. ಈ ಕಡೆಗಳಲ್ಲಿ ರಸ್ತೆಗಳ ಸ್ಥಿತಿ ಚೆನ್ನಾಗಿಲ್ಲವೆಂದು ಎಲ್ಲರೂ ಹೇಳಿದ್ದಾರೆ. ಇತ್ತ ಹಳೆಯ ಮೈಸೂರಿನ ರಸ್ತೆಗಳ ಪರಿಸ್ಥಿತಿ ಹೇಗಿದೆಯೋ ಗೊತ್ತಿಲ್ಲ. ಚನ್ನಪಟ್ಟಣ, ಮದ್ದೂರು ಮುಂತಾದಕಡೆಗಳಲ್ಲಿ ಮಾತ್ರ ನಾನು ನೋಡಿದ್ದೇನೆ. ಈ ರಸ್ತೆಗಳಷ್ಟು ನಮ್ಮ ರಸ್ತೆಗಳು ಚೆನ್ನಾಗಿಲ್ಲ. ಮಳೆಗಾಲದಲ್ಲಂತೂ ಜನರಿಗೆ ಪ್ರವಾಸ ಮಾಡುವುದು ದುಸ್ಸಾಧ್ಯವೇ. ನಮ್ಮ ಮಾನ್ಯ ಸಭಾಧ್ಯಕ್ಷರು ಯಾವ ಭಾಗದಿಂದ ಬರುತ್ತಾರೋ ಅಲ್ಲಿ ಕಣ್ಣೂರು ಹೊಳೆಗೆ ಕಂದಗಳ್ಳಿ ಹತ್ತಿರ ಒಂದು ಸೇತುವೆಯಿಲ್ಲ. ಮೋಟಾರು ವಾಹನಗಳ ಸಂಚಾರಕ್ಕೆ ಆಗಲಿ ವ್ಯವಸಾಯಕ್ಕೆ ಆಗಲಿ ಬಹಳ ಕಷ್ಟವಾಗಿದೆ. ಈ ದೃಷ್ಟಿಯಿಂದ ಸಾಧಾರಣವಾಗಿ ಇಂಥ ದುಷ್ಕಾಲ ಬಂದ ಕೂಡಲೆ ಏನಾದರೊಂದು ಕೆಲಸ ಮಾಡುವುದನ್ನು ಯೋಚನೆ ಮಾಡಬೇಕು. ಈ ಬಗ್ಗೆ ಒಂದು ಸ್ಪೆಷಲ್ ಡಿವಿಜನ್ನೇ ಏರ್ಪಡಿಸಿ ನಿಮ್ಮ ಯೋಜನೆಯ ಪ್ರಕಾರ ಪ್ರತಿವರ್ಷವೂ ಎಷ್ಟು ಮಾಡಬೇಕೆಂಬುದನ್ನು ಆಲೋಚನೆ ಮಾಡಿಕೊಂಡು ಮಾಡಬೇಕೆಂದು ಹೇಳುತ್ತೇನೆ.

ಇನ್ನೊಂದು ವಿಷಯ ಈ ಸಂದರ್ಭದಲ್ಲಿ ಪ್ರತ್ಯೇಕವಾಗಿ ನಾನು ಅರಿಕೆ ಮಾಡಿಕೊಳ್ಳಬೇಕೆಂದಿದ್ದೇನೆ. ನಮ್ಮ ಭಾಗದಲ್ಲಿ ಕಷ್ಟಗಳಿರುವಂತೆ ನಮ್ಮ ರಾಜ್ಯದ ಇತರ ಕಡೆಗಳಲ್ಲಿಯೂ ಅವರು ಹೇಳಿದಂತೆ ಮಲೆನಾಡು ಪ್ರದೇಶಗಳನ್ನು ತಿಳಿಯಬೇಕಾಗಿದೆ. ನಿಮಗೆ ನಮ್ಮ ಭಾಗಗಳಲ್ಲಿ ಕೂತುಹಲವಿರುತ್ತದೆ. ಈ ಸಭಾ ಸದಸ್ಯರುಗಳು ಯಾವುದನ್ನೂ ತಮ್ಮ ಒಂದು ಜಿಲ್ಲೆಯ ದೃಷ್ಟಿಯಿಂದ ನೋಡುವುದಿಲ್ಲ. ದೇಶದಲ್ಲಿ ಎಲ್ಲಿ ಕೊರತೆಯಿದೆಯೊ, ಎಲ್ಲಿ ತೊಂದರೆ ಸಂಭವಿಸಿದೆಯೋ ಅದನ್ನು ನೋಡುವುದಕ್ಕೆ ಎಲ್ಲರೂ ಹೋಗಬೇಕಾಗುತ್ತದೆ. ಹಳೆಯ ಮೈಸೂರು ಭಾಗದಲ್ಲಿಯೂ ಕೆಲವೆಡೆಗಳು ನಮಗಿಂತ ಹೀನಸ್ಥಿತಿಯಲ್ಲಿವೆ. ನಮ್ಮ ದೇಶದ ನಾನಾಕಡೆಗಳ ಭೂ ಪರಿಸ್ಥಿತಿ ಯೇನಿದೆಯೆಂಬುದು ಬರೀ ಕಾಗದ ಪತ್ರಗಳಲ್ಲಿ ನೋಡುವುದರಿಂದ ಗೊತ್ತಾಗುವುದಿಲ್ಲ. ಪ್ರತ್ಯಕ್ಷವಾಗಿ ನೋಡುವುದರಿಂದ ಬಹಳ ಅನುಕೂಲವಿದೆ. ಯಾವ ಸಮಸ್ಯೆಯನ್ನು ಪರಿಹರಿಸಬೇಕಾದರೂ ಪ್ರತ್ಯಕ್ಷವಾಗಿ ನೋಡಿ ಮಾಡಬೇಕಾಗುತ್ತದೆ. ಈ ದೃಷ್ಟಿಯಿಂದ ಈ ಸಭಾಸದಸ್ಯರುಗಳೆಲ್ಲಾ ಇಂಡಿಯಾ ಸರ್ಕಾರದವರು ಕೇಂದ್ರ ಶಾಸನ ಸಭೆಯ ಸದಸ್ಯರಿಗೆ ಅನುಕೂಲ ಮಾಡಿಕೊಕೊಟ್ಟಿರುವಂತೆ ಸ್ಟೇಟ್ ಟ್ರಾನ್ಸ್‌ಪೋರ್ಟ ಬಸ್ಸಿನಲ್ಲಿ ಫ್ರೀ–ಪಾಸುಗಳನ್ನು ಕೊಡಿಸಿ ಕೊಡಬೇಕೆಂದು ಹೇಳುತ್ತೇನೆ. ಈ ಹೊತ್ತು ಮಂತ್ರಿಗಳಿಗೆ ಯಾವ ಜವಾಬ್ದಾರಿ ಕೆಲಸಗಳನ್ನು ಮಾಡುತ್ತೇವೆಂದು ಹೇಳುತ್ತಾರೋ ಅದಕ್ಕಿಂತ ಹೆಚ್ಚಿಗೆ ಈ ಸಭೆ ಮಾನ್ಯ ಸದಸ್ಯರುಗಳು ಮಾಡಬೇಕಾಗುತ್ತದೆ. ಈ ಕಾರಣದಿಂದ ಸದಸ್ಯರುಗಳಿಗೆ ಈ ಅನುಕೂಲವೊದಗಿಸಿ ಕೊಡಬೇಕೆಂದು ಹೇಳುತ್ತೇನೆ.

ಈ ಸಭೆಯ ಮಾನ್ಯ ಸದಸ್ಯರು ಕೆಲವರು ಟ್ರ್ಯಾಕ್ಟರುಗಳ ವಿಚಾರವಾಗಿ ಟೀಕೆಮಾಡಿದ್ದಾರೆ. ನಮ್ಮ ಜಿಲ್ಲೆಯ ವಿಷಯ ಅವರಿಗೆ ಗೊತ್ತಿಲ್ಲವೆಂದು ಕಾಣುತ್ತದೆ. ನಮ್ಮಲ್ಲಿ ಒಂದೊಂದು ಜಮೀನು 20–30 ಎಕರೆಯಷ್ಟು ದೊಡ್ಡದಾಗಿರುತ್ತದೆ. ಆದರೆ ಉತ್ಪನ್ನ ಮಾತ್ರ ಬಹಳ ಕಡಿಮೆ. ಭೂಮಿ ಫಲವತ್ತಾಗಿದ್ದರೂ ಹೆಚ್ಚಿಗೆ ಉತ್ಪತ್ತಿ ಬರುತ್ತಿಲ್ಲ. ಆದರೆ ಸರಿಯಾಗಿ ಬೆಳೆ ಮಾಡಿದರೆ ಇಡೀ ಕರ್ನಾಟಕಕ್ಕೆ ಸಾಕಾಗುವಷ್ಟು ದವಸ ಬೆಳೆಯಬಹುದು. ನಮ್ಮ ಬಾಗೇವಾಡಿ ತಾಲ್ಲೂಕು ಹತ್ತಿ, ಸೇಂಗಾಕ್ಕೆ ಪ್ರಸಿದ್ಧಿ. ಉತ್ತರ ಭಾಗದಲ್ಲಿ ತಂಬಾಕು ಬೆಳೆಯಬಹುದು. ಇಂಥ ಫಲವತ್ತಾದ ಪ್ರದೇಶವಿದ್ದರೂ ಯಾವುದೊಂದು ಸರಿಯಾದ ನೀರಾವರಿ ಯೋಜನೆಯಿಲ್ಲದೆ ನಮಗೆ ಆಗಾಗ್ಗೆ ದುಷ್ಕಾಲ ಒದಗುತ್ತದೆ. ಆದ್ದರಿಂದ ಸರಿಯಾದ ನೀರಾವರಿ ಯೋಜನೆ ಹಾಕಿಕೊಂಡು ನಮ್ಮ ವಿಜಾಪೂರ ಜಿಲ್ಲೆಯ ಫಲವತ್ತಾರ ಜಮೀನುಗಳ ಪೂರ್ಣ ಫಲವನ್ನು ಹೊಂದುವಂತೆ ಮಾಡಬೇಕೆಂದು ಹೇಳುತ್ತೇನೆ.

ನಮ್ಮ ಕಡೆ ಒಕ್ಕಲುತನ ಸಮಸ್ಯೆಯಷ್ಟೇ ಪ್ರಬಲವಾದ ಇನ್ನೊಂದು ಸಮಸ್ಯೆಯೆಂದರೆ ನಮ್ಮ ನೇಕಾರರ ಸಮಸ್ಯೆ. ಅವರು ವ್ಯವಸಾಯುವನ್ನು ಅವಲಂಬಿಸಿರುವುದಿಲ್ಲ. ನೇಕಾರರು ತಯಾರು ಮಾಡಿದ ಮಾಲುಗಳಿಗೆ ಇಂತಿಷ್ಟು ಸರಿಯಾದ ಧಾರಣೆ ದೊರೆಯದೆ ಆ ಜನ ಕೇವಲ ದುಸ್ಥಿತಿಗಿಳಿದಿದ್ದಾರೆ. ನಾನು ವಿಶೇಷವಾಗಿ ಕಾಲವನ್ನು ತೆಗೆದುಕೊಳ್ಳುವುದಿಲ್ಲ. ಕೊನೆಯಲ್ಲಿ ಹರಿಜನರ ವಿಷಯವಾಗಿ ಒಂದು ಮಾತನ್ನು ಹೇಳಿ ನನ್ನ ಭಾಷಣ ಮುಗಿಸುತ್ತೇನೆ. ನನ್ನ ಅನೇಕ ಮಾನ್ಯ ಸ್ನೇಹಿತರು ಹರಿಜನರಿಗೆ ಎಷ್ಟು ಪ್ರಾತಿನಿಧ್ಯ ಇರಬೇಕೆಂಬುದನ್ನು ಹೇಳಿದ್ದಾರೆ. ಅದು ಸಹಜವಾದ ಅಂಶ. ಅವರು ಒಂದು ತಾತ್ವಿಕ ದೃಷ್ಟಿಯಿಂದ ಆ ರೀತಿ ಭಾಷಣ ಮಾಡಿದ್ದಾರೆಯೇ ವಿನಾ ಮತ್ತ ಬೇರೆ ಏನೂ ಇಲ್ಲ. ಈಗಾಗಲೇ ಕೇಂದ್ರ ಸರಕಾರದವರು ಹರಿಜನೋದ್ಧಾರದ ಬಗ್ಗೆ ಹೊಸದಾಗಿ ಅನೇಕ ಕಾನೂನುಗಳನ್ನು ಮಾಡಿದ್ದಾರೆ. ಅದಕ್ಕಾಗಿ ನಮ್ಮ ಸರಕಾರದವರು ಅನೇಕ ಪ್ರಯತ್ನಗಳನ್ನು ಕೈಕೊಳ್ಳುತ್ತಿರುವುದು ಪ್ರಶಂಸನೀಯವಾಗಿದೆ. ಆದರೆ ಹಳ್ಳಿಗಳಲ್ಲಿರುವ ಹರಿಜನರ ಸಲುವಾಗಿ ತಿರಸ್ಕಾರ ಭಾವನೆಯೇನೋ ನಮ್ಮ ಸರಕಾರದವರಿಗೆ ಕಡಿಮೆಯಾಗಿಲ್ಲ. ಹರಿಜನರ ಶಿಕ್ಷಣಕ್ಕಾಗಿ ಹಳ್ಳಿಗಳಲ್ಲಿ ಶಾಲಾ ಕಟ್ಟಡಗಳೇ ಇಲ್ಲ. ಅಂತಹ ಸ್ಥಳಗಳಲ್ಲಿ ಸರಕಾರದವರು ಶಾಲಾ ಕಟ್ಟಡಗಳನ್ನು ನಿರ್ಮಿಸಿ ಹರಿಜನರ ಶಿಕ್ಷಣೋದ್ಧಾರಕ್ಕಾಗಿ ಅವುಗಳನ್ನು ಕೆಲವು ವರ್ಷಗಳ ಮಟ್ಟಿಗೆ ಬಾಡಿಗೆ ರೂಪವಾಗಿಯಾದರೂ ಕೊಡಬಹುದು. ಬೊಂಬಾಯಿ ಸರಕಾರದವರು ಹರಿಜನೋದ್ಧಾರಕ್ಕಾಗಿ ಗ್ರಾಮಗಳಿಂದ ಕಾಲುಭಾಗ ಹಣವನ್ನು ವಸೂಲಿ ಮಾಡಿ ಸರ್ಕಾರದಿಂದ ಭಾಗದಷ್ಟು ಹಣವನ್ನು ಗ್ರಾಂಟು ರೂಪವಾಗಿ ಪಡೆದು ಶಾಲೆಗಳನ್ನು ನಡೆಸಿಕೊಂಡು ಹೋಗುತ್ತಿದ್ದಾರೆ. ಹಾಗೆ ನಮ್ಮ ಸರ್ಕಾರದವರು ವಿಜಾಪೂರ ಮತ್ತು ಬೆಳಗಾಂ ಜಿಲ್ಲೆಗಳಲ್ಲಿ ಜಾಗ್ರತೆಯಾಗಿ ಸ್ಕೂಲ್ ಬಿಲ್ಡಿಂಗ್‌ಗಳನ್ನು ಒದಗಿಸಿ ಕೆಲಸವನ್ನು ಸಂಪೂರ್ಣವಾಗಿ ಕಾರ್ಯಗತ ಮಾಡಬೇಕೆಂದು ಹೇಳುತ್ತೇನೆ. ನಾನು ಹೇಳಿದ ಅಂಶಗಳಿಗೆಲ್ಲಾ ಮಾನ್ಯ ಮಂತ್ರಿಗಳು ಲಕ್ಷ ಕೊಡಬೇಕೆಂದು ವಿನಂತಿಸಿ ಅರ್ಥ ಸಚಿವರು ನಮ್ಮ ಮುಂದೆ ಈ ವರ್ಷದ ಆಯುವ್ಯಯ ಪಟ್ಟಿಯನ್ನು ಮಂಡಿಸಿದುದಕ್ಕಾಗಿ ಅವರನ್ನು ಅಭಿನಂದಿಸಿ ವಂದಿಸಿ ನನ್ನ ಮಾತನ್ನು ಮುಗಿಸುತ್ತೇನೆ.

# ರೈತನ ಸ್ಥಿತಿಗತಿಯ ಕುರಿತು

**25ನೇ ಜುಲೈ 1957**

ಶ್ರೀಎಸ್.ವೈ.ಪಾಟೀಲ(ಸಿಂದಗಿ)– ಮಾನ್ಯ ಸಭಾಪತಿಗಳೇ, ಈ ಮಾನ್ಯ ಸಭಾಗೃಹದ ಮುಂದಿರುವ ಬೇಡಿಕೆಗಳನ್ನು ಅನುಮೋದಿಸುತ್ತಾ ಕೆಲವು ಸೂಚನೆಗಳನ್ನು ಮಾಡಬಯಸುವೆ. ನೂತನ ಕರ್ನಾಟಕದ ಎರಡು ಕೋಟಿ ಜನರಲ್ಲಿ ಹಳ್ಳಿಯಲ್ಲಿರುವ ರೈತರ ಸಂಖ್ಯೆ ಹೆಚ್ಚು. ಕರ್ನಾಟಕದ ಸುಧಾರಣೆಯಾಗಬೇಕಾದರೆ ರೈತರ ಸುಧಾರಣೆಯಾಗಬೇಕು. ಅವರ ಕೆಲಸಕ್ಕೆ ಸಹಾಯ ಮಾಡುವ ಹಳ್ಳಿಯ ದುಡಿಮೆಗಾರರ ಸುಧಾರಣೆಯಾಗಬೇಕು. ಈ ದೃಷ್ಟಿಯಿಂದ ನೋಡುವುದಾದರೆ ನಮ್ಮ ಕರ್ನಾಟಕದ ರೈತ ಬಾಂಧವರಿಗೆ ಇರುವ ತೊಂಡರೆಗಳೆರಡು. ಒಂದು ಅನ್ನದ ಕೊರತೆ, ಇನ್ನೊಂದು ವಿದ್ಯೆಯ ಕೊರತೆ. ಇವೆರಡು ತೊಂದರೆಗಳು ದೂರವಾಗದ ವಿನಃ ಜಗತ್ತಿನ ಯಾವುದೇ ತರದ ಸುಧಾರಣೆಗಳ ಲಾಭ ಅವನಿಗೆ ದೊರೆಯಲಾರದು. ಅವನ ಬಾಳ್ವೆ ಸುಂದರಮಯವಾಗಬೇಕಾದರೆ ಆತನಿಗೆ ಅನ್ನದ ತೊಂದರೆ ಇರಬಾರದು. ಅನ್ನದ ಸಮಸ್ಯೆ ಬಗೆಹರಿಯಬೇಕು. ಅನ್ನ ಬೆಳೆಯಲು ಭೂ ಸುಧಾರಣೆ ಅವಶ್ಯಕವಾದದ್ದು. ಒಂದನೆಯದಾಗಿ ಅವನಿಗಿರುವ ಭೂಮಿ ಕಿರ್ದಿಯಾಗಬೇಕು. ಅನಂತರ ಸಮಪಾತಳಿ, ತದನಂತರ ಒಡ್ಡು ಬೇಕು. ಆಮೇಲೆ ನೀರು ಗೊಬ್ಬರಗಳ ಅನುಕೂಲತೆ ದೊರೆಯಬೇಕು. ಬೆಳೆದ ಬೆಳೆಗಳಿಗೆ ಉಂಟಾಗುವ ರೋಗ ನಿವಾರಣೆಗೆ ಔಷಧೋಪಚಾರದ ಸಹಾಯವಾಗಬೇಕು.

ಯಾಂತ್ರಿಕ ಕಾರ್ಖಾನೆಗಳಲ್ಲಿರುವ ಕೂಲಿಕಾರರು ಸಂಪಾದನೆಯಿಂದ ತಮ್ಮ ಕಲ್ಯಾಣ ಮಾಡಿಕೊಳ್ಳಲಾರರು. ರೈತನ ಸ್ಥಿತಿಗೂ ಅನಾಥ ಕೂಸಿನ ಸ್ಥಿತಿಗೂ ಅಂತರವಿಲ್ಲ. ಆತನ ಕಲ್ಯಾಣದ ಹೊರೆ ಸರ್ಕಾರದವರ ವತಿಯಿಂದ ಆರಿಸಿ ಬಂದ ನಮ್ಮ ನಿಮ್ಮಗಳ ಮೇಲೆ ಇರುವುದು. ಈಗಿನ ಕಾಲದಲ್ಲಿ ಆಳಿನಿಂದ ಕಿರ್ದಿ ಮಾಡಿಸುವುದು ಕಠಿಣ. ಕಾರಣ ಸರ್ಕಾರದವರೇ ಕಡ್ಡಾಯವಾಗಿ ಟ್ರಾಕ್ಟರ್ ಹೊಡೆದುಕೊಟ್ಟು ಅದರ ಬಾಡಿಗೆಯನ್ನು ವಸೂಲು ಮಾಡಬೇಕು. ಬುಲ್‌ಡೋಜ್‌ರನಿಂದ ಸಮಪಾತಾಳಿ ಮಾಡಿಕೊಡಬೇಕು.

ವಿಜಾಪೂರ ಜಿಲ್ಲೆಯ ಸಲುವಾಗಿ ಹೇಳುವುದಾದರೆ ಈ ಜಿಲ್ಲೆಯಲ್ಲಿ 14 ಲಕ್ಷ ಜನರಿದ್ದು ಸಾಧಾರಣವಾಗಿ 28 ಲಕ್ಷ ಚೀಲ ಆಹಾರ ಬೇಕಾಗುವುದು. ಈಗ ಸಾಕಾಗುವಷ್ಟು ಆಹಾರ ಬರುವುದಿಲ್ಲ. ಅದಕ್ಕಾಗಿ ನೀರಾವರಿ ಸಹಾಯಬೇಕು.

ಎರಡನೇ ಪಂಚವಾರ್ಷಿಕ ಯೋಜನೆಯಲ್ಲಿ ಸರ್ಕಾರದವರು ದೊಡ್ಡ ದೊಡ್ಡ ಯೋಜನೆಗಳನ್ನು ಕೈಕೊಳ್ಳುವವರಿರುವರು. ನಮ್ಮ ಸರ್ಕಾರವು ಆರ್ಥಿಕ

ದೃಷ್ಟಿಯಿಂದ ಅಷ್ಟು ಸಬಲವಾಗಿಲ್ಲ. ಒಂದೇ ಕಡೆ ಅತಿ ದೊಡ್ಡ ಯೋಜನೆ ಕೈಕೊಳ್ಳುವುದರಿಂದ ಎಲ್ಲ ಭಾಗದಲ್ಲಿ ಇರ್ರಿಗೇಷನ ಸ್ಕೀಮುಗಳನ್ನು ತೆಗೆದುಕೊಳ್ಳಬೇಕು. ಆ ದೃಷ್ಟಿಯಿಂದ ವಿಜಾಪೂರ ಜಿಲ್ಲೆಯ ಎಲ್ಲ ನೀರಾವರಿ ಯೋಜನೆಗಳ ಸರ್ವೆ ಮಾಡಿಸಿ ಕಾರ್ಯ ರೂಪಕ್ಕಿಳಿಸಬೇಕು. ನೀರಾವರಿ ಸೌಕರ್ಯವಿಲ್ಲದಲ್ಲಿ ಬಾವಿಗಳನ್ನು ತೆಗೆಸುವ ಯೋಜನೆ ಮಾಡಬೇಕು.

ನನ್ನ ಸಿಂದಗಿ ತಾಲ್ಲೂಕಿನ ಮಟ್ಟಿಗೆ ಹೇಳುವುದಾದರೆ ನಮ್ಮ ತಾಲೂಕಿನ ಡೋಣಿದಂಡೆಯ ಒಂಭತ್ತು ಹಳ್ಳಿಗಳಲ್ಲಿ ಭೀಮಾ ನದಿ ದಂಡೆಯ ಹತ್ತು ಹಳ್ಳಿಗಳಲ್ಲಿ ಬಾವಿಗಳಾಗುವುದಿಲ್ಲ. ಉಳಿದ 125 ಹಳ್ಳಿಗಳಲ್ಲಿ ಬಾವಿಗಳಾಗುವವು. ಪ್ರತಿ ಊರಿಗೆ ಕನಿಷ್ಠ 200 ಬಾವಿಗಳಾದರೂ ತೆಗೆಸಿದರೂ ನಾಲ್ಕು ಲಕ್ಷ ಚೀಲ ಧಾನ್ಯ ಮತ್ತು 20 ಲಕ್ಷ ರೂಪಾಯಿಗಳ ಉತ್ಪನ್ನ ಹೆಚ್ಚಾಗುವುದು. ಆದ್ದರಿಂದ ಬಾವಿಗಳ ಕಡೆಗೆ ಗಮನ ಹೆಚ್ಚು ಕೊಡಬೇಕು. ವಿಜಾಪೂರ ಜಿಲ್ಲೆಯಲ್ಲಿ ಎಷ್ಟು ಬಾವಿಗಳಿವೆ ಎಂದು ಸರ್ವೆಮಾಡಿಸಿ ತಗಾಯಿ ಮತ್ತು ಸಬ್ಸಿಡಿ ಕೊಟ್ಟು ಬಾವಿ ಮಾಡಿಸಿಕೊಡಬೇಕು. ದುಷ್ಕಾಳ ಬಿದ್ದಾಗ ದುಷ್ಕಾಳ ಕಾಮಗಾರಿಗೆ ಅಪರಿಮಿತ ಋಣ ಖರ್ಚು ಮಾಡುತ್ತೇವೆ. ಆ ಸಮಯದಲ್ಲಿ ಬಾವಿ ಹೊಡೆಸುವವರಿಗೆ ಬಾವಿಗೆ ಒಟ್ಟು ಹಿಡಿಯುವ ಹಣದಲ್ಲಿ ಅರ್ದ ತಗಾಯಿ, ಅರ್ಧ ಸಹಾಯ ಧನವೆಂದು ಕೊಡಬೇಕು. ಕೆಲವು ವರ್ಷಗಳ ಹಿಂದೆ ಮುಂಬೈ ಸರ್ಕಾರದವರು ಒಂದು ಬಾವಿಗೆ 500ರಂತೆ ಸಬ್ಸಿಡಿ ಕೊಟ್ಟಾಗ ಬಹಳ ಬಾವಿಗಳಾದವು. ಹಳೆಯ ಮೈಸೂರಿನಲ್ಲಿ ಪ್ರತಿ ಬಾವಿಗೆ 250 ರೂಪಾಯಿಗಳಂತೆ ಸಬ್ಸಿಡಿ ಕೊಡುತ್ತಿದ್ದಂತೆ ಉಳಿದ ಭಾಗಕ್ಕೂ ಕೊಡಬೇಕು.

ಈಗ ಹಳ್ಳಿಗಳಲ್ಲಿ ಉದ್ಯೋಗವಿಲ್ಲದ ಮೂಲಕ ಹಳ್ಳಿ ಹಾಳಾಗಿ ಪಟ್ಟಣಗಳ ಸಂಖ್ಯೆ ಬೆಳೆಯುತ್ತಿದೆ. ನೀರಾವರಿ ಅನುಕೂಲತೆಯಾದರೆ ಪ್ರತಿಯೊಬ್ಬರೂ ಹಳ್ಳಿಯಲ್ಲಿರಲು ಇಚ್ಛಿಸುತ್ತಾರೆ. ಹಳ್ಳಿ ಹಾಳಾಗಿ ಮುಂಬೈ ಬೆಂಗಳೂರುಗಳಂತೆ ಶಹರುಗಳ ಸಂಖ್ಯೆ ಬೆಳೆಯಬಾರದು. ಶಹರುಗಳು ಸಣ್ಣವಾಗಿ ಹಳ್ಳಿಗಳು ಬೆಳೆಯಬೇಕು. ರೈತರ ಉತ್ಪನ್ನ ಹೆಚ್ಚಿದರೆ ಸರ್ಕಾರದ ಹತ್ತಿರ ಅಡ್ಡಾಡುವ ನಿರುದ್ಯೋಗಿಗಳ ಸಂಖ್ಯೆ ಕಡಿಮೆಯಾಗುತ್ತದೆ. ಟ್ರಾಕ್ಟರ್ ಬುಲಡೋಜರ್‌ಗಳ ಉಪಯೋಗ ಬಹಳವಾಗಿದೆ. ಅವುಗಳು ಹೆಚ್ಚಾಗಬೇಕು. ಈ ದೇಶದಲ್ಲಿ ಸ್ಪೇರ್‌ಪಾರ್ಟ್ಸ್ ಅವುಗಳ ಸಾಮಾನುಗಳು ಆಗುವುದಿಲ್ಲ. ಅವುಗಳ ಕಾರ್ಖಾನೆ ಆಗಬೇಕು.

ಸರ್ಕಾರಕ್ಕೆ ಸೇಲ್ಸ್‌ಟ್ಯಾಕ್ಸ್ ಬಂದರೂ ಗಿರಾಕಿಯಾಗಿ ರೈತನೇ ಕೊಡುವನು. ಇನ್‌ಕಂಟ್ಯಾಕ್ಸ್ ಕೊಡುವ ಶ್ರೀಮಂತರು ಬೇರೆಯಾದರೂ ಶ್ರೀಮಂತರಿಗೆ ಇನ್‌ಕಂ

ಉತ್ಪನ್ನ ಕೊಡುವವನೇ ರೈತ. ಸರ್ಕಾರದ ಆಧಾರ ಸ್ತಂಭವೆಂದರೆ ರೈತನು. ಆದರೆ ಅವನ ಸಲುವಾಗಿ ಸೌಕರ್ಯ ಇಲ್ಲ. ಅವನಿಗೆ ಪ್ರವಾಸಕ್ಕೆ ರಸ್ತೆಗಳಿಲ್ಲ. ಅಜಾರಿಯಾಣೆ ಔಷಧೋಪಚಾರವಿಲ್ಲ. ಇವೆಲ್ಲ ತೊಂದರೆ ಅವನಿಗೆ ಇರಬಾರದು. ಒಂದು ಹಳ್ಳಿಯಿಂದ ಐದು ಮೈಲುಗಳ ಪ್ರವಾಸ ಮಾಡಲು ಒಂದು ದಿನ ಬೇಕಾಗುವುದು.

ಒಕ್ಕಲುತನಕ್ಕೆ ಉತ್ತಮ ಎತ್ತುಗಳು ಬೇಕು. ಆದ್ದರಿಂದ ಉತ್ತಮ ಎತ್ತಿನ ಬೆಳವಣಿಗೆಗೆ ಬೀಜದ ಹೋರಿಗಳು ಜರೂರು ಇವೆ. ಬೀಜದ ಹೋರಿಗಳ ಸಲುವಾಗಿ ಸಬ್ಸಿಡಿಕೊಡುವುದನ್ನು ಬಂದ್ ಮಾಡುವರೆಂದು ಕೇಳಿದ್ದೇನೆ. ಬಂದ್ ಮಾಡಬಾರದು. ಉಳಿದವರು ಡೆಪ್ಯುಟೇಷ ತರುವರು, ರೈತರ ಉತ್ಪನ್ನ ಹೆಚ್ಚಿದರೆ ಡೆಪ್ಯುಟೇಷ ತರದೆ ಸರಕಾರಕ್ಕೆ ಸಹಾಯ ಮಾಡುವರು. ನಮ್ಮ ಜಿಲ್ಲೆಯಲ್ಲಿ ಲಮಾಣಿ ಬಂಧುಗಳು ಉತ್ತಮ ರೈತರಾಗಿರುವರು. ಅವರಿಗೆ ಕುಡಿಯುವ ನೀರಿನ ಸೌಕರ್ಯವಿಲ್ಲ. ಮನೆಗಳ ವ್ಯವಸ್ಥೆ ಇಲ್ಲ. ಅವರ ತೊಂದರೆ ದೂರವಾಗುವಂತೆ ಮಾಡಿ ಅವರ ಒಕ್ಕಲುತನಕ್ಕೆ ಉತ್ತೇಜನಕೊಡಬೇಕೆಂದು ಸರ್ಕಾರಕ್ಕೆ ಪ್ರಾರ್ಥಿಸುತ್ತೇನೆ. ಕೇವಲ ಭಾಷೆಯ ಮೇಲಿನ ಪ್ರೇಮದಿಂದ ಕನ್ನಡ ಪ್ರಾಂತ ಬೇಡಿಲ್ಲ. ಮುಂಬೈ ಪ್ರಾಂತದಲ್ಲಿ ನಾವು ಅಲಕ್ಷಿಸಿದ್ದ ನಮ್ಮ ಸ್ವಂತ ಪ್ರಾಂತದಿಂದ ನಮ್ಮ ಉದ್ಧಾರವಾಗುವುದೆಂದು ಅತಿ ಆಶೆಯಿಂದ ಬಂದಿರುತ್ತೇವೆ. ಇನ್ನು ಮುಂದೆ ಈ ತೊಂದರೆಗಳು ಉಳಿಯಲಾರವೆಂದು ಆಶಿಸಿ ಈ ಬೇಡಿಕೆಗೆ ಅನುಮೋದಿಸಿ ನನ್ನ ಮಾತು ಮುಗಿಸುವೆನು.

## ರಾಜ್ಯಪಾಲರ ಭಾಷಣದ ಮೇಲಿನ ವಂದನಾ ನಿರ್ಣಯದ ಚರ್ಚೆ

**15ನೇ ಮಾರ್ಚ 1958**

ಶ್ರೀಎಸ್.ವೈ.ಪಾಟೀಲ (ಹಿಪ್ಪರಗಿ-ಬಾಗೇವಾಡಿ)- ಮಾನ್ಯ ಸಭಾಪತಿಗಳೇ, ಈ ಮಾನ್ಯ ಸಭಾಗೃಹದಲ್ಲಿ ಮಾನ್ಯ ಸದಸ್ಯರಾದ ಶ್ರೀಎಸ್.ಹುಚ್ಚಮಾಸ್ತಿಗೌಡರು ಮಂಡಿಸಿರತಕ್ಕ ವಂದನಾರ್ಪಣೆಯ ಠರಾವನ್ನು ನಾನು ಅನುಮೋದಿಸುತ್ತೇನೆ. ರಾಜ್ಯಪಾಲರ ಭಾಷಣದಲ್ಲಿ ಅನೇಕ ಮಹತ್ವದ ಅಂಶಗಳು ಇವೆ. ಮೊದಲನೆಯದಾಗಿ ಈ ಸಭಾಗೃಹದ ಮಾನ್ಯ ಸದಸ್ಯರುಗಳು ಕಳೆದ ಐದು ವರ್ಷಗಳಲ್ಲಿ ಮಾಡಿದ ಕೆಲಸದ ಬಗ್ಗೆ ರಾಜ್ಯಪಾಲರು ತಮ್ಮ ಮೆಚ್ಚುಗೆಯನ್ನು ವ್ಯಕ್ತಪಡಿಸಿದ್ದಾರೆ. ಮೈಸೂರು ರಾಜ್ಯದಲ್ಲಿ ವಿದ್ಯುಚ್ಛಕ್ತಿಯನ್ನು ಹೆಚ್ಚಾಗಿ ಪೂರೈಸಲ್ಪಡುತ್ತಿದೆಯೋ ಅದೇ ರೀತಿಯಾಗಿ ಈಗ ಹೊಸ ಮೈಸೂರು ರಾಜ್ಯದಲ್ಲಿ ಸೇರ್ಪಡೆಯಾದ ಹೊರಗಿನಿಂದ ಬಂದ

ಬೇರೆ ಬೇರೆ ಹೊಸ ಭಾಗಗಳಲ್ಲಿಯೂ ಸಹ ವಿದ್ಯುಚ್ಛಕ್ತಿಯು ಪೂರೈಸಲ್ಪಡಬೇಕೆಂದು ಈ ಸಂದರ್ಭದಲ್ಲಿ ನಾನು ಸೂಚಿಸುತ್ತೇನೆ.

ಮಲ್ಪೆ ಬಂದರನ್ನು ದೊಡ್ಡ ಬಂದರನ್ನಾಗಿ ವಿಸ್ತರಿಸುವ ಉದ್ದೇಶದಿಂದ ಅದರ ಸರ್ವೆ ಮಾಡಿಸುವ ವಿಚಾರವನ್ನು ಸರಕಾರದವರು ಗಮನದಲ್ಲಿಟ್ಟುಕೊಂಡಿದ್ದಾರೆಂಬುದು ಸಂತೋಷದ ಸಂಗತಿಯಾಗಿದೆ. ರಾಜ್ಯದಲ್ಲಿಯ ಸರಕಾರಿ ನೌಕರರಿಗೆ ಹೊಸ ಸಂಬಳದ ಸ್ಕೇಲುಗಳನ್ನು ಗೊತ್ತು ಮಾಡಿರುವುದು ಎಲ್ಲ ನೌಕರರಿಗೆ ಸಂತೋಷವನ್ನುಂಟುಮಾಡಿದೆ. ಕೃಷ್ಣಾ ನದಿಯ ಮೇಲ್ಭಾಗದ ಯೋಜನೆ ಮತ್ತು ಮಲಪ್ರಭಾ ಯೋಜನೆಯ ಸರ್ವೆ ಕೆಲಸ ನಡೆಸಲು ಮಂಜೂರಾತಿ ಕೊಟ್ಟದ್ದು ಸಂತೋಷಕರವಾಗಿದೆ. ಕೃಷ್ಣಾ ನದಿಯ ಮೇಲ್ಭಾಗದ ಯೋಜನೆಯು ದುಷ್ಕಾಳ ಪೀಡಿತ ವಿಜಾಪೂರ ಜಿಲ್ಲೆಗೆ ಅತ್ಯಂತ ಅವಶ್ಯಕವಾಗಿರುವುದರಿಂದ ಈ ಯೋಜನೆಯ ಕೆಲಸವನ್ನು ತ್ವರಿತವಾಗಿ ಕೈಕೊಳ್ಳಬೇಕೆಂದು ನಮ್ರತೆಯಿಂದ ಸೂಚಿಸುತ್ತೇನೆ. ನಮ್ಮ ಮೈಸೂರು ರಾಜ್ಯವು ಒಕ್ಕಲುತನ ಪ್ರಾಧಾನ್ಯವಾಗಿರುವ ದೇಶವಾಗಿದೆ. ವೆಟರಿನರಿ ಕಾಲೇಜೊಂದನ್ನು ಸ್ಥಾಪಿಸುವ ವಿಚಾರವು ಬಹಳ ಸೂಕ್ತವಾಗಿದೆ. ಶಕ್ಯವಿದ್ದಷ್ಟು ಮಟ್ಟಿಗೆ ಮುಂಬಯಿ ರಾಜ್ಯದಿಂದ ಬಂದ ಕರ್ನಾಟಕದ ಭಾಗದಲ್ಲಿ ಈ ವೆಟರ್ನರಿ ಕಾಲೇಜ್‌ನ್ನು ತೆರೆಯಬೇಕು. ಕರ್ನಾಟಕ ಪ್ರಾಂತದಲ್ಲಿ ಒಕ್ಕಲುತನವೇ ಮುಖ್ಯವಾಗಿರುವುದರಿಂದ ವೆಟರ್ನರಿ ಕಾಲೇಜ್‌ನ್ನು ತೆರೆಯುವುದು ಅವಶ್ಯವಾಗಿದೆ.

ಇನ್ನು ರಸ್ತೆಗಳ ವಿಷಯವಾಗಿ ಹೇಳುವುದಾದರೆ ಜಮಖಂಡಿಯ ಹತ್ತಿರ ಕೃಷ್ಣಾ ನದಿಗೆ ಪೂಲು(ಸೇತುವೆ) ಕಟ್ಟಿದಂತೆ, ಸಿಂಧಗಿ ತಾಲೂಕ ದೇವಣ ಗ್ರಾಮದ ಹತ್ತಿರ ಭೀಮಾ ನದಿಗೆ ಒಂದು ದೊಡ್ಡ ಪೂಲು ಕಟ್ಟಬೇಕು. ಒಕ್ಕಲಿಗರಿಗೆ ಹಳ್ಳಿಯಿಂದ ಹಳ್ಳಿಗೆ ಹೋಗಬೇಕಾದರೆ ರಸ್ತೆಯ ಅನುಕೂಲತೆ ಇಲ್ಲ. ಭಾರತದಲ್ಲಿ ಒಕ್ಕಲುತನವೇ ಮುಖ್ಯ ಉದ್ಯೋಗವಾಗಿದ್ದು ಹಳ್ಳಿಗಳ ಅಭಿವೃದ್ಧಿಯಾಗುವುದು ಸೂಕ್ತವಾಗಿದೆ. ಆದಕಾರಣ ಗ್ರಾಮಾಂತರ ಪ್ರದೇಶಗಳಲ್ಲಿ ರಸ್ತೆಗಳ ರಚನೆಗಾಗಿ ಹೆಚ್ಚು ಹಣ ಖರ್ಚುಮಾಡಬೇಕೆಂದು ಈಗ ನಾನು ಸೂಚಿಸುತ್ತೇನೆ. ರಾಷ್ಟ್ರೀಯ ವಿಸ್ತರಣ ಯೋಜನೆಯ ಪ್ರಕಾರ ಭಾರತ ಸರ್ಕಾರದವರು ನಮ್ಮ ಮೈಸೂರು ರಾಜ್ಯಕ್ಕೆ 20 ಹೊಸ ಬ್ಲಾಕುಗಳನ್ನು ಗೊತ್ತುಪಡಿಸಿದ್ದಾರೆ. ಹಿಂದುಳಿಗ ಭಾಗವಾಗಿರುವ ವಿಜಾಪೂರ ಜಿಲ್ಲೆಗೆ ಹೆಚ್ಚು ಬ್ಲಾಕು ಸಿಕ್ಕಬೇಕು. ಟೆನಸ್ಸಿ ಅರ್ಡಿನನ್ನು ಹೊರಡಿಸಿದ ಬಗ್ಗೆ ಅನೇಕ ವಿರೋಧ ಪಕ್ಷದ ಸದಸ್ಯರು ಟೀಕಿಸಿದರು. ಇದರಿಂದ ರೈತರಿಗೆ ಅನ್ಯಾಯ ಮಾಡಿದಂತಾಗಿದೆ ಎಂದು ಅವರು ಹೇಳಿದರು. ಆದರೆ ಇದು ನಿಜವಾದುದಲ್ಲ. ಹೊಸದಾಗಿ ಮೈಸೂರು ರಾಜ್ಯದಲ್ಲಿ ಸೇರ್ಪಡೆಯಾಗಿರುವ ಬೇರೆ

ಬೇರೆ ಭಾಗಗಳಲ್ಲಿ ಬೇರೆ ಬೇರೆ ರೀತಿಯ ಕಾನೂನು ಇರುವುದರಿಂದ ಎಲ್ಲ ಭಾಗಗಳಲ್ಲಿಯೂ ಒಂದೇ ರೀತಿಯ ಕಾಯಿದೆ ಜಾರಿಯಲ್ಲಿರಬೇಕೆಂಬ ಉದ್ದೇಶದಿಂದ ಈ ಆರ್ಡಿನನ್ಸನ್ನು ತರಲಾಗಿದೆ. ಇದು ಬಹಳ ಯೋಗ್ಯವಾಗಿದೆಯೆಂದು ಹೇಳಬಯಸುತ್ತೇನೆ.

ಮುಖ್ಯವಾಗಿ ಹಳ್ಳಿಗಳ ಅಭಿವೃದ್ಧಿ ಕಡೆಗೆ ಸರಕಾರದವರು ಹೆಚ್ಚು ಮನಸ್ಸು ಕೊಡಬೇಕೆಂದು ನಾನು ವಿನಂತಿ ಮಾಡಿಕೊಳ್ಳುತ್ತೇನೆ. ಈಗ ರಾಜ್ಯಪಾಲರ ಭಾಷಣದ ಬಗ್ಗೆ ವಂದನಾರ್ಪಣಾ ನಿರ್ಣಯವನ್ನು ಮಂಡಿಸಿದ ಶ್ರೀ ಹುಚ್ಚಮಾಸ್ತಿಗೌಡರನ್ನು ಅಭಿನಂದಿಸಿ ನನ್ನ ಮಾತನ್ನು ಮುಗಿಸುತ್ತೇನೆ.

## ಅರಣ್ಯ ಇಲಾಖೆಯ ಮೇಲಿನ ಚರ್ಚೆ

18ನೇ ಮಾರ್ಚ್ 1958

ಶ್ರೀ ಎಸ್.ವೈ.ಪಾಟೀಲ(ಸಿಂದಗಿ)– ಮಾನ್ಯ ಸಭಾಪತಿಗಳೇ ಅರಣ್ಯ ಇಲಾಖೆಯ ಮಂತ್ರಿಗಳು ತಂದಿರತಕ್ಕಂತ ಈ ಮಸೂದೆಗೆ ನಾನು ಹೃತ್ಪೂರ್ವಕವಾಗಿ ಅನುಮೋದನೆ ಕೊಡುತ್ತಿದ್ದೇನೆ. ಈ ಮಸೂದೆಯ ಮೇಲೆ ಭಾಷಣ ಮಾಡುವಾಗ ಆನಂದವಾಗುತ್ತದೆ. ಸಾಧಾರಣವಾಗಿ ಅರಣ್ಯ ಸಂಪತ್ತು ನಮ್ಮ ರಾಜ್ಯದ ಒಂದು ಮಹತ್ತರ ಸಂಪತ್ತು. ಜನತೆಯ ಸ್ವಾರ್ಥದ ಮೂಲಕ ಆಗುತ್ತಿದ್ದ ಒಂದು ತರದ ಲುಕ್ಸಾನನ್ನು ತಪ್ಪಿಸಲು ಈ ಕಾಯಿದೆಯನ್ನು ತಂದಿರುವುದು ನನಗೆ ಬಹಳ ಆನಂದವನ್ನುಂಟುಮಾಡಿದೆ.

ಪ್ರಜಾಪ್ರಭುತ್ವದ ಬಾಲ್ಯಾವಸ್ಥೆಯಲ್ಲಿ ಸಾರ್ವಜನಿಕರು, ಸರ್ವೇಸಾಧಾರಣವಾಗಿ ಹಳ್ಳಿಯ ಜನರು ಎರಡು ಜನರೂ ಸಹ ಕಾಯಿದೆಯ ಕಟ್ಟಳೆಗೆ ಸಿಕ್ಕದೆ ಯಾವ ಪ್ರಕಾರ ಸ್ವಾರ್ಥ ಸಾಧಿಸಿಕೊಳ್ಳಬೇಕೆಂಬ ಪ್ರಯತ್ನ ನಡೆಸಿದ್ದಾರೆಂಬುದನ್ನು ಅನಿವಾರ್ಯವಾಗಿ ಪ್ರಾಮಾಣಿಕತೆಯಿಂದ ಒಪ್ಪಿಕೊಳ್ಳಬೇಕಾಗುತ್ತದೆ. ಸರ್ಕಾರಕ್ಕೆ ಸಹಾಯ ಮಾಡುವುದು ತನ್ನ ಕರ್ತವ್ಯವೆಂದು ತಿಳಿಯದೇ ಸರ್ಕಾರಕ್ಕೆ ಜನತೆ ಒಂದು ರೀತಿಯಲ್ಲಿ ತೊಂದರೆ ಕೊಡತಕ್ಕದ್ದು ನೋಡಿದರೆ ಬಹಳ ದುಃಖವಾಗುತ್ತದೆ. ಆ ದೃಷ್ಟಿಯಿಂದ ಈ ಬಿಲ್ ಪಾಸಾದರೆ ಅರಣ್ಯ ಸಂಪತ್ತು ಹಾಳಾಗತಕ್ಕ ಒಂದು ಪರಿಸ್ಥಿತಿಯನ್ನು ಬಂದ್ ಮಾಡಲಿಕ್ಕೆ ಸಹಾಯವಾಗುತ್ತದೆನ್ನುವುದುನ್ನು ನೋಡಿ ನನಗೆ ಬಹಳ ಆನಂದವಾಗುತ್ತದೆ. ಮುಖ್ಯವಾಗಿ ಈ ಬಿಲ್ಲಿನ ಬಗ್ಗೆ ಒಂದು ಮಹತ್ತರವಾದ ಆನಂದದ ಸಂಗತಿಯೇನೆಂದರೆ ವಿರೋಧ ಪಕ್ಷದ ಸದಸ್ಯರು ತಾತ್ವಿಕ ದೃಷ್ಟಿಯಿಂದ ಇದಕ್ಕೆ ಅನುಮೋದನೆ ಕೊಡತಕ್ಕದ್ದನ್ನು ನೋಡಿ ನನಗೆ

ಬಹಳ ಆನಂದವಾಗುತ್ತದೆ. ಈ ದೃಷ್ಟಿಯಿಂದ ಈ ಕಾಯದೆ ಮಾನ್ಯ ಸದಸ್ಯರು ಎಷ್ಟೋ ಜನರು ಹೇಳಿದಂತೆ ಇದಕ್ಕೆ ಪೂರ್ವದಲ್ಲಿಯೇ ಬರಬೇಕಾಗಿತ್ತು. ತಡವಾದರೂ ಅಡ್ಡಿ ಇಲ್ಲ ನಮ್ಮ ರಾಷ್ಟ್ರದ ಅರಣ್ಯ ಸಂಪತ್ತನ್ನು ಉಳಿಸಲು ಸಹಾಯ ಮಾಡತಕ್ಕಂಥ ಈ ಬಿಲ್ಲನ್ನು ನಮ್ಮ ಮುಂದೆ ತಂದುದಕ್ಕಾಗಿ ಮಾನ್ಯ ಮಂತ್ರಿಗಳಿಗೆ ಅಭಿನಂದಿಸಿ ನನ್ನ ಮಾತನ್ನು ಮುದಿಸುತ್ತೇನೆ.

## ರಾಜ್ಯದಲ್ಲಿ ಕ್ಷಾಮ ನಿವಾರಣಾ ಬೋರ್ಡನ್ನು ರಚಿಸುವ ಕುರಿತು

20ನೇ ಮಾರ್ಚ್ 1958

ಶ್ರೀಎಸ್.ವೈ.ಪಾಟೀಲ(ಸಿಂದಗಿ)–ಮಾನ್ಯ ಸಭಾಪತಿಗಳೇ ಈಗ ಸಧ್ಯದಲ್ಲಿ ಈ ಮಾನ್ಯ ಸಭೆಯಲ್ಲಿ ಚರ್ಚೆ ನಡೆದಂಥ ವಿಷಯದ ಸಲುವಾಗಿ ನಾನು ನಮ್ಮ ಭಾಗದ ಪರಿಸ್ಥಿತಿಯ ಬಗ್ಗೆ ಈ ರೆವಿನ್ಯೂ ಇಲಾಖೆಗೆ ಸಂಬಂಧಿಸಿದ ಕೆಲವು ಮಾತುಗಳನ್ನು ಮತ್ತು ನಮ್ಮ ಅನುಭವಕ್ಕೆ ಬಂದ ಕೆಲವು ಮಾತುಗಳನ್ನು ಹೇಳುತ್ತಿದ್ದೇನೆ.

ಮುಖ್ಯವಾಗಿ ಈ ಮೈಸೂರು ರಾಜ್ಯದಲ್ಲಿ ಬೇರೆ ಬೇರೆ ಭಾಗಗಗಳಲ್ಲಿ ಭೂಸುಧಾರಣೆ ಮಾಡತಕ್ಕ ಪದ್ಧತಿ ಬೇರೆ ಬೇರೆ ರೀತಿಯಾಗಿದೆ. ಈಗ ಸುಮಾರು ಒಂದೂವರೆ ವರ್ಷ ಆಗುತ್ತಾ ಬಂತು ಆದಷ್ಟು ತೀವ್ರ ಈ ಕನ್ನಡ ರಾಜ್ಯದಲ್ಲಿ ಎಲ್ಲಾ ಕಡೆಯೂ ಒಂದೇ ತರದ ಭೂಸುಧಾರಣೆಯ ಪದ್ಧತಿ ಮತ್ತು ಸಾಲ ಪದ್ಧತಿ ಇರುವಂತೆ ಲ್ಯಾಂಡ್ ರೆವಿನ್ಯೂ ಕೋಡ್ ದುರಸ್ತಾಗಬೇಕೆಂಬುದು ಒಂದು. ಇನ್ನೊಂದು ತಲಾಠಿ ಸಿಸ್ಟಂನಲ್ಲಿ ಹಳೆಯ ಮೈಸೂರಿನಲ್ಲಿ ಹೇಗೋ ಗೊತ್ತಿಲ್ಲ. ಮುಂಬೈ ಕರ್ನಾಟಕದ ಭಾಗದಲ್ಲಿ ಐದು–ಐದು ಊರುಗಳಿಗೆ ಒಬ್ಬೊಬ್ಬರು ಇರುವುದರಿಂದ ರೈತನಿಗೆ ಬಹಳ ತೊಂದರೆಯಾಗಿದೆ. ಅದರ ಸಲುವಾಗಿ ಏನಾದರೂ ಒಂದು ವ್ಯವಸ್ಥೆ ಮಾಡಿ ರೈತರ ತೊಂದರೆ ನಿವಾರಣೆ ಮಾಡಬೇಕೆಂದು ಸೂಚನೆ ಮಾಡುತ್ತೇನೆ.

ಮತ್ತೊಂದು ನಮ್ಮ ಈ ದುಷ್ಕಾಲದ ಪರಿಸ್ಥಿತಿ ಸಲುವಾಗಿ ಹೇಳಬೇಕಾದರೆ ನಮ್ಮ ವಿಜಾಪೂರ ಜಿಲ್ಲೆ ಕ್ಷಾಮಕ್ಕೆ ಪ್ರಸಿದ್ಧವಾದುದು. ಮೇಲಿಂದ ಮೇಲೆ ಅಲ್ಲಿನ ಪರಿಸ್ಥಿತಿಯನ್ನು ಹೇಳುತ್ತಲೇ ಇದ್ದೇವೆ ಮತ್ತು ಸರ್ಕಾರದವರಿಗೂ ಅದು ಗೊತ್ತಿದ್ದ ಸಂಗತಿಯಾಗಿದೆ. ಮಲೆನಾಡಿನ ಸಲುವಾಗಿ ಒಂದು ಬೋರ್ಡ್ ಮಾಡಿದ್ದೀರಿ. ಅದೇ ಪ್ರಕಾರವಾಗಿ ಕ್ಷಾಮ ನಿವಾರಣಾ ಬೋರ್ಡ್ ಒಂದು ರಚನೆಮಾಡುವುದು

ಅತ್ಯವಶ್ಯಕವಾಗಿದೆ. ಹಳೆಯ ಮೈಸೂರು ಕಡೆ ಯಾವ ಯಾವ ಕಡೆ ಯಾವ ಯಾವ ಪರಿಸ್ಥಿತಿ ಇದೆ ಎಂಬುದು ನನಗೆ ಗೊತ್ತಿಲ್ಲ, ನಮ್ಮ ಸಂಪೂರ್ಣ ಬಿಜಾಪೂರ ಜಿಲ್ಲೆ, ಧಾರವಾಡ ಜಿಲ್ಲೆಯ ಕೆಲವು ಭಾಗ, ಬೆಳಗಾಂ ಜಿಲ್ಲೆಯ ಕೆಲವು ಭಾಗ, ಚಿತ್ರದುರ್ಗ ಮತ್ತು ಕೆಲವು ಸದಸ್ಯರು ಕೋಲಾರ ಜಿಲ್ಲೆಯ ಬಗ್ಗೆಯೂ ಕೂಡ ಹೋದಸಾರಿ ಮಾತನಾಡಿದರು. ಇಲ್ಲೆಲ್ಲಾ ಕ್ಷಾಮದಿಂದಾಗಿ ತೊಂದರೆಯಾಗುತ್ತದೆ. ಕ್ಷಾಮಾ ನಿವಾರಣೆಗೆ ತಾತ್ಪೂರ್ತಿಕವಾಗಿ ಖರ್ಚು ಮಾಡುವುದಕ್ಕಿಂತಲೂ ಈಗಾಗಲೇ ರಾಮಮೂರ್ತಿ ಸಮಿತಿಯ ವರದಿ ಬಂದಿದೆ ಅದರ ಶಿಫಾರಸ್ಸಿನಂತೆ ಕ್ರಮತೆಗೆದುಕೊಳ್ಳಬಹುದು. ಅದರ ಸಲುವಾಗಿ ಒಂದು ಕ್ಷಾಮ ನಿವಾರಣ ಬೋರ್ಡ್‌ನ್ನು ಸ್ಟೇಟ್ ಲೇವಲ್‌ನಲ್ಲಿ ಮಾಡಿ ಕಾರ್ಯಕ್ರಮ ಕೈಕೊಂಡು ಈ ಸಮಸ್ಯೆಯನ್ನು ಬಗೆಹರಿಸಬೇಕು. ದುಷ್ಕಾಳದ ಸಲುವಾಗಿ ಮಾನ್ಯ ರೆವಿನ್ಯೂ ಮಿನಿಸ್ಟರ್‌ಗೆ ಅನುಭವ ಇದೆ. ಅಸೆಂಬ್ಲಿಯಲ್ಲಿ ನಾವು ಎಷ್ಟೋ ರೊಕ್ಕ ಖರ್ಚು ಮಾಡಲು ಮಾನ್ಯತೆ ಕೊಡುತ್ತೇವೆ. ಈಗ ಕನ್ನಡ ಪ್ರಾಂತ ಪಡೆದಿದ್ದೇವೆ. ಆದರೂ ಬ್ರಿಟಿಷರ ಕಾಲದ ಪರಿಸ್ಥಿತಿಯೂ ಈಗಲೂ ಇರುವುದನ್ನು ನೋಡಿದರೆ ವ್ಯಸನವಾಗುತ್ತದೆ. ಆದ್ದರಿಂದ ಈ ಬಗ್ಗೆ ಸರ್ಕಾರದವರು ತೀವ್ರ ಕಾರ್ಯಕ್ರಮ ತೆಗೆದುಕೊಳ್ಳಬೇಕು.

ಇನ್ನೊಂದು ವಿಷಯ ಎಂದರೆ ನೀರಾವರಿ ಯೋಜನೆಯ ಸಲುವಾಗಿ ಬಿಜಾಪೂರ ಜಿಲ್ಲೆಯೊಳಗೆ ಏನೂ ಅನುಕೂಲವಾಗಿಲ್ಲ ಎಂದು ಪದೇ ಪದೇ ಹೇಳುತ್ತಲೇ ಇದ್ದೇನೆ. ಡೋಣಿ ಸ್ಕಿಂ ಇನ್‌ವೆಸ್ಟಿಗೇಷ್‌ನ ನಡೆದಿದೆ ಎಂದು ಹೇಳುತ್ತೀರಿ. ಈ ವರ್ಷದ ಅಖೈರಿನೊಳಗೆ ಇನ್‌ವೆಸ್ಟಿಗೇಷನ್ ಮುಗಿಸಲೇ ಬೇಕು. ಅದರ ಸಲುವಾಗಿ ಸ್ಪೇಷಲ್ ಇಂಜಿನಿಯರರನ್ನು ಕಳುಹಿಸಿ ಇನ್‌ವೆಸ್ಟಿಗೇಷ್‌ನ ಮಾಡಿಸಿ ತೀವ್ರ ಕೆಲಸ ಮಾಡುವಂತೆ ಏರ್ಪಾಡು ಮಾಡಬೇಕೆಂದು ಹೇಳುತ್ತೇನೆ. ಬಿಜಾಪೂರ ಜಿಲ್ಲೆಗೆ ದೊಡ್ಡ ದೊಡ್ಡ ನೀರಾವರಿ ಯೋಜನೆಗಳಿಂದ ಅಷ್ಟು ಪ್ರಯೋಜನವಾಗುವುದಿಲ್ಲ. ಬಾವಿ ಸ್ಕಿಂನಿಂದ ಅನುಕೂಲವಿದೆ. ಸಾಧಾರಣ ರೈತನಿಗೆ ರೈತನಿಗೆ ಬಾವಿ ಎಲ್ಲಿ ಹೊಡೆಯಬೇಕೆಂಬುದು ಗೊತ್ತಿರುವುದಿಲ್ಲ. ಅನುಭವದ ಕೊರತೆಯಿಂದ ಎಲ್ಲೋ ಬಾವಿ ಹೊಡೆದು ಹಣ ಹಾಳು ಮಾಡಿಕೊಳ್ಳುತ್ತಾನೆ. ಸರ್ಕಾರದವರು ಇದರ ಸಲುವಾಗಿ ಬಂಡ್ ಸ್ಕಿಂ ಏನಿದೆ ಅದೇ ರೀತಿ ಬಿಜಾಪೂರ ಜಿಲ್ಲೆಯೊಳಗೆ ಯಾವ ಯಾವ ಭಾಗದಲ್ಲಿ ನೀರಾವರಿ ಬಾವಿ ತೆಗೆಸುವುದು ಎಂಬುದನ್ನು ಶೋಧನೆ ಮಾಡಿ ಪರಿಣಿತರನ್ನು ಕಳುಹಿಸಿಕೊಟ್ಟು ರೈತರಿಗೆ ಸಹಾಯ ಮಾಡಬೇಕೆಂದು ಹೇಳುತ್ತೇನೆ. ಬಾವಿಗೆ ಸಾಲ ಕೊಡುತ್ತೀರಿ. ಆ 500–600 ರೂಪಾಯಿ ಸಾಲ ಪಡೆಯಬೇಕಾದರೆ ಆರು ತಿಂಗಳ ಗಟಟಲೆ ಕಾಲ ಹಿಡಿಯುತ್ತದೆ.

ತಲಾಠಿಗೆ ಹತ್ತಾರು ಸಾರಿ ನಮಸ್ಕಾರ ಮಾಡಬೇಕು. ಸಿಕ್ಕ ಸಿಕ್ಕವರ ಕೈ ಹಿಡಿಯಬೇಕು. ಇಂಥಾ ಪರಿಸ್ಥಿತಿ ಇದೆ. ರೈತರ ಕಲ್ಯಾಣವೇ ನಮ್ಮ ಮುಖ್ಯ ಉದ್ದೇಶ ಎಂದು ನಾವು ಯಾವಾಗಲೂ ಈ ಸಭೆಯಲ್ಲಿ ಹೇಳುತ್ತಾ ಇದ್ದೇವೆ. ಹಾಗಿರುವಾಗ ಎಷ್ಟು ತೀವ್ರವಾಗಿ ರೈತರಿಗೆ ಸಾಲ ಸಿಕ್ಕಬೇಕೋ ಅಷ್ಟು ತೀವ್ರವಾಗಿ ದೊರಕಿಸಿಕೊಡಲು ಕಾರ್ಯಕ್ರಮ ಹಾಕಿಕೊಳ್ಳಬೇಕು. ಮತ್ತು ಬಾವಿತೆಗೆಯಲಿಕ್ಕೆ ತಕ್ಕಷ್ಟು ಹಣ ತೀವ್ರ ಒದಗಿಸಿ ಕೊಡಬೇಕೆಂದು ಹೇಳುತ್ತೇನೆ.

ಇನ್ನೊಂದು ವಿಷಯ ಏನೆಂದರೆ ಗ್ರಾಮಠಾಣ ವಿಷಯ. ನಮ್ಮ ಭಾಗದಲ್ಲಿ ಪ್ರತಿಯೊಂದು ಊರಿನಲ್ಲಿ ಜನಸಂಖ್ಯೆಯೂ ಮಿತಿ ಮೀರಿ ಬೆಳೆದಿದೆ. ಆ ಜನರು ಅನ್ನ ನೀರು ಇಲ್ಲದೇ ಕಷ್ಟಪಡುತ್ತಿರುವುದರ ಜೊತೆಗೆ ಸ್ಥಳಾಭಾವ ಕೂಡ ಹೆಚ್ಚಾಗಿದೆ. ಇದರ ಸಲುವಾಗಿ ಒಬ್ಬ ಪ್ರತ್ಯೇಕ ಆಫೀಸರನ್ನು ಹಾಕಿದರೂ ಅಡ್ಡಿ ಇಲ್ಲ. ಅಲ್ಲಿನ ಜನರು ಒತ್ತಾಯ ಮಾಡಲಿ ಮಾಡದಿರಲಿ ಜನರಿಗೆ ಯಾವ ರೀತಿ ಸ್ಥಳಾವಕಾಶ ಮಾಡಿಕೊಡಬೇಕೆಂಬುದನ್ನು ನಿರ್ಧಾರ ಮಾಡಬೇಕು. ಪ್ರತಿಯೊಂದು ಊರಿನ ಸುತ್ತಲೂ ಶ್ರೀಮಂತರ ಜಮೀನು ಬೇಕಾದಷ್ಟು ಇರುತ್ತದೆ. ಅವರು ಅಕ್ವಿಷಿಪ್ ನಡೆಸುವುದಕ್ಕೆ ಅಡಚಣೆ ತಂದೊಡ್ಡುತ್ತಾರೆ. ಆದ್ದರಿಂದ ಗ್ರಾಮಠಾಣ ಹೆಚ್ಚಿಸುವುದಕ್ಕೆ ಯಾರ ಅರ್ಜಿಯನ್ನು ತೆಗೆದುಕೊಳ್ಳದೇ ಎಷ್ಟು ಜನರಿದ್ದಾರೆ ಎಷ್ಟು ಜಾಗ ಇದೆ ಎಂಬುದನ್ನು ನೋಡಿಕೊಂಡು ತಕ್ಕ ವ್ಯವಸ್ಥೆ ಮಾಡಬೇಕು. ಇನ್ನು ಮುಂದೆ 10–20 ವರ್ಷದಲ್ಲಿ ಎಷ್ಟು ಜನರನ್ನು ಹಡೆಯಬಹುದು ಎಂಬ ಕಲ್ಪನೆಯನ್ನು ಮಾಡಿಕೊಂಡು ಈ ಗ್ರಾಮಠಾಣ ಸಮಸ್ಯೆ ಬಿಡಿಸಬೇಕೆಂದು ಹೇಳುತ್ತೇನೆ.

ತಹಶೀಲದಾರರಿಗೆ ವಿಶೇಷ ಕೆಲಸವಿದೆ. ಆದ್ದರಿಂದ ಅವರಿಗೆ ಒಂದು ಜೀಪು ಕಾರು ಕೊಟ್ಟು ಪ್ರತಿಯೊಂದು ತಾಲೂಕಿನಲ್ಲಿಯೂ ಅವರಿಂದ ಆಗಬೇಕಾದ ಕೆಲಸವನ್ನು ತೀವ್ರವಾಗಿ ಮಾಡಿಸುವಂತೆ ಏರ್ಪಾಡು ಮಾಡಬೇಕೆಂದು ಹೇಳುತ್ತೇನೆ.

ಮುಖ್ಯವಾದ ಇನ್ನೊಂದು ವಿಚಾರ ಏನೆಂದರೆ ಬಿಜಾಪೂರ ಜಿಲ್ಲೆ ಇಡೀ ರಾಜ್ಯದಲ್ಲೇ ಒಂದು ದುಷ್ಕಾಳವಿರತಕ್ಕಂತ ಜಿಲ್ಲೆ ಆಗಿದೆ. ಈ ವಿಚಾರ ಮಾನ್ಯ ರೆವಿನ್ಯೂ ಮಂತ್ರಿಗಳಾದ ಶ್ರೀ ಎಂ.ಪಿ.ಪಾಟೀಲರಿಗೆ ಚೆನ್ನಾಗಿ ಗೊತ್ತಿದೆ. ಅಲ್ಲಿಯ ಜನರು ಬಹಳ ತೊಂದರೆಗೊಳಗಾಗಿದ್ದಾರೆ. ಆದರೆ ಆ ಜಿಲ್ಲೆಯಲ್ಲಿ ವ್ಯವಸಾಯಕ್ಕೆ ಯೋಗ್ಯವಾದಂಥ ಉತ್ತಮ ಭೂಮಿ ವಿಶೇಷವಾಗಿದೆ. ಆ ಜಿಲ್ಲೆಗೆ ಸೇರಿರತಕ್ಕ ಬಾಗೇವಾಡಿ ಪ್ರದೇಶ ಒಂದಕ್ಕೆ ಸ್ವಲ್ಪ ಅನುಕೂಲ ಮಾಡಿಕೊಟ್ಟರೆ ಇಡೀ ಮೈಸೂರು ದೇಶಕ್ಕೆಲ್ಲ ಸಾಕಾಗುವಷ್ಟು ಗೋಧಿ ಬೆಳೆಯನ್ನು ಕೊಡತಕ್ಕಂತ ಪರಿಸ್ಥಿತಿ ಅಲ್ಲಿದೆ. ಅಲ್ಲಿ ಅಂಥ ಉತ್ತಮ ಭೂಮಿ ಇದೆ. ಡೋಣಿ ನದಿ ಮತ್ತು ನಾನಾಗಲೇ

ಹೇಳಿದ ನದಿಗೆ ಅಡ್ಡಗಟ್ಟಿ ಹಾಕಲು ಕೂಡಲೇ ಪ್ರಯತ್ನ ಮಾಡಬೇಕು. ಈ ಕಾರ್ಯಗಳೆಲ್ಲ ಹಿಂದೆ ಇದ್ದ ಬ್ರಿಟಿಷರ ಕಾಲದಲ್ಲಿ ಆದಂತೆ ಆಗಬಾರದು. ಈ ದಿವಸ ನಮ್ಮ ಪ್ರಜಾ ಸರ್ಕಾರ ಅನೇಕ ಇಂಥ ಸ್ತುತ್ಯಕಾರ್ಯಗಳನ್ನು ಮಾಡಿದೆ. ಮಾನ್ಯ ರೆವ್ಹನ್ಯೂ ಮಂತ್ರಿಗಳಾದ ಶ್ರೀ ಎಂ.ಪಿ.ಪಾಟೀಲ್‌ರವರು ಈ ವಿಚಾರಗಳಲ್ಲಿ ಬಹಳ ಮೆಹನತ್ತಯಿಂದ ಕೆಲಸ ಮಾಡಿದ್ದಾರೆ. ಇದಕ್ಕಾಗಿ ಅವರನ್ನು ಎಷ್ಟು ವಂದಿಸಿದರೂ ಕಡಿಮೆಯೇ ಅದೆ. ಈ ರೀತಿ ಏನಾದರೂ ಕೆಲವು ಪ್ರಯತ್ನಗಳನ್ನು ಬಿಜಾಪೂರ ಜಿಲ್ಲೆಯಲ್ಲಿ ಕೈಕೊಂಡು ಅಲ್ಲಿಯ ಕ್ಷಾಮ ಪರಿಸ್ಥಿತಿಯನ್ನು ತಡೆಗಟ್ಟಲು ಸರ್ವ ಪ್ರಯತ್ನಗಳು ನಡೆಯಬೇಕೆಂದು ಸರ್ಕಾರದವರಲ್ಲಿ ಬಹಳ ನಮ್ರತೆಯಿಂದ ಪ್ರಾರ್ಥನೆ ಮಾಡಿಕೊಂಡು ನನ್ನ ಮಾತುಗಳನ್ನು ಮುಗಿಸುತ್ತೇನೆ.

## ಹರಿಜನರ ಶಿಕ್ಷಣದ ಕುರಿತು

1ನೇ ಮೇ 1958

ಶ್ರೀ ಎಸ್.ವೈ.ಪಾಟೀಲ (ಸಿಂದಗಿ)– ಮಾನ್ಯ ಸಭಾಪತಿಗಳೇ, ಈಗ ಮಾನ್ಯ ಸಭಾಗೃಹದ ಮುಂದೆ ಇರುವ ಈ ಠರಾವನ್ನು ನಾನು ಅನುಮೋದಿಸುತ್ತೇನೆ. ಸಾಮಾನ್ಯವಾಗಿ ಮಾನ್ಯ ಮರಿಯಪ್ಪನವರು ಇಡೀ ಭಾರತ ದೇಶದ ಪರಿಸ್ಥಿತಿಯನ್ನು ನನಗೆ ತಿಳಿಸಿ ನಮ್ಮ ಮನಸ್ಸಿನ ಮೇಲೆ ಒಂದು ತರದ ಪರಿಣಾವನ್ನುಂಟು ಮಾಡಿದರೂ ಸಹ ಹಳ್ಳಿಯಲ್ಲಿರತಕ್ಕ ನಾವು ಅಲ್ಲಿ ಪರಿಸ್ಥಿತಿ ಏನಿದೆ ಎನ್ನವುದು ವಿಚಾರ ಮಾಡಿದ್ದೇ ಆದರೆ ಅದರ ವಿಷಯದಲ್ಲಿ ಬೇಕಾದಷ್ಟು ಮಾಡಬೇಕೆಂದು ಪ್ರಾಂಕಿಕತೆಯಿಂದ ಹೇಳಬೇಕಾಗುತ್ತದೆ. ಮಹಾತ್ಮ ಗಾಂಧೀಜಿಯವರ ಅವತಾರದಿಂದ, ಕಾಂಗ್ರೆಸ್ ಸಂಸ್ಥೆಯ ಪ್ರಯತ್ನದಿಂದ, ಈಗಿನ ಸರ್ಕಾರದ ಪ್ರಯತ್ನದಿಂದ ಮತ್ತು ಡಾ.ಅಂಬೇಡ್ಕರ್‌ರವರಂಥ ಎಷ್ಟೋ ಮಂದಿ ಸುಧಾರಕರ ಪ್ರಯತ್ನಿದಿಂದ ಹರಿಜನರ ಸಂರಕ್ಷಣೆಯಾಗಿದ್ದರೂ ಸಹ ನಿಜವಾಗಿ ವಿಚಾರ ಮಾಡಿದ್ದೇ ಆದರೆ ಷೆಡ್ಯೂಲ್ಡ್ ಟ್ರೈಬ್ಸ್ ಮತ್ತು ಹಿಂದುಳಿದ ವರ್ಗದವರು ಎನ್ನುವವರ ಪರಿಸ್ಥಿತಿ ಬಹಳ ಶೋಚನೀಯವಾಗಿದೆ. ಮುಖ್ಯವಾಗಿ ಈ ಹಿಂದುಳಿದ ವರ್ಗದವರ ಸಲುವಾಗಿ ರಾಜ್ಯ ಸರ್ಕಾರಗಳು ಮತ್ತು ಭಾರತ ಸರ್ಕಾರದವರು ಎಷ್ಟೇ ಪ್ರಯತ್ನ ಮಾಡುತ್ತಿದ್ದರೂ ಸಹ ಇಲ್ಲಿಯವರೆಗೆ ಅವರಿಗೆ ಸರಿಯಾದ ಶಿಕ್ಷಣ ಸಿಕ್ಕುತ್ತಿಲ್ಲ. ಹಿಂದುಳಿದವರು ಎಲ್ಲರೂ ಎಲ್ಲಿಯವರೆಗೆ ಶಿಕ್ಷಣವಂತರಾಗುವುದಿಲ್ಲವೋ ಅಲ್ಲಿಯವರೆಗೆ ಸರ್ಕಾರ ಯಾವುದೇ ತರದ ಕಾಯಿದೆಯನ್ನು ಮಾಡಲಿ ಅದರಿಂದ ಅವರ ಅಭಿವೃದ್ಧಿಯಾಗುವುದಿಲ್ಲ. ಅನ್ಯಾಯವಾಗುವುದು ತಪ್ಪುವುದಿಲ್ಲ. ಅನ್ಯಾಯ

ಮಾಡಿಸಿಕೊಳ್ಳುವವರು ಇರುವವರೆಗೂ ಅನ್ಯಾಯ ಮಾಡುವವರಿಗೆ ಅದನ್ನು ಬಿಡುವುದು ಶಕ್ಯವಿಲ್ಲ. ಆದುದರಿಂದ ಹಿಂದುಳಿದ ವರ್ಗದವರ ಪರಿಸ್ಥಿತಿ ಶೋಚನೀಯವಾಗಿದೆ. ನಮ್ಮ ಕಡೆ ಹರಿಜನರು ಗುಡ್ಡುಗಾಡು ಹರಿಜನರಾಗಿದ್ದಾರೆ. ಉತ್ತರ ಕರ್ನಾಟಕದಲ್ಲಿ ಹೊಲೆಯರ ಸಂಖ್ಯೆ ಅಲ್ಪ. ಡೋರರು ಮತ್ತು ಮಾದಿಗರೇ ಬಹುಜನರು. ಮುಖ್ಯವಾಗಿ ಅವರು ಸುಶಿಕ್ಷಿತರಾಗುವುದರ ಸಲುವಾಗಿ ರಾಜ್ಯ ಸರ್ಕಾರದವರು ಹೆಚ್ಚಾಗಿ ಹಣ ಖರ್ಚು ಮಾಡಬೇಕು. ಮನೆ ಕಟ್ಟಿಸಿ ಕೊಳ್ಳುವುದಕ್ಕೆ ಅವರಿಗೆ 300 ರೂಪಾಯಿ ಸಬ್ಸಿಡಿಕೊಡುವುದು ಸರಿಯಲ್ಲ. ಅವರ ವಿದ್ಯಾಭ್ಯಾಸಕ್ಕೆ ಹೆಚ್ಚು ಗಮನ ಕೊಡಬೇಕೆಂದು ಒಬ್ಬರು ಸದಸ್ಯರು ಹೇಳಿದರು. ಸುಶಿಕ್ಷಿತರಾಗಿ ಅವರ ಕಲ್ಯಾಣವಾಗಬೇಕು. ಅವರಿಗೆ ಇತರ ಸೌಲಭ್ಯಗಳನ್ನೂ ಕಲ್ಪಸಿಕೊಡಬೇಕು. ಶ್ರೀ ಮಲ್ಲಾರಾಧ್ಯರು ಸಮಾಜಕ್ಕೆ ಪ್ರತಿಕಾರ ಮಾಡುವುದಕ್ಕೆ ಸತ್ಯಾಗ್ರಹ ಮಾಡಬೇಕೆಂದರು. ಆದರೆ ಇಂಥ ಕ್ರಮಗಳಿಂದ ಮತ್ತು ಕಾಯಿದೆಯಿಂದ ಸಮಾಜದ ಸಂರಕ್ಷಣೆಯಾಗುವುದಿಲ್ಲ. ಹಿಂದುಳಿದವರ ಬಡತನ, ಅವಿದ್ಯೆ ಹೋಗಿ ಅವರಿಗೆ ಧೈರ್ಯ ಬರುವುದಿಲ್ಲ. ಸಮಾಜದಲ್ಲಿ ಸಮಾರ್ಥ್ಯ ಬರುವುದಿಲ್ಲ. ಹಳೆಯ ಮೈಸೂರಿನಲ್ಲಿ ಸಾಧಾರಣವಾಗಿ ಈ ವರ್ಗಕ್ಕೆಸೇರಿದವರಲ್ಲಿ ಪದವಿಧರರಿದ್ದಾರೆ. ಮುಂಬಾಯಿ ಕರ್ನಾಟಕದಲ್ಲಿ ನೋಡಿದರೆ ಅದರಲ್ಲೂ ಬಿಜಾಪೂರ ಜಿಲ್ಲೆಯಲ್ಲಿ ಒಬ್ಬ ಹರಿಜನ ಲಾ ಗ್ರಾಜುಯೇಟನ್ನು ನಾ ಕಂಡಿಲ್ಲ. ಒಬ್ಬ ಡಾಕ್ಟರರನ್ನು ಕಂಡಿಲ್ಲ. ಆ ದೃಷ್ಟಿಯಿಂದ ನೋಡಿದರೆ ಸರ್ಕಾರದವರು ದೇವಾಲಯ ಪ್ರವೇಶ ಮಾಡತಕ್ಕ ಕಾನೂನನ್ನು ಮಾಡಿರುವುದರಿಂದ ಅಷ್ಟು ಪ್ರಯೋಜನವಾಗುವುದಿಲ್ಲ. ಹಿಂದುಳಿದವರು ಸುಶಿಕ್ಷಿತರಾದರೆಯೇ ಅವರಿಗೆ ನ್ಯಾಯ ದೊರಕುತ್ತದೆ. ಇವತ್ತಿನ ದಿವಸ ಹಳೆಯ ಮೈಸೂರು ಮತ್ತು ಹೊಸ ಮೈಸೂರಿನಲ್ಲಿ ಹಿಂದುಳಿದವರ ಪ್ರಗತಿಯನ್ನು ತಾರತಮ್ಯ ದೃಷ್ಟಿಯಿಂದ ನೋಡಿದರೆ, ರಾಜ್ಯ ಸರ್ಕಾರದವರು ಶಿಕ್ಷಣದ ಸಲುವಾಗಿ ಹೊರಗಡೆಯಿಂದ ಬಂದ ಪ್ರದೇಶಗಳಿಗೆ ಹೆಚ್ಚು ಖರ್ಚು ಮಾಡಬೇಕಾಗುತ್ತದೆ. ಸ್ಕಾಲರ್‌ಶಿಪ್ ವಸತಿ ಸೌಕರ್ಯದ ಸಲುವಾಗಿ, ಶಿಕ್ಷಣದ ಸಲುವಾಗಿ ಸಂರಕ್ಷಣೆ ಕೊಡುವ ಅವಶ್ಯಕತೆಯಿದೆ. ಹರಿಜನರ ಸಲುವಾಗಿ ಎಷ್ಟೋ ಸುಧಾರಣೆಗಳನ್ನು ಮಾಡಬೇಕೆಂದು ಸರ್ಕಾರದವರು ಸದುದ್ದೇಶದಿಂದ ಆಜ್ಞೆಗಳನ್ನು ಮಾಡಿ ಕಳುಹಿಸಿದ್ದರೂ ಸಹ ಅವು ಜಾರಿಗೆ ಬರಲು ಸಾಧ್ಯವಾಗಿಲ್ಲ. ಮಹಾತ್ಮ ಗಾಂಧೀಜಿಯವರ ಆಶೀರ್ವಾದದಿಂದ ಅವರ ಬೋಧನೆಯಿಂದ ಎಷ್ಟೋ ಮುಂದುವರೆಯಬೇಕೆಂದಿದ್ದರೂ ದುರ್ದೈವದಿಂದ ಹಳೆಯ ವಿಚಾರಗಳು ನಮ್ಮ ರೋಮರೋಮಗಳಲ್ಲಿ ತುಂಬಿರುತ್ತವೆ. ಈ ದೃಷ್ಟಿಯಿಂದ ಬಸವಣ್ಣನವರು ಮನುಷ್ಯನ ಅಜ್ಞಾನವನ್ನು ಹೋಗಲಾಡಿಸುವುದಕ್ಕೆ ಬಹಳ ಪ್ರಯತ್ನ ಮಾಡಿದರು. ಎಷ್ಟೇ ಪ್ರಯತ್ನ ಮಾಡಿದರೂ ಕೆಲವು ಕಾಲಾನಂತರ

ಈಗಿರುವ ಸನ್ನಿವೇಶ ಬಂದಿತು. ಈ ಹರಿಜನರ ಸಮಸ್ಯೆಯನ್ನು ಬಿಡಿಸಬೇಕಾದರೆ ಅವರ ಶಿಕ್ಷಣದ ಸಲುವಾಗಿ ಬಡತನವನ್ನು ಹೋಗಲಾಡಿಸಿ ಅವರ ಆರ್ಥಿಕಮಟ್ಟವನ್ನು ಮೇಲಕ್ಕೆ ತರುವ ಸಲುವಾಗಿ ಹೆಚ್ಚು ಹಣವನ್ನು ಖರ್ಚುಮಾಡಬೇಕು. ಹಿಂದುಳಿದ ವರ್ಗದವರಲ್ಲಿ ಗುಡ್ಡಗಾಡು ಜನರ ಹೀನಸ್ಥಿತಿ ನೋಡಿದರೆ ಅತ್ಯಂತ ದುಃಖವಾಗುತ್ತದೆ. ಅಜ್ಞಾನದಲ್ಲಿ ತುಂಬಿದ್ದಾರೆ. ಇವರ ಬಂಧವಿಮೋಚನೆಯಾಗಿ, ಸಮಾಜ ಕಲ್ಯಾಣವಾಗಬೇಕಾದರೆ ಅವರಿಗೆ ಜ್ಞಾನ ಬರಬೇಕು; ಅವರಿಗೆ ಶಿಕ್ಷಣ ದೊರೆಯಬೇಕು. ಹೊಲೆಯರು, ಮಾದಿಗರು ಇವರುಗಳಲ್ಲೇ ಒಳ ಪಂಗಡಗಳಿವೆ. ಅವರು ಸುಶಿಕ್ಷಿತರಾದರೆ ಈ ಒಳಪಂಗಡಗಳು ಹೋಗಬಲ್ಲವು. ಸರ್ಕಾರ ಯಾವ ಬಾಬಿಗೆ ಖರ್ಚು ಮಾಡಲಿ, ಹರಿಜನರ ಶಿಕ್ಷಣದ ಸಲುವಾಗಿ ಎಷ್ಟು ಖರ್ಚು ಮಾಡಿದರೂ ಅಷ್ಟೂ ಒಳ್ಳೆಯದು. ಹಣಕಾಸು ಮಂತ್ರಿಯವರು ಇವರ ಶಿಕ್ಷಣದ ಸಲುವಾಗಿ ಬಡ್ಜೆಟಿನಲ್ಲಿ ಹೆಚ್ಚಿಗೆ ಹಣ ಇಡಬೇಕು. ಹರಿಜನರ ಶಿಕ್ಷಣಕ್ಕೆ ಹೆಚ್ಚಿಗೆ ಹಣವನ್ನು ಒದಗಿಸಿ ಕೊಡಬೇಕೆಂದು ಇನ್ನೊಮ್ಮೆ ಪ್ರಾರ್ಥಿಸಿ ನನ್ನ ಭಾಷಣವನ್ನು ಮುಗಿಸುತ್ತೇನೆ.

## ಶರಾವತಿ ಯೋಜನೆಯ ಕುರಿತು

25ನೇ ನವೆಂಬರ್ 1958

ಶ್ರೀ ಎಸ್.ವೈ.ಪಾಟೀಲ (ಸಿಂದಗಿ) – ಸಭಾಧ್ಯಕ್ಷರೇ, ಮಾನ್ಯ ಸಭೆಯಲ್ಲಿ ಚರ್ಚಿಸಲ್ಪಡುತ್ತಿರುವ ಈ ಠರಾವಿನ ವಿಷಯವಾಗಿ ನನ್ನ ಕೆಲವು ಮಾತುಗಳನ್ನು ವ್ಯಕ್ತಪಡಿಸುತ್ತಾ ಇದ್ದೇನೆ. ಸಾಧಾರಣವಾಗಿ ಇಲ್ಲಿಯವರೆಗೂ ಮಾತನಾಡಿದಂಥ ಮಾನ್ಯ ಸದಸ್ಯರ ವಿಚಾರ ಸರಣಿಯನ್ನು ಕೇಳಿದ್ದರಲ್ಲಿ ಈ ವಿಷಯವಾಗಿ ಆತುರತೆ ಇದೆ. ಅದರಿಂದ ನಮ್ಮ ಮೈಸೂರು ರಾಜದ ಅಭಿವೃದ್ಧಿಗೆ ಸಹಕಾರಿಯಾಗಿದೆ ಎಂಬುದನ್ನು ಹೇಳಬೇಕಾದ ಅಗತ್ಯವಿಲ್ಲ. ಆದರೆ ಒಂದು ಮಾತು ಹಿಂದೂಸ್ತಾನ ಸರ್ಕಾರದವರು ಅಲಕ್ಷಿಸಿದ್ದಾರೆ ಎಂದು ಕೆಲವು ಮಾನ್ಯ ಸದಸ್ಯರು ಹೇಳಿದ್ದಾರೆ. ಇದು ಅಷ್ಟು ಸರಿಕಾಣುತ್ತಾ ಇಲ್ಲ. ಏಕೆಂದರೆ ಹಿಂದೂಸ್ತಾನ ಸರಕಾರದವರು ಇದರ ಸಲುವಾಗಿ ಬೇಕಾದಷ್ಟು ಹಣ ಕೊಡಲಿಕ್ಕೆ ತಯಾರಾಗಿದ್ದಾರೆ. ಎಂಬ ಮಾತನ್ನು ಹೇಳುತ್ತಾ ಇದ್ದೇವೆ. ಈಗಾಗಲೇ ಸಾಕಾದಷ್ಟು ಸಹಾಯ ಮಾಡಿದ್ದಾರೆ. ಮತ್ತು ಹಂಗೇರಿಯಿಂದ ಕೆಲವು ಸಾಮಾನುಗಳನ್ನು ಎಕ್ಸಿಪ್‌ಮೆಂಟನ್ನು ತರಿಸಲು ಆರ್ಡರ್ ಕೊಟ್ಟಿದ್ದಾರೆ ಎಂದು ಕೇಳಿದ್ದೇನೆ. ಎರಡನೆಯ ಪಂಚವಾರ್ಷಿಕ ಯೋಜನೆಯಲ್ಲಿ ಇದನ್ನು ಕೂಡಿಸಬೇಕಾದರೆ ಇನ್ನೂ ಎರಡನೇ ಪಂಚವಾರ್ಷಿಕ ಯೋಜನೆಯ ಅವಧಿಯಾದರೂ ಎಷ್ಟಿದೆ. ಎರಡು–ಎರಡುವರೆ ವರ್ಷ ಇದೆ. ಅಷ್ಟು ಹಣವನ್ನು ಹಿಂದೂಸ್ತಾನ ಸರಕಾರದವರು ಸಹಾಯ ಮಾಡಲು ಸಹಿತ

ಇದನ್ನು ಪೂರ್ಣ ಮಾಡುವುದಕ್ಕೆ ಸಾಧ್ಯವೇ ಎಂಬುದನ್ನು ಯೋಚನೆ ಮಾಡಬೇಕಾಗುತ್ತದೆ.

ಮುಖ್ಯವಾಗಿ ನಮ್ಮ ವಿಚಾರ ಸರಣಿ ಹಿಂದೂಸ್ತಾನ ಸರ್ಕಾರ ನಮ್ಮನ್ನು ಅಲಕ್ಷ್ಯ ಮಾಡುತ್ತಿದೆ. ಆದರೆ ಈ ವಾದ ಸರಿಯಲ್ಲ. ಅವರು ನಮಗೆ ಅತ್ಯವಶ್ಯವಾಗಿ ಸಹಾಯ ಮಾಡುತ್ತಿದ್ದಾರೆ. ನಮ್ಮ ರಾಜ್ಯದ ಬಗ್ಗೆ ಮಲತಾಯಿ ಧೋರಣೆಯಿಂದ ನೋಡುತ್ತಿದ್ದಾರೆನ್ನುವ ಭಾವನೆಯಿಂದ ಕೆಲವರು ಮಾತನಾಡಿದ್ದಾರೆ. ಅದು ಒಪ್ಪತಕ್ಕ ಮಾತಲ್ಲ. ಈಗಿನ ಕಾಲದಲ್ಲಿ ಭಾರತದ ಯಾವುದೇ ರಾಜ್ಯ ಯಾವುದೇ ಸುಧಾರಣೆ ಮಾಡಿಕೊಳ್ಳಲಿಕ್ಕೆ ಮುಂದೆ ಬರುತ್ತದೆಯೋ ಅದಕ್ಕೆ ಸಹಾಯ ಮಾಡಲು ಹಿಂದೂಸ್ತಾನ ಸರ್ಕಾರ ಯಾವಾಗಲೂ ತಯಾರಿದೆ. ಆದುದರಿಂದ ಈ ರೀತಿಯ ಅಭಿಪ್ರಾಯವನ್ನು ವ್ಯಕ್ತಮಾಡುವುದೆಂದರೆ ಪಂಡಿತ ನೆಹರೂರು ಅವರ ನೇತೃತ್ವದಲ್ಲಿ ಕೊಂಚ ಅವಿಶ್ವಾಸವನ್ನು ವ್ಯಕ್ತಮಾಡಿದಂತಾಗುತ್ತದೆ. ಯಾವುದೇ ಯೋಜನೆಯನ್ನಾಗಲಿ ಕಾರ್ಯಗತ ಮಾಡಲಿಕ್ಕೆ ಬೇಕಾದ ಸಹಾಯವನ್ನು ಕೊಡಲು ಹಿಂದುಸ್ತಾನ ಸರ್ಕಾರ ಸದಾ ಸಿದ್ಧವಿದೆ. ಶರಾವತಿ ಯೋಜನೆ ಅತ್ಯವಶ್ಯ ಎನ್ನವು ಬಗ್ಗೆ ಯಾರು ವಿರೋಧ ಮಾಡಿಲ್ಲ. ಅದು ಅವಶ್ಯವೆನ್ನುವ ವಿಚಾರ ಎಲ್ಲರಿಗೂ ಗೊತ್ತಿದೆ. ದೇಶದ ಪ್ರತಿಯೊಬ್ಬ ಪ್ರಜೆಗೂ, ಪ್ರತಿಯೊಬ್ಬ ನಾಗರಿಕನಿಗೂ ಈ ಯೋಜನೆ ಅತ್ಯವಶ್ಯವಾಗಿ ಆಗಬೇಕೆಂಬುದು ನಿಜ. ಆದರೆ ಹೇಗೆ ಆಗಬೇಕು ಎನ್ನುವುದರ ಬಗ್ಗೆ ವಿಚಾರ ಮಾಡಬೇಕು. ಹಿಂದೂಸ್ತಾನ ಸರ್ಕಾರದವರು ಎಷ್ಟು ಹಣ ಸಹಾಯವನ್ನು ಮಾಡಿದರೂ ಸಹಿತ ಇನ್ನುಳಿದಿರುವ ಎರಡು ವರ್ಷಗಳ ಕಾಲದಲ್ಲಿ ಉತ್ಕಟೇಚ್ಛೇಯಿಂದ ಸಹಾಯ ಮಾಡುವುದಕ್ಕೆ ಸಿದ್ಧವಿದೆ. ಕೆಲಸ ಪೂರ್ತಿಯಾಗಿ ನಡೆಯಲಿಕ್ಕೆ ಶಕ್ಯವಿಲ್ಲ. ಇದೇ ಮಾತನ್ನು ಶ್ರೀಮಾನ್ ಎಸ್.ಕೆ.ಪಾಟೀಲರು ಹೇಳಿದ್ದಾರೆ. ಈ ದೃಷ್ಟಿಯಿಂದ ಈ ಠರಾವು ಸೂಚಿಸುವಂತೆ ಶರಾವತಿ ಯೋಜನೆಯ ಕಾರ್ಯ ತೀವ್ರ ಆಗಬೇಕು ಎನ್ನುವ ಆತುರತೆಯಿಂದ ಕೂಡಿದೆ. ಬಹಳ ದಿವಸಗಳು ಮಲಗಿದ್ದು ಒಮ್ಮೆಲೆ ಎಚ್ಚೆತ್ತಾಗ ಒಮ್ಮೆಲೆ ಎಲ್ಲ ಕಾರ್ಯಗಳು ಆಗಬೇಕೆಂದು ಅಪೇಕ್ಷೆ ಪಡುವಂತೆ ಅದೇ ದೃಷ್ಟಿಯು ಈ ಠರಾವಿನಲ್ಲಿಯೂ ಕಾಣುತ್ತದೆ. ವಿರೋಧ ಪಕ್ಷದ ಸದಸ್ಯರು ಈ ಠರಾವಿಗೆ ಬೆಂಬಲ ನೀಡಿದ್ದಾರೆಂದು ಹೇಳಿದರು. ವಿರೋಧ ಪಕ್ಷದ ಸದಸ್ಯರು ಇದನ್ನು ಅನುಮೋದನೆ ಮಾಡದೇ ಯಾವುದಕ್ಕೆ ಮಾಡಬೇಕು? ಇವ್ರೊತ್ತು ಮಗನ ಲಗ್ನವಾಗಬೇಕು ಎಂದರೆ ತಂದೆ ತಾನೇ ತನ್ನ ಮಗನ ಲಗ್ನಕ್ಕೆ ವಿರೋಧ ಮಾಡಲಿಕ್ಕೆ ಬರುತ್ತಾನೆ.

ಒಟ್ಟಿನಲ್ಲಿ ಮಾನ್ಯ ಸದಸ್ಯರಾದ ಹನುಮಂತಯ್ಯನವರು ತಂದಿರುವ ಠರಾವಿನ ಬಗ್ಗೆ ಎಲ್ಲರ ಅನುಮೋದನೆಯೂ ಇದೆ. ಇದಕ್ಕೆ ಹಿಂದೂಸ್ತಾನ ಸರ್ಕಾರದ

ಸಹಾಯ ಅವಶ್ಯವಾಗಿ ಬೇಕು ಎಂಬುದು ಎಲ್ಲರಿಗೂ ಒಪ್ಪಿಗೆಯಾಗಿರುವ ಮಾತು. ಆದರೆ ಹಿಂದುಸ್ತಾನ ಸರ್ಕಾರ ಅಲಕ್ಷ್ಯ ಮಾಡಿದೆ ಎಂಬುದನ್ನು ಒಪ್ಪಲಿಕ್ಕೆ ಸಾಧ್ಯವಿಲ್ಲ. ಅವರು ಇದಕ್ಕೆ ಸಾಧ್ಯವಾದಷ್ಟು ಸಹಾಯವನ್ನು ಮಾಡಿಯೇ ಮಾಡುತ್ತಾರೆ. ಮತ್ತು ಇನ್ನು ಹೆಚ್ಚಿಗೆ ಸಹಾಯ ಮಾಡಲಿಕ್ಕೆ ತಯಾರಿದ್ದಾರೆ. ನಾವೇ ಆ ಸಹಾಯವನ್ನು ಪಡೆಯಲಿಕ್ಕೆ ಶಕ್ಯವಿಲ್ಲದೆ ಕುಳಿತಿದ್ದೇವೆ. ಅದರ ಸಲುವಾಗಿ ಈ ಸಮಯದಲ್ಲಿ ಸರ್ಕಾರಕ್ಕೆ ಪ್ರಾರ್ಥನೆ ಮಾಡಿಕೊಳ್ಳುವುದೇನೆಂದರೆ, ಹಿಂದುಸ್ತಾನ ಸರ್ಕಾರ ಸಹಾಯಮಾಡಲು ಸಿದ್ಧವಿದೆ. ನಮ್ಮ ಸರಕಾರ ಅದರಿಂದ ಸಹಾಯ ಪಡೆಯುವ ವಿಷಯದಲ್ಲಿ ಪ್ರಯತ್ನ ಮಾಡಿ ಇಂಥ ಪ್ರಾಜೆಕ್ಟ್‌ಗಳನ್ನು ಕಾರ್ಯರೂಪಕ್ಕೆ ತರಬೇಕೆಂದು ಬಹಳ ಕಳಕಳಿಯಿಂದ ಪ್ರಾರ್ಥನೆ ಮಾಡುತ್ತೇನೆ.

## ಜನಸಂಖ್ಯಾ ನಿಯಂತ್ರಣ ಮತ್ತು ಆಹಾರ ಉತ್ಪಾದನೆ

28ನೇ ನವೆಂಬರ್ 1958

ಶ್ರೀ ಎಸ್.ವೈ.ಪಾಟೀಲ (ಸಿಂದಗಿ)– ಅಧ್ಯಕ್ಷರೆ ನಾನು ಮೊದಲನೆಯದಾಗಿ ಸಮಯ ಕೊಟ್ಟ ಬಗ್ಗೆ ಅಬಾರ ಮನ್ನಿಸುತ್ತೇನೆ. ಮುಖ್ಯವಾಗಿ ಆಹಾರ ಸಮಸ್ಯೆಯ ಮೇಲೆ ಮಾತನಾಡುವಾಗ ಆಹಾರ ಸಮಯ ಸ್ವಲ್ಪ ಇರುವುದರಿಂದ ಮೂರು ವಿಷಯಗಳ ಬಗ್ಗೆ ನನ್ನ ಅಭಿಪ್ರಾಯಗಳನ್ನು ಸ್ಪಷ್ಟವಾಗಿ ಹೇಳುತ್ತೇನೆ. ನಿನ್ನೆ ಶ್ರೀಮಾನ್ ಹನುಮಂತಯ್ಯನವರು ನಮ್ಮ ದೇಶದಲ್ಲಿ ಜನಸಂಖ್ಯೆ ಅಪರಿಮಿತವಾಗಿ ಬೆಳೆಯುತ್ತಿದೆಯೆಂದು ಹೇಳಿದರು. ಆ ವಿಚಾರವನ್ನು ಎಲ್ಲರೂ ಹಾಸ್ಯಾಸ್ಪವಾಗಿ ಹೇಳಿರುವುದನ್ನು ಪ್ರತಿಯೊಬ್ಬರ ಭಾಷಣದಲ್ಲಿಯೂ ಕೇಳುತ್ತಿದ್ದೇನೆ. ಆದರೆ ಇದರ ಬಗ್ಗೆ ಮಾಡಬೇಕಾದ ಕೆಲಸವೇನೆಂದು ಯಾರೂ ಸೂಚಿಸಿಲ್ಲ. ನಾನು ನಮ್ರತೆಯಿಂದ ಸೂಚಿಸುವುದು ಆಹಾರವನ್ನು ಹೆಚ್ಚಿಸುವ ಪ್ರಯತ್ನ ಮಾಡಬೇಕು. ಈಗ ಎಂಟು ಕೋಟಿ ಜನಸಂಖ್ಯೆ ಹೆಚ್ಚಿದೆ 1975ನೇ ಇಸ್ವಿಯ ಹೊತ್ತಿಗೆ 18 ವರ್ಷವಾಗಿರುವ ಮಗು ತನ್ನ ಫ್ಯಾಕ್ಟರಿಯನ್ನು ಪ್ರಾರಂಭಿಸುತ್ತಾನೆ. ಅದರಿಂದ ಜನಸಂಖ್ಯೆ ಅಪರಿಮಿತವಾಗಿ ಬೆಳೆಯುತ್ತದೆ. ಹಾಗೆ ಬೆಳೆದು 75ಕೋಟಿಯಾದರೆ ಎಷ್ಟು ತಾನೆ ಆಹಾರ ಬೆಳೆಯುವುದಕ್ಕೆ ಸಾಧ್ಯ! ಇದರ ಸಲುವಾಗಿ ಮಾನ್ಯ ಮಂತ್ರಿಗಳು ಮೊದಲು ಮಾಡಿಕೊಂಡ ಅಸೆಂಬ್ಲಿ ಸದಸ್ಯರು ಕೂಡಿ ಯಾರೂ ಎರಡು ಮಕ್ಕಳಿಗಿಂತ ಹೆಚ್ಚು ಹಡೆಯಬಾರದು. ಎರಡಕ್ಕಿಂತ ಜಾಸ್ತಿ ಹಡೆದವರು ಅಸೆಂಬ್ಲಿ ಸದಸ್ಯರಾಗಬಾರದು ಎಂದು ನಿಯಮವನ್ನು ಮಾಡಬೇಕು. ಎರಡು ಮದುವೆ ಮಾಡಿಕೊಂಡವರಿಗೆ ನೌಕರಿ ಕೊಡಕೂಡದೆಂದು ಹೇಗೆ ನಿಬಂಧ೯ ಹಾಕಿದೆಯೋ ಹಾಗೆ ಎರಡಕ್ಕಿಂತ ಹೆಚ್ಚು ಮಕ್ಕಳು ಹಡೆದವರು ಸದಸ್ಯರಾಗಬಾರದೆಂದು ನಿಬಂಧ೯ ಹಾಕಬೇಕು. ಆ

ರೀತಿಯಾಗಿ ನಾನು ಆಚರಣೆಯಲ್ಲಿ ತಂದು ಈ ಮಾತನ್ನು ಹೇಳುತ್ತಿದ್ದೇನೆ. ಆಚರಣೆಯಲ್ಲಿ ತರದೇ ಇರುವುದನ್ನು ಹೇಳುವುದಕ್ಕೆ ಯಾರಿಗೂ ಅಧಿಕಾರವಿಲ್ಲ.

ಮುಖ್ಯವಾಗಿ ಅನೇಕ ಸದಸ್ಯರು ರಬಿ ಕ್ಯಾಂಪೇನದ ಬಗ್ಗೆ ಸರಕಾರವನ್ನು ಕಟುತರವಾಗಿ ಟೀಕಿಸಿದರು. ಸರಕಾರಕ್ಕೆ ಸೂಚನೆಗಳನ್ನು ಮಾಡಬಹುದು. ಹಾಗೆಯೇ ನಮ್ಮ ಕರ್ತವ್ಯ ಏನಿದೆ ಎಂಬುದನ್ನು ಸಹ ವಿಚಾರ ಮಾಡಬೇಕು. ನಾನು ಹಳ್ಳಿಗಳಲ್ಲಿ ತಿರುಗಾಡತಕ್ಕಂಥ ವ್ಯಕ್ತಿಯಾಗಿರುವುದರಿಂದ ಹಳ್ಳಿಗಳಲ್ಲಿಯ ಪರಿಸ್ಥಿತಿ ಯಾವ ರೀತಿಯಾಗಿದೆ ಎಂಬುದು ನನಗೆ ಚೆನ್ನಾಗಿ ಗೊತ್ತಿದೆ. ಬಿಜಾಪೂರ ಜಿಲ್ಲೆಯ ಸಿಂದಗಿ ತಾಲೂಕಿನಲ್ಲಿ ಮಳೆಯಾಗಿಲ್ಲ ದುಷ್ಕಾಳದ ಪರಿಸ್ಥಿತಿ ಇದೆ ಎಂದು ಬಹಳ ದುಃಖದಿಂದ ಹೇಳಬೇಕಾಗಿದೆ. ಸಕಾಲದಲ್ಲಿ ಮಳೆಯಾದರೆ ಒಂದೊಂದು ಎಕರೆ ಭೂಮಿಯಲ್ಲಿ 20 ಚೀಲ ಜೋಳ ಬರುತ್ತದೆ. ಇಲ್ಲಿ ಯಾವ ನೀರಾವರಿ ಯೋಜನೆ ಸೌಲಭ್ಯವು ಇಲ್ಲ. ಆದುದರಿಂದ ವ್ಯವಸಾಯ ಇಲಾಖೆಯವರು ಈ ಪ್ರದೇಶದ ಕಡೆಗೆ ಹೆಚ್ಚು ಗಮನ ಕೊಡಬೇಕಾದುದು ಅಗತ್ಯ. ರೈತನಿಗೆ ಭೂಮಿಯ ಬಗ್ಗೆ ಹೆಚ್ಚು ಆಸ್ಥೆಯುಂಟಾಗಲು ಅವನಿಗೆ ಭೂಮಿಯ ಮೇಲಿನ ಹಕ್ಕು ಪ್ರಾಪ್ತವಾಗಬೇಕು. ಇಲ್ಲದಿದ್ದರೆ ಸುಧಾರಣೆಯಾಗುವುದು ಸಾಧ್ಯವಿಲ್ಲ. ತಾನೇ ಭೂಮಿಯ ಒಡೆಯನಾಗಿರುತ್ತೇನೆಂದು ರೈತನಿಗೆ ಗೊತ್ತಾಗದೆ ಅವರಿಗೆ ಆಸಕ್ತಿಯು ಹೆಚ್ಚಾಗಿ ಹೆಚ್ಚು ಉತ್ಪಾದನೆ ಮಾಡಲು ಪ್ರಯತ್ನ ಮಾಡುತ್ತಾನೆ. ಇಲ್ಲದಿದ್ದರೆ ಭೂಮಿಯ ಬಗ್ಗೆ ಅವರಿಗೆ ಅನಸಕ್ತಿಯುಂಟಾಗುತ್ತದೆ.

ನಾವೆಲ್ಲರೂ ಸುಧಾರಣೆಯಾಗಬೇಕೆಂದು ಹೇಳುತ್ತೇವೆ. ಯಾವುದೊಂದು ಸುಧಾರಣೆ ಮಾಡಬೇಕಾದರೆ ಸರಕಾರ ಖರ್ಚು ಮಾಡಬೇಕಾಗುತ್ತದೆ. ಇದಕ್ಕಾಗಿ ಸರಕಾರ ಜನತೆಯ ಮೇಲೆ ತೆರಿಗೆ ಹೇರಬೇಕಾಗುತ್ತದೆ. ನಮಗೆ ಸುಧಾರಣೆ ಬೇಕಾದರೆ ತೆರಿಗೆ ಕೊಡಲು ತಯಾರಿರಬೇಕು.

ಇನ್ನು ರೈತನಿಗೆ ಸಾಲ, ಸಬ್ಸಿಡಿ ಕೊಡತಕ್ಕಂತ ಕೆಲಸವನ್ನು ವ್ಯವಸಾಯ ಇಲಾಖೆ ಮಾಡಬೇಕು. ಇದಕ್ಕೆ ರೆವಿನ್ಯೂ ಇಲಾಖೆಯ ಸಂಬಂಧವಿರಬಾರದು. ಯಾಕೆಂದರೆ ರೈತನಿಗೆ ಬಹಳ ತೊಂದರೆಯಾಗುತ್ತದೆ, ಲಂಚ ಕೊಡಬೇಕಾಗುತ್ತದೆ. ಈ ವೃತ್ತಿ ಕಡಿಮೆಯಾಗಬೇಕು. ಸುಲಭವಾಗಿ ರೈತನಿಗೆ ಸಾಲ ತಗಾಯಿ ದೊರೆಯುವ ಹಾಗೆ ವ್ಯವಸಾಯ ಇಲಾಖೆಯಲ್ಲಿ ಒಂದು ವ್ಯವಸ್ಥೆ ಮಾಡಬೇಕು. ಇನ್ನೊಂದು ವಿಷಯ ಹೇಳಬೇಕಾಗಿದೆ ನಮ್ಮ ಜನರಲ್ಲಿ ಇತ್ತೀಚೆಗೆ ಎಲ್ಲದಕ್ಕೂ ಸರಕಾರದ ಮೇಲೆ ಅವಲಂಭಿಸುವ ವೃತ್ತಿ ಬೆಳೆದು ಬಂದಿದೆ. ಇದು ಸರಿಯಲ್ಲ. ಪ್ರತಿಯೊಂದನ್ನು ಸರಕಾರವೇ ಮಾಡಬೇಕು ಎಂದರೆ ಅದು ಹೇಗೆ ಸಾಧ್ಯವಾದೀತು! ಜನರೂ ಸಹ ಸ್ವಾವಲಂಬನದಿಂದ ಇರಬೇಕು.

# ವಿಜಾಪೂರ ಜಿಲ್ಲೆಯ ನೀರಾವರಿ ಸೌಲಭ್ಯ ಕುರಿತು

1ನೇ ಡಿಸೆಂಬರ್ 1958

**ಶ್ರೀ ಎಸ್.ವೈ. ಪಾಟೀಲ್** – ಸಭಾಪತಿಗಳೇ, ಈ ಠರಾವನ್ನು ಅನುಮೋದಿಸುತ್ತಾ ಬಿಜಾಪೂರ ಜಿಲ್ಲೆಯ ದೃಷ್ಟಿಯಿಂದ ಕೆಲವು ಮಾತುಗಳನ್ನು ನಾನು ಹೇಳಬಯಸುತ್ತೇನೆ. ಈ ಠರಾವಿನಲ್ಲಿ ನಮೂದಿಸಿರುವ ಜಿಲ್ಲೆಗಳಲ್ಲಿ ಏನು ತೊಂದರೆಗಳಿವೆಯೋ ಅವುಗಳನ್ನು ಪೂರ್ಣವಾಗಿ ಸರ್ವೆಮಾಡಿ. ಆ ಪ್ರದೇಶಗಳ ಅನಿಷ್ಟ ಪರಿಸ್ಥಿತಿಯನ್ನು ಪರಿಹರಿಸದೆ ಇದ್ದರೆ, ಸರಕಾರಕ್ಕೆ ತೊಂದರೆಯಾಗುತ್ತದೆ. ಬಿಜಾಪುರದ ಫ್ಯಾಮಿನ್‌ಗೆ ಡೊಗಿ ಬರ ಎಂದು ಹೇಳುವುದುಂಟು. ಈ ಡೊಗಿ ಬರ ಸಾವುಗಳಿಗೆ ಬಹಳ ಪ್ರಸಿದ್ಧವಾದುದು. ನಮ್ಮಲ್ಲಿ ದುಷ್ಕಾಲಕ್ಕೆ ಬರುವ ಬರಗಳಿಗೆ ಅನೇಕ ಹೆಸರುಗಳಿವೆ. ನಮ್ಮಲ್ಲಿ ಎರಡು ವರ್ಷಕ್ಕೆ ಮೂರು ವರ್ಷಕ್ಕೆ ಪ್ರತಿ ವರ್ಷವೂ ಇದು ಬರಬಹುದು. ಮಾನ್ಯ ರೆವಿನ್ಯೂ ಮಂತ್ರಿಗಳು ಈ ಸಮಸ್ಯೆಯನ್ನು ಆ ದೃಷ್ಟಿಯಿಂದ ನೋಡಬೇಕು. ಹಿಂದೆ ಬ್ರಿಟಿಷರ ಕಾಲದಲ್ಲೂ ಈ ಕಾಮ ಪರಿಸ್ಥಿತಿ ಹೋಗಲಿಲ್ಲ. ಮುಂಬೈ ರಾಜ್ಯದಲ್ಲಿ ಇದ್ದಾಗೂ ಈ ಕಷ್ಟವನ್ನು ಹೋಗಿಸಲಿಲ್ಲ. ಆದರೆ ಈ ಕನ್ನಡ ರಾಜ್ಯವನ್ನು ಕಟ್ಟಿದನಂತರವೂ ಈ ದುಷ್ಕಾಲ ಪರಿಸ್ಥಿತಿ ಹೋಗದಿದ್ದರೆ ಜನತೆಗೆ ಒಂದು ತರಹ ತೊಂದರೆಯಾದರೆ, ಈ ಕನ್ನಡ ನಾಡಿನ ಸರ್ಕಾರಕ್ಕೂ ಒಂದು ರೀತಿಯ ಅಪಮಾನ. ಈ ದುಷ್ಕಾಲ ಪರಿಸ್ಥಿತಿ ಎಲ್ಲೆಲ್ಲಿದೆಯೋ ಅಲ್ಲಲ್ಲಿ ಪರಿಹಾರ ಕಾರ್ಯಕ್ರಮವನ್ನು ಕೂಡಲೇ ತೆಗೆದುಕೊಳ್ಳಬೇಕು. ಚಿತ್ರದುರ್ಗ ಜಿಲ್ಲೆಯಲ್ಲಿದ್ದರೆ ಅಲ್ಲಿ ಮೊದಲು ತೆಗೆದುಕೊಳ್ಳಬೇಕು. ಕೋಲಾರದಲ್ಲಿದ್ದರೆ ಅಲ್ಲಿ ಮೊದಲು ತೆಗೆದುಕೊಳ್ಳಬೇಕು. ರಾಜ್ಯದಲ್ಲಿ ಆ ಪರಿಸ್ಥಿತಿ ಯಾವ ಪ್ರದೇಶದಲ್ಲಿದ್ದರೂ ಮೊದಲು ತೆಗೆದುಕೊಳ್ಳಬೇಕು. ಒಂದು ರಾಜ್ಯದ ಹಿತದೃಷ್ಟಿಯಿಂದ ಈ ಪರಿಹಾರ ಕಾರ್ಯಕ್ಕೆ ಎಷ್ಟು ಕೋಟಿ ರೂಪಾಯಿ ಹಿಡಿದರೂ ಅಡ್ಡಿ ಇಲ್ಲ, ಟ್ಯಾಕ್ಸ್ ಹಾಕಿದರೂ ಅಡ್ಡಿ ಇಲ್ಲ, ಈ ಪ್ರಶ್ನೆಯನ್ನು ಬಗೆಹರಿಸಲಿಕ್ಕೇಬೇಕು ಇದನ್ನು ಕಾಂಗ್ರೆಸ್ ಪಾರ್ಟಿಯವರೂ ಒಪ್ಪುತ್ತಾರೆ. ವಿರೋಧ ಪಕ್ಷದವರೂ ಒಪ್ಪುತ್ತಾರೆ. ಜನತೆಯ ಕಲ್ಯಾಣ ಯಾವ ರೀತಿದಿಂದ ಆಗುತ್ತದೆ, ಎನ್ನುವ ದೃಷ್ಟಿಯಿಂದ ನಾವು ನೋಡಬೇಕು. ಬಿಜಾಪೂರ ಜಿಲ್ಲೆಯ ಪರಿಸ್ಥಿತಿಯನ್ನು ಪದೇ ಪದೇ ಮಾನ್ಯ ಸಭೆಯಲ್ಲಿ ಹೇಳಿದ್ದೇವೆ. ಬಿಜಾಪೂರ ಜಿಲ್ಲೆಯ ಭೂಮಿಯನ್ನು ನೋಡಿರಿ. ಮಂಡ್ಯ ಜಿಲ್ಲೆಯ ಭೂಮಿಯನ್ನೂ ನೋಡಿರಿ. ನಾನು ತುಮಕೂರು ಜಿಲ್ಲೆಯ ಭೂಮಿಯನ್ನು ನೋಡಿದ್ದೇನೆ; ಮತ್ತು ಹಳೆಯ ಮೈಸೂರು ರಾಜ್ಯದ ಬೇರೆ ಬೇರೆ ಪ್ರದೇಶಗಳ ಭೂಮಿಯನ್ನೆಲ್ಲಾ ನೋಡಿದ್ದೇನೆ. ಸರ್.ಎಂ. ವಿಶ್ವೇಶ್ವರಯ್ಯನವರು ಪುಣ್ಯಾತ್ಮರು. ಆ ಮಹಾನುಭಾವರು ಮಂಡ್ಯ ಜಿಲ್ಲೆಗೆ ಮಹೋಪಕಾರ ಮಾಡಿದ್ದಾರೆ. ಮಂಡ್ಯ ಜಿಲ್ಲೆಯ ನೀರಾವರಿ ಯೋಜನೆಗಳು ಸಂತೋಷದ ವಿಷಯ, ನಮ್ಮ ಬಿಜಾಪೂರ ಜಿಲ್ಲೆಯಲ್ಲಿ 47 ಹಳ್ಳಗಳು ಹರಿಯುತ್ತಾ ಇವೆ ಎಂದು ಚನ್ನಬಸಪ್ಪನವರು ಉತ್ತರ ಕೊಟ್ಟರು. 47 ಮಾತ್ರವಲ್ಲ, ಸುತ್ತಲೂ ನೀರು ಲಭಿಸುವುದು. ನಮ್ಮ ಕಡೆಯವರು ಪೋನ್

ಮಾಡಿ ತಮಗೆ ದುಷ್ಕಾಲಿದೆ. ಅದನ್ನು ಮಾಡಿ, ಇದನ್ನು ಮಾಡಿ ಎಂದು ಹೇಳುತ್ತಿದ್ದಾರೆ. ಸ್ವಾತಂತ್ರ್ಯಕ್ಕಿಂತ ಪೂರ್ವದಲ್ಲಿ ಯಾವ ಕಷ್ಟವಿತ್ತೋ ಸ್ವಾತಂತ್ರ್ಯ ಬಂದರೂ ಹೋಗಲಿಲ್ಲ. ಈ ದೃಷ್ಟಿಯಿಂದ ಮಂತ್ರಿಗಳಿಗೆ ಯಾವುದು ಬೇಕಾದಷ್ಟು ತೆರಿಗೆ ಹಾಕಿದರೂ ಪರವಾಗಿಲ್ಲ. ಸುಧಾರಣೆಗೆ ಬೇಕಾದರೆ ತೆರಿಗೆ ಕೊಡಲು ಯಾರೂ ತಕರಾರು ಮಾಡುವುದಿಲ್ಲ. ನಮ್ಮದು ಹೊಳೆ ನೀರು, ಬೆಳೆಗೆ ಉಪಯೋಗವಾಗುವಂತೆ ಮಾಡಿ ಬಿಜಾಪುರ ಜಿಲ್ಲೆಯನ್ನು ಪೂರ್ಣವಾಗಿ ಸುಧಾರಿಸಿದರೆ ತನ್ಮೂಲಕ ಕನ್ನಡ ನಾಡಿಗೆ ಮೂರು ಲಕ್ಷ ಟನ್ ಆಹಾರ ಕಡಿಮೆಯಿದೆಯೆಂದೇನು ವ್ಯವಸಾಯ ಇಲಾಖೆ ಮಂತ್ರಿಗಳು ಹೇಳಿದರೋ ಅದು ಹೋಗಿ 15 ಲಕ್ಷ ಟನ್ ಬೆಳೆಯಬಹುದೆಂದು ಸಿದ್ಧ ಮಾಡಿಕೊಡಲು ತಯಾರಾಗಿದ್ದೇನೆ. ನಮ್ಮಲ್ಲಿ ಒಂದು ಸಾವಿರ ರೂಪಾಯಿಗೆ ಬಾವಿಯಾಗುವ ಅನುಕೂಲತೆಯಿದೆ. ಕೊಯಿನಾ ಯೋಜನೆಬೇಡ, ಯಾವುದೂ ಬೇಡ. ಸರ್ಕಾರ ಸುಧಾರಣೆ ಒಪ್ಪಿಕೊಳ್ಳಲಿಕ್ಕೆ ತಯಾರಿದ್ದರೆ. ಪುಣೆಯಲ್ಲಿ ನೀರಿನ ವ್ಯವಸ್ಥೆ ಮಾಡುವ ಅಧಿಕಾರಿಗಳಿದ್ದಾರೆ. ಅದೇ ರೀತಿ, ಇರುವ ನೀರನ್ನು ಯಾವ ರೀತಿ ಉಪಯೋಗಮಾಡಿಕೊಳ್ಳಬಹುದು, ಯಾವ ಮಣ್ಣಿನಲ್ಲಿ ಏನು ಬೆಳೆಯುತ್ತದೆ, ಎಂಬದನ್ನು ತಿಳಿಸಲು ವ್ಯವಸ್ಥೆಯಾಗಬೇಕು. ಯಾವ ದೇಶದಲ್ಲೇ ಆಗಲಿ ಇರುವ ಎಲ್ಲಾ ಸೌಲಭ್ಯಗಳನ್ನು ಉಪಯೋಗಿಸಿಕೊಳ್ಳಲು ತಕ್ಕ ಏರ್ಪಾಡಾಗಬೇಕಾದದ್ದು ಅಗತ್ಯ. ಆ ದೃಷ್ಟಿಯಿಂದ ಮಾನ್ಯ ಮಂತ್ರಿಗಳು ಪ್ರವಾಸ ಮಾಡುತ್ತಿದ್ದರೆ, ಅದನ್ನು ಟೀಕಿಸುವುದನ್ನು ನೋಡಿ ಆಶ□ರ್ಯವಾಗುತ್ತಿದೆ. ರಾಜ್ಯವಾಳುವಾಗ ಒಂದೇ ಸ್ಥಳದಲ್ಲಿ ಕುಳಿತು ಹೇಗೆ ರಾಜ್ಯಭಾರ ಮಾಡುವುದು? ಶ್ರೀ ಮುಕ್ಕಣ್ಣಪ್ಪನವರು ಪ್ರತಿಯೊಂದು ಸಲವೂ ಟೀಕೆ ಮಾಡುತ್ತಿದ್ದಾರೆ. ಶ್ರೀ ಕೆಂಚಪ್ಪನವರು ಇಂಥ ಉದಾತ್ತ ನಿರ್ಣಯ ತಂದಿರುವುದಕ್ಕಾಗಿ ಅವರನ್ನು ಮನ್ನಿಸುತ್ತಿದ್ದೇನೆ. ಯಾವ ಜಿಲ್ಲೆಯಲ್ಲೇ ಆಗಲಿ ಇರುವ ತೊಂದರೆ ನಿವಾರಣೆಯಾಗಬೇಕು. ಶೇಕಡ ಎಂಭತ್ತು ಜನ ಒಕ್ಕಲಿಗರೆಂದು ವರ್ಣನೆ ಮಾಡುತ್ತಿದ್ದೇವೆಯೇ ಹೊರತು ಅವರ ಕಡೆ ಸಾಕಷ್ಟು ಗಮನಕೊಟ್ಟಿಲ್ಲ. ಇದೊಂದು ಕೊರತೆ, ಆದ್ದರಿಂದ ಇಂಥ ಠರಾವು ತರುವ ಸಂದರ್ಭ ಇದೇ ಕಡೆಯದಾಗಬೇಕು. ಔದ್ಯೋಗಿಕ ವಿಚಾರ ಆಮೇಲೆ ಮಾತನಾಡೋಣ ದುಷ್ಕಾಲವಿದೆ, ಮಳೆಯಿಲ್ಲ ಎಂದು ಮಂತ್ರಿಗಳಿಗೆ ವಿನಂತಿ ಮಾಡಿಕೊಳ್ಳುವ ಸಂದರ್ಭ ಇದೇ ಕಡೆಯದಾಗಬೇಕು. ಈ ದುರಾದೃಷ್ಟ ಪುನಃ ಪುನಃ ಬರಬಾರದು. ಆದ್ದರಿಂದ ಬಿಜಾಪೂರ ಜಿಲ್ಲೆಯಲ್ಲಿ ಕಲ್ಯಾಣಕಾರಿಯಾಗುವ ಪ್ರತಿಯೊಂದು ಕಾರ್ಯಕ್ರಮವನ್ನು ನೋಡಿದರೆ ಎಲ್ಲರೂ ಅಲ್ಲೇ ನೀರಾವರಿ ಮಾಡುತ್ತೇವೆ ಎಂದು ಹೇಳುವ ಸನ್ನಿವೇಶ ಬರಬಹುದು. ಎಷ್ಟೋ ಸಲ ಇದನ್ನು ಹೇಳಿದ್ದೇವೆ. ಉತ್ತಮ ತರದ ಭೂಮಿ, ಹರಿಯುವ ನೀರು ಇದೆ, ಪಂಚಪಕ್ವಾನ್ನ ಇದೆ. ಆದರೆ ಊಟ ಮಾಡುವುದಕ್ಕೆ ಬರುವುದಿಲ್ಲ, ಬೆಳೆ ಒಣಗುವುದನ್ನು ನೋಡುವುದಕ್ಕಾಗುವುದಿಲ್ಲ, ಬಹಳ ದುಃಖವಾಗುತ್ತದೆ. ನಿಜವಾಗಿಯೂ ಇದೇ ಪರಿಸ್ಥಿತಿ ಮುಂದುವರಿದರೆ ಜನರು ಗುಳೆ ಹೋಗಬಹದು, ಇನ್ನು ಕೆಲವು ದಿನಗಳಲ್ಲಿ ಒಕ್ಕಲಿಗರು ಎತ್ತುಗಳನ್ನು ಮಾರಿ ಹೊರಟು ಹೋಗಬಹುದು ಮಾನ್ಯ ಮಂತ್ರಿಗಳು ಎಲ್ಲಾ ಜಿಲ್ಲೆಗಳನ್ನೂ ಸರ್ವೆ ಮಾಡಿ ತಕ್ಕ

ವ್ಯವಸ್ಥೆ ಮಾಡಬೇಕು. ಅನ್ನವಿಲ್ಲದೆ ಯಾವ ಕೆಲಸವನ್ನು ಮಾಡಲಾಗುವುದಿಲ್ಲ. ದೇಶ ರಕ್ಷಣೆ ಮಾಡಬೇಕಾದರೆ ಮಿಲಿಟರಿಗೆ ಅನ್ನಬೇಕು, ಶಕ್ತಿವರ್ಧಕವಾಗಲು ಆಹಾರದ ಅನುಕೂಲತೆ ಬೇಕು, ದ್ರಾಕ್ಷಿ, ಮೊಸಂಬಿ ಮುಂತಾದವನ್ನು ಬೆಳೆಯಲು ಬಿಜಾಪುರದಲ್ಲಿ ಅನುಕೂಲತೆ ಇದೆ. ನೀರಾವರಿ ಅನುಕೂಲ ಮಾಡಿದಲ್ಲಿ ಬೇಕಾದಷ್ಟು ದ್ರಾಕ್ಷಿ ಬೆಳೆಯಬಹುದು. ಇದೊಂದು ತಾತ್ಪೂರ್ತಿಕವಾದ ಠರಾವು. ಸರ್ವೆ ಮಾಡಿ ಅನ್ನ ಸಮಸ್ಯೆ ಪರಿಹಾರ ಮಾಡಬೇಕು. ಈಗ ನೆಹರೂರವರು ಪರದೇಶಗಳಲ್ಲಿ ಯಾಚನೆ ಮಾಡುತ್ತಿದ್ದಾರೆ. ಅದು ಬೇಡ, ಕನ್ನಡ ನಾಡಿಗಾಗಿ ನೆಹರು ಬೇಡುವ ಸಂದರ್ಭ ಬರಬಾರದು. ಮೂರು ಲಕ್ಷ ಟನ್ ಅಲ್ಲ, 50 ಲಕ್ಷ ಟನ್ ಬೇಕಾದರೂ ಉತ್ಪತ್ತಿ ಮಾಡುವ ಸಾಮರ್ಥ್ಯ ಪಡೆಯಬೇಕು, ಅದಕ್ಕಿರುವ ಸನ್ನಿವೇಶಗಳನ್ನು ಸದುಪಯೋಗ ಪಡಿಸಿಕೊಳ್ಳಬೇಕು ಎಂದು ಹೇಳಿ ಈ ಠರಾವನ್ನು ಅಂತಃಕರಣ ಪೂರ್ವಕವಾಗಿ ಅನುಮೋದಿಸುತ್ತೇನೆ.

## ರಾಜ್ಯಪಾಲರ ಭಾಷಣದ ಮೇಲಿನ ಚರ್ಚೆ

**7ನೇ ಮಾರ್ಚ್ 1960**

ಶ್ರೀ ಎಸ್.ವೈ.ಪಾಟೀಲ್ (ಸಿಂದಗಿ) – ಮಾನ್ಯ ಸಭಾಪತಿಗಳೇ, ಈಗ ಮಾನ್ಯ ಸಭಾಗೃಹದಲ್ಲಿ ಚರ್ಚಿಸಲ್ಪಟ್ಟಿತಕ್ಕಂತ ಈ ವಂದನಾರ್ಪಣ ಠರಾವನ್ನು ಅನುಮೋದಿಸುತ್ತಾ ಕೆಲವು ಮಾತುಗಳನ್ನು ಹೇಳುತ್ತೇನೆ. ರಾಜ್ಯಪಾಲರವರರ ಭಾಷಣದ ಬಗ್ಗೆ ಕಳೆದ ನಾಲ್ಕು ದಿನಗಳಿಂದ ಈ ಸಭೆಯಲ್ಲಿ ಚರ್ಚೆ ನಡೆಯುತ್ತಿದೆ. ಅದರಲ್ಲಿ ಮುಖ್ಯವಾಗಿ ಮಾನ್ಯ ಸ್ನೇಹಿತರಾ ಶ್ರೀಮುಕ್ಕಣ್ಣಪ್ಪನವರು ಈಗ ಅವರು ಸಭೆಯಲ್ಲಿಲ್ಲ ಟೀಕೆ ಮಾಡುತ್ತಾ ಹೋಗಿ ಮುಖ್ಯಮಂತ್ರಿಗಳ ಮೇಲೆ, ಈ ರಾಜ್ಯದ ಮಂತ್ರಿಮಂಡಲದ ಮೇಲೆ ಟೀಕೆ ಮಾಡಿದರು. ಅವರ ಟೀಕೆಗೆ ಒಂದು ಮಾತಿನಲ್ಲಿ ಸಾಧಾರಣವಾಗಿ ಉತ್ತರ ಕೊಡುವುದಾದರೆ ಹಳೆಯ ಮೈಸೂರು, ಹೊಸ ಮೈಸೂರು ಎನ್ನತಕ್ಕ ಭೇದಭಾವವನ್ನು ಯಾವ ಕನ್ನಡಿಗನೂ ಒಪ್ಪುವುದಿಲ್ಲ. ಇವೊತ್ತಿನ ದಿವಸ ಇಡಿಯ ಭಾರತ ದೇಶವು ಒಕ್ಕಟ್ಟಿನಿಂದ ನಡೆಯಬೇಕಾಗಿದೆ. ಹಳೇ ಮೈಸೂರಿನವರು ಹೊಸ ಮೈಸೂರಿನವರೆಂದು ಕನ್ನಡಿಗರೆಲ್ಲ ಬೇರೆಬೇರೆ ಭಾವನೆ ವ್ಯಕ್ತಮಾಡುವುದು ಬಹಳ ದುರ್ದೈವದ ಸಂಗತಿಯಾಗಿದೆ. ನಮ್ಮ ಮಂತ್ರಿಮಂಡಲವು ಒಳ್ಳೆಯ ಕೆಲಸ ಮಾಡುತ್ತಾ ಇದೆ ಎಂದು ಇಡಿಯ ಕನ್ನಡ ನಾಡು ಹೊಗಳುತ್ತಿದೆ. ಪ್ರೇಮದಿಂದ ವರ್ಣನೆ ಮಾಡುತ್ತಿದ್ದಾರೆ. ಶ್ರೀಚನ್ನಬಸಪ್ಪನವರು, ಅರ್ಥ ಮಂತ್ರಿಗಳಾದ ಶ್ರೀಮರಿಯಪ್ಪನವರು ಮಾಡುವ ಹಾಗೆ ಉಳಿದ ಎಲ್ಲ ಮಂತ್ರಿಗಳು ಒಳ್ಳೆಯ ಕೆಲಸ ಮಾಡುತ್ತಿದ್ದಾರೆ. ಮಂತ್ರಿಮಂಡಲದಲ್ಲಿ ಎಲ್ಲರೂ ಕೂಡಿ ಚರ್ಚೆ ಮಾಡಿ ಉತ್ತಮ ಕೆಲಸವನ್ನು ಮಾಡುತ್ತಿದ್ದಾರೆ. ಕಾಂಗ್ರೆಸ್‌ದ

ಪಾರ್ಟಿಯು ಎಲ್ಲ ಸದಸ್ಯರೂ ಕೂಡಿ ಜವಾಬ್ದಾರಿಯಿಂದ ಕೆಲಸ ಮಾಡುತ್ತಿದ್ದಾರೆ. ಇದನ್ನು ಎಲ್ಲ ಕನ್ನಡಿಗರೂ ಅಭಿಮಾನದಿಂದ ಹೇಳುತ್ತಿದ್ದಾರೆ.

ಇನ್ನು ಶ್ರೀಮುಕ್ಕಣ್ಣಪ್ಪನವರಿಗೆ ಒಂದು ಉತ್ತರ ಕೊಡಬೇಕಾಗಿದೆ. ವಿಶಾಲ ಕರ್ನಾಟಕ ಆಗುವ ಪೂರ್ವದಲ್ಲಿ ಹಳೆಯ ಮೈಸೂರಿನಲ್ಲಿ 3ನೆಯ ಮತ್ತು 4ನೆಯ ವರ್ಗಗಳ ನೌಕರರಿಗೆ ಒಟಿಟೂಟು 14ರಿಂದ ಒಚಿಘೂಟು 18ರ ವರೆಗೆ, ಡಿಸ್ಟ್ರಿಕಿನಲ್ಲಿ 14 ರಿಂದ 20, ಸಿಟಿಯಲ್ಲಿ 18 ರಿಂದ 20 ಸಂಬಳ ದೊರೆಯುತ್ತಿದ್ದುದು ಈಗ Minimum 25 ರಿಂದ Maximum 35 ರ ವರೆಗೆ ಮತ್ತು ಡಿ.ಎ.18 ರಿಂದ 20 ರೂಪಾಯಿಗಳ ವರೆಗೆ ಹೆಚ್ಚಿಸಲಾಗಿದೆ. ಇದನ್ನು ಗಮನಿಸಬೇಕಾದುದು ಅಗತ್ಯ. ಹೈದ್ರಾಬಾದ ಕರ್ನಾಟಕ ಪ್ರದೇಶದಲ್ಲಿ ಶಿಕ್ಷಣ ಸೌಕರ್ಯ ಒದಗಿಸಿಕೊಟ್ಟಿದ್ದು ಸೂಕ್ತವಾಗಿದೆ. ಉತ್ತರ ಕರ್ನಾಟಕ ಪ್ರದೇಶವು ಹೇಗಿದೆ ಎನ್ನುವುದನ್ನು ಕೆಲವು ಮಾನ್ಯ ಸದಸ್ಯರು ನೋಡಿರಬಹುದು. ಎಲ್ಲ ಕನ್ನಡಿಗರ ಪರವಾಗಿರುವ ಜವಾಬ್ದಾರಿ ಮಂತ್ರಿಗಳು ಎಲ್ಲೆಲ್ಲಿ ಏನೇನು ಕೊರತೆಯಿದೆಯೋ ಅದನ್ನು ಸರಿಪಡಿಸತಕ್ಕದ್ದು ಅಗತ್ಯ. ರಸ್ತೆಗಳು ಸರಿಯಾಗಿ ಇರುವ ಮೂಲಕ ಸೇತುವೆಗಳು ಇರದೇ ಇರುವುದರಿಂದ ಉತ್ತರ ಕರ್ನಾಟಕ ಪ್ರದೇಶದಲ್ಲಿ ಮಳೆಗಾಲದಲ್ಲಿ ಪ್ರವಾಸ ಮಾಡುವುದು ಶಕ್ಯವಿಲ್ಲ. ಇಂಥ ಪರಿಸ್ಥಿತಿ ಅಲ್ಲಿದೆ. ಗುಲಬರ್ಗಾದಿಂದ ಬಿಜಾಪೂರ ವರೆಗೆ ರಸ್ತೆಯ ರಚನೆಯ ಕಾರ್ಯವನ್ನು ಪ್ರಾರಂಭಿಸಿ ಒಂದು ಮೈಲು ರಸ್ತೆಯ ಕೆಲಸ ಸಹ ಆಗಿದೆ. ವಿಶಾಲ ಕರ್ನಾಟಕದಲ್ಲಿ ಅನೇಕ ಜಟಿಲವಾದ ಸಮಸ್ಯೆಗಳಿವೆ. ದುಷ್ಕಾಳ ಪ್ರದೇಶದ ಸಮಸ್ಯೆಯಿದೆ. ಮಲೆನಾಡಿನ ಅಭಿವೃದ್ಧಿಯ ಸಮಸ್ಯೆಯಿದೆ. ಈ ರೀತಿ ಇರುವಾಗ ಉತ್ತರ ಕರ್ನಾಟಕ ಹಳೆಯ ಮೈಸೂರು ಎಂಬ ಸಂಕುಚಿತ ಮನೋಭಾವನೆಯನ್ನು ವ್ಯಕ್ತಮಾಡತಕ್ಕಂಥದ್ದು ಒಳ್ಳೆಯದಲ್ಲ. ಇವೊತ್ತು ನಮ್ಮ ದೇಶ ಸರ್ವಾಂಗ ಸುಂದರವಾಗಬೇಕಾದರೆ ಯಾವ ಯಾವ ಭಾಗದಲ್ಲಿ ಏನೇನು ಕೊರತೆಯಿದೆ ಎಂಬುದನ್ನು ನೋಡಿ ಅದನ್ನು ಸಿಗಬೇಕು. ಈ ದಿವಸ ಹಾಸನ ಮತ್ತು ಮಂಡ್ಯ ಜಿಲ್ಲೆಗಳವರು □ನಿಮ್ಮಲ್ಲಿ ತರಿ ಜಮೀನೆಷ್ಟಿದೆ□ ಎಂದು ಹೇಳುತ್ತಿದ್ದಾರೆ. ಅದಕ್ಕೆ ನಾವು "ನಮ್ಮಲ್ಲಿ ತರಿ ನೀರಾವರಿ ಎಂಬುದದು ಇಲ್ಲವೇ ಇಲ್ಲ. ಘಟಪ್ರಭಾ ಯೋಜನೆಯಿಂದ ಎರಡು ಮೂರು ಕಡೆ ಅನುಕೂಲವಾಗಬಹುದು□ ಎಂದು ಹೇಳುತ್ತಿದ್ದೇವೆ. ಈ ದಿವಸ ದುಷ್ಕಾಳ ಎಂದು ಹೇಳುವುದು ಆನಂದದ ವಿಚಾರವಲ್ಲ. ಅದು ಇಡಿಯ ನಾಡಿಗೆ ಅಪಮಾನಕರವಾದುದೆಮದು ವಿನಂತಿ ಮಾಡುತ್ತೇನೆ. ದುಷ್ಕಾಲದಿಂದ ಬಹಳ ತೊಂದರೆಯಾಗಿದೆ. ಆದುದರಿಂದ ನಮ್ರತೆಯಿಂದ ಸೂಚಿಸುವುದೇನೆಂದರೆ ಶ್ರೀ ಮುಕ್ಕಣ್ಣಪ್ಪನವರು ಹೇಳಿದಂತೆ ಹಳೆಯ ಮೈಸೂರು ಹೊಸ ಮೈಸೂರು ಎಂದು ಭೇದ ಮಾಡದೆ. ಈ ದಿವಸ ಇಡಿಯ

ಭಾರತದ ದೃಷ್ಟಿಯಿಂದ ವಿಚಾರ ಮಾಡಬೇಕು. ಹೊಸ ಮೈಸೂರೇ ಬೇರೆ ಹಳೆ ಮೈಸೂರೇ ಬೇರೆ ಎಂಬ ಭಾವನೆ ಮಾಡುವುದು ಒಂದು ಅಸಮಾಧಾನದ ಸಂಗತಿ. ಡಾ.ನಾಗರಾಜ್ ಅವರು ಹೈಕೋರ್ಟ್ ಸಲುವಾಗಿ ವಾದಮಾಡಿದರು. ಆದರೆ ಇದು ವಾದ ಮಾಡುವ ಕಾಲವಲ್ಲ. ಈ ದಿವಸ ವಿಲೀನೀಕರಣವಾದ ಮೇಲೆ ಯಾವ ಯಾವ ಭಾಗದಲ್ಲಿ ಯಾವ ಯಾವು ಪರಿಸ್ಥಿತಿಯಿದೆ ಎಂಬುದನ್ನು ನೋಡಿ ಅನೇಕರಿಗೆ ಹೀಗೆ ಇತರ ಪ್ರದೇಶಗಳ ವಿಚಾರ ತಿಳಿಯದೇ ಇರುವಾಗ ಚೆನ್ನಾಗಿ ವಿಷಯ ತಿಳಿದಿರುವ ವ್ಯಕ್ತಿಗಳ ಅವಶ್ಯಕತೆಯಿದೆ. ಯಾರಿಗೆ ಅನುಭವವಿದೆಯೋ ಅವರಿಗೆ ಅವಕಾಶ ಕೊಡಬೇಕು. ಶ್ರೀಮರಿಯಪ್ಪನವರು ಬಹಳ ದಿವಸಗಳಿಂದ ಹಣಕಾಸಿನ ಸಚಿವರಾಗಿ ಕೆಲಸ ಮಾಡುತ್ತಿದ್ದಾರೆ. ಶ್ರೀಕಂಠಿಯವರು ಮುಂಬಯಿಯಲ್ಲಿ ಕೆಲಸ ಮಾಡಿ ಅನುಭವ ಪಡೆದುದ್ದರಿಂದ ಒಂದು ಪ್ರೇಮದಿಂದ ಅವರನ್ನು ಇಲ್ಲಿ ಅಧ್ಯಕ್ಷರನ್ನಾಗಿ ಇಲ್ಲಿ ಆರಿಸಿರುವರು. ಹಾಗಿರುವಾಗ ಹಳೆಯ ಮೈಸೂರು, ಮುಂಬಯಿ ಪ್ರದೇಶ ಎಂದು ಭೇದ ಭಾವವನ್ನು ತೋರುವುದು ಸೂಕ್ತವಲ್ಲ ಎಂದು ನಮ್ರತೆಯಿಂದ ಹೇಳುತ್ತಿದ್ದೇನೆ. ಎರಡನೆಯದಾಗಿ ಗುಲ್ಬರ್ಗ ಕಡೆ ಕೆಲವು ನೀರಾವರಿ ಯೋಜನೆ ಕೈಕೊಂಡಿರುವುದು ಬಹಳ ಸೂಕ್ತವಾಗಿದೆ. ಇದು ಹಿಂದುಳಿದ ಭಾಗ. ದುಷ್ಕಾಲ ಪರಿಸ್ಥಿತಿಯಿಂದ ಈ ಭಾಗಗಳ ಕಡೆ ಹೆಚ್ಚು ಗಮನ ಅವಶ್ಯಕ. ಟೀಕೆ ಮಾಡಬೇಕಾದರೆ ಗಾಂಭೀರ್ಯದಿಂದ ಮಾಡಬೇಕೆ ಹೊರತು ಟೀಕಿಸಲು ಹಕ್ಕಿದೆ ಎಂದು ಸುಮ್ಮನೆ ಟೀಕಿಸಿದರೆ ಈ ಸಭೆಯ ಗೌರವಕ್ಕೆ ಕುಂದು ಬರುತ್ತದೆ. ಈ ದಿವಸ ಪರದೇಶದ ಅನೇಕ ಮಂದಿ ಅಸೆಂಬ್ಲಿಗೆ ಬಂದು ನೋಡುವಾಗ ಸರಿಯಾಗಿ ಟೀಕೆ ಮಾಡದಿದ್ದರೆ ಸಭೆಯ ಘನತೆಗೆ ಧಕ್ಕೆ ಬರುತ್ತದೆ. ಈಗ ರಾಜ್ಯ ದೊಡ್ಡದಾಗಿ 19 ಜಿಲ್ಲೆಗಳನ್ನೊಳಗೊಂಡಿದೆ. ಅಂಕಿ ಸಂಖ್ಯೆಗಳನ್ನು ಕೊಟ್ಟು ಸರಿಯಾಗಿ ಟೀಕಿಸುವುದು ಸೂಕ್ತ. ನಮ್ಮ ಬಿಜಾಪೂರ ಜಿಲ್ಲೆಯಲ್ಲಿ ಬಹಳ ತೊಂದರೆಯಿದೆ. ಅಲ್ಲಿಗೆ ಹೆಚ್ಚು ಗಮನ ಕೊಡಬೇಕು. ಹಿಂದಿನಂತೆ ಅಲಕ್ಷಿಸಬಾರದು. ಅಲ್ಪ ಸ್ವಲ್ಪ ಅನುಕೂಲ ಮಾಡಿದ್ದರೂ ವಿಶೇಷ ರೀತಿಯ ಸೌಲಭ್ಯವೇನು ಕಲ್ಪಿಸಿಲ್ಲ. ಮುಂಬಯಿ ರಾಜ್ಯದಲ್ಲಿದ್ದಾಗ ಬಿಜಾಪೂರ ಜಿಲ್ಲೆಯನ್ನು ಅಲಕ್ಷ್ಯ ಮಾಡಿದ್ದರೂ ಆದರೆ ಮೈಸೂರು ರಾಜ್ಯ ಅಲಕ್ಷ್ಯ ಮಾಡಿಲ್ಲ. ಅದರ ಸಲುವಾಗಿ ಎಲ್ಲಾ ಮಂತ್ರಿಗಳಿಗೂ ಮನ್ನಿಸುತ್ತೇನೆ. ಬಿಜಾಪೂರ ಜಿಲ್ಲೆಯ ಮಟ್ಟಿಗೆ ಹೇಳುವುದಾದರೆ ಸರ್ಕಾರದವರು ಯಾವ ಸುಧಾರಣೆ ಮಾಡಿದರೂ ಅನ್ನದ ಸಮಸ್ಯೆ ಬಿಡಿಸದ ಹೊರತು ಯಾವ ಸಮಸ್ಯೆಯು ಪರಿಹಾರವಾಗುವುದಿಲ್ಲ. ಈ ದಿವಸ ಎಷ್ಟೇ ವಿದ್ಯಾಸುಧಾರಣೆ ಮಾಡಿದರೂ ಕಾಲೇಜು ತೆರೆದರೂ ಬಡ ರೈತನ ಮಗ ಕಾಲೇಜಿಗಾಗಲಿ, ಮಾಧ್ಯಮಿಕ ಶಾಲೆಗಳಿಗಾಗಲಿ ಬರಲಾರ: ಪ್ರೈಮರಿ ಶಾಲೆಗೆ ಬರಲು ಕೂಡ ಶಕ್ಯವಿಲ್ಲ. ಅಂಥ ತೊಂದರೆಯಿರುವಾಗ ಬೇಕಾದ ಕಡೆ

ಬೇಕಾದ ಅನುಕೂಲ ಮಾಡಬೇಕು. ಅಪ್ಪರ್ ಕೃಷ್ಣಾ ಪ್ರಾಜೆಕ್ಟ್ ಆಗಬೇಕು. ಡೋಣಿ ರಿವರ್ ಎಷ್ಟೋ ವರ್ಷಗಳಿಂದ ಪರಿಶೀಲನೆಯಲ್ಲಿದೆ ಅದನ್ನು ತೀವ್ರವಾಗಿ ಮಾಡಬೇಕು.

ಇನ್ನೊಂದು ಮಾತು ಬಿಜಾಪೂರ ಜಿಲ್ಲೆಯನ್ನು ಅನೇಕರು ನೋಡಿಲ್ಲ. ಅಲ್ಲಿನ ಮಣ್ಣು ಫಲವತ್ತಾಗಿದೆ. ಅಲ್ಲಿ ಐದು ಹೊಳೆಗಳು ಹರಿದರೂ ನೀರಾವರಿ ಸೌಕರ್ಯವಿಲ್ಲ. ನೀರು ಸುಮ್ಮನೆ ಸಮುದ್ರಕ್ಕೆ ಹೋಗಿ ಸೇರುತ್ತವೆ. ಈ ನೀರನ್ನು ಕೃಷಿಕಾರ್ಯಕ್ಕೊದಗಿಸಲು ಅನುಕೂಲ ಕಲ್ಪಿಸಿದರೆ ನಮ್ಮ ನಾಡು ಸರ್ವಾಂಗ ಸುಂದರವಾಗುತ್ತದೆ. ಜಿಲ್ಲೆಯಲ್ಲಿ ಈಗ ಶೇಂಗಾ ಬೆಳೆಯುತ್ತಾರೆ. ಒಬ್ಬ ಡೆಪ್ಯೂಟಿ ಕಮಿಷನರು ಅದನ್ನು ತಪಾಸು ಮಾಡಿದ್ದರಿಂದ ಈಗ ನೆಲಗಡಲೆಕಾಯಿ ಬೆಳೆದು ಹತ್ತು ಲಕ್ಷ ರೂಪಾಯಿಗಳನ್ನು ಹೆಚ್ಚು ಉತ್ಪತ್ತಿ ಪಡೆದಿದ್ದಾರೆ. ರೈತರಿಗೆ ಪ್ರಯೋಗ ಮಾಡುವುದು ಗೊತ್ತಿಲ್ಲ. ಆದುದರಿಂದ ರೈತರನ್ನು ಉಪೇಕ್ಷೆ ಮಾಡದೆ ಪ್ರತಿಯೊಬ್ಬ ಆಫೀಸರೂ ಸ್ಥಳಕ್ಕೆ ಹೋಗಿ ಯಾವ ಭೂಮಿಯಲ್ಲಿ ಏನು ಬೆಳೆ ಬೆಳೆಯುವುದು ಸೂಕ್ತ ಎಂಬುದನ್ನು ಪರಿಶೀಲಿಸಿ ರೈತರಿಗೆ ತಿಳಿಸಬೇಕು.

ಈಗ ಅನೇಕ ಕಡೆ ಕುಡಿಯುವ ನೀರಿನ ತೊಂದರೆ ಇದೆ. ಈ ದಿವಸ 15 ಸಾವಿರ ಜನರಿಗೆ ಒಂದು ದವಾಖಾನೆ ತೆರೆಯುವುದಾಗಿ ರಾಜ್ಯಪಾಲರ ಭಾಷಣದಲ್ಲಿ ಹೇಳಿದ್ದಾರೆ. ಬಿಜಾಪೂರ ತಾಲ್ಲೂಕಿನ ಕಡೆ ಒಂದು ಲಕ್ಷ ಐವತ್ತು ಸಾವಿರ ಜನರಿಗೆ ಒಂದು ದವಾಖಾನೆಯಿದೆ. ಜನಸಂಖ್ಯೆ ಈಗ ಹೆಚ್ಚಿದೆ. ಅದಕ್ಕೆ ತಕ್ಕ ವ್ಯವಸ್ಥೆಯಾಗಬೇಕು. ತೆರಿಗೆ ಹಾಕುವುದು ಬೇಡ. ಹರಿಜನರನ್ನು ಉದ್ಧಾರ ಮಾಡಬೇಕು. ಶಿಕ್ಷಣ ಸೌಕರ್ಯ ಹೆಚ್ಚಬೇಕು ಎಂದು ಹೇಳುತ್ತಿದ್ದಾರೆ. ಅದಕ್ಕೆ ರೊಕ್ಕವೆಲ್ಲಿಂದ ಬರಬೇಕು! ರೊಕ್ಕ ಬರಲು ಅವಕಾಶ ಮಾಡಿಕೊಟ್ಟು ಮಂತ್ರಿಗಳು ಬೇಕಾದ ಸೌಕರ್ಯ ಕಲ್ಪಸಬೇಕೆಂದು ಹೇಳಿದರೆ ಅದು ಸೂಕ್ತವಾದುದು.

ಕುಡಿಯುವ ನೀರಿನ ಸಲುವಾಗಿ ಬಾವಿಗಳನ್ನು ಕೊಡಸಲು ತಹಸೀಲ್‌ದಾರರಿಗೆ ರೆವಿನ್ಯೂ ಮಿನಿಸ್ಟರು ಹುಕುಂ ಕೊಟ್ಟು, ನೀರಿನ ಸಮಸ್ಯೆಯನ್ನು ಬರೆಹರಿಸಬೇಕೆಂದು ವಿನಂತಿ ಮಾಡಿಕೊಳ್ಳುತ್ತೇನೆ.

ಪ್ರೈಮರಿ ಶಿಕ್ಷಣದ ವಿಚಾರದಲ್ಲಿ ಒಂದು ಮಾತನ್ನು ಹೇಳಬೇಕಾಗಿದೆ. ಎಲ್ಲಿ ನೋಡಿದರೂ ಎನ್.ಇ.ಎಸ್.ಬಿಲ್ಡಿಂಗ್‌ಗಳು ಸಾಕಷ್ಟಿವೆ. ಆದರೆ ಪ್ರೈಮರಿ ಶಿಕ್ಷಣವನ್ನು ಕೊಡುವ ಶಿಕ್ಷಕರಿಗೆ ಮನೆಗಳ ಅನುಕೂಲವನ್ನು ಕಲ್ಪಿಸಿಲ್ಲ. ಇವೊತ್ತು ಕಾಲೇಜುಗಳನ್ನು ಹೆಚ್ಚು ಮಾಡುತ್ತಿದ್ದೀರಿ. ಆದರೆ ಫೌಂಡೇಷನ್ ಚಲೋ ಇಲ್ಲದಿದ್ದರೆ ಕಾಲೇಜು ಶಿಕ್ಷಣ ಸಮರ್ಪಕವಾಗುವುದಿಲ್ಲ. ಪ್ರೈಮರಿ ಶಿಕ್ಷಣದ ಬಿಲ್ಡಿಂಗುಗಳು

ಆಗುತ್ತಿವೆ. ಆದರೆ ಆ ಶಿಕ್ಷಕರಲ್ಲಿ ಯಾವ ತರಹದ ಜ್ಞಾನ ಬೇಕೋ ಅದು ಇಲ್ಲದಿರುವುದರಿಂದ ಇವೊತ್ತು ಗ್ರಾಜುಯೇಟ್ ಸರ್ಟಿಫಿಕೇಟ್ ತೆಗೆದುಕೊಂಡರೂ ಗ್ರಾಜುಯೇಟ್‌ಗಳಿಗೆ ಉತ್ತಮ ಪತ್ರ ಬರೆಯುವುದಕ್ಕೆ ಬರುವುದಲ್ಲ. ಆದರೂ ಇವೊತ್ತು ಕಾರ್ಕೂನ್, ಡಿ.ಸಿ. ಆಗಿದ್ದಾರೆ. ಅವರಿಗೆ 30 ವರ್ಷಸರ್ವಿಸ್ ಆಗಿದ್ದರೂ ಒಂದು ನೋಟ್ ಹಾಕುವುದಕ್ಕೆ ಬರುವುದಿಲ್ಲ. ಈ ದೃಷ್ಟಿಯಿಂದ ರಾಜ್ಯದ ಯಂತ್ರ ತೊಡಕಾಗಿದೆ. ಈಗ ಅವರನ್ನು ಸರಕಾರದವರು ನೇಮಿಸಿಕೊಂಡು ಬಿಟ್ಟಿದ್ದಾರೆ. ಅವರನ್ನು ತೆಗೆಯುವುದಕ್ಕೆ ಬರುವುದಿಲ್ಲ. ಆದುದರಿಂದ ಉಪಾಧ್ಯಾಯರಿಗೆ ಪುನಃ ಒಂದು ಟೆಸ್ಟ್ ಮಾಡಿ ಉತ್ತಮ ಶಿಕ್ಷಣ ಕೊಡಬೇಕು. ಒಬ್ಬ ಶಿಕ್ಷಕರಿಗೆ 30 ಹುಡುಗರನ್ನು ಮಾತ್ರ ಕೊಡಬೇಕು. ಹಳ್ಳಿ ಊರೊಳಗೆ ಬಹಳ ಶಿಕ್ಷಕರಿಗೆ ಜಾಗ ಇರುವುದಿಲ್ಲ. ಹರಿಜನರಿಗೆ ಜಾಗ ಸಿಕ್ಕುವುದಿಲ್ಲ. ಊರೊಳಗೆ ಇವರನ್ನು ಬರಗೊಡುವುದಿಲ್ಲ. ಸ್ಕೂಲುಗಳಿಗೆ ಕಟ್ಟಡಗಳಿಲ್ಲದಿದ್ದರೂ ಪರವಾಗಿಲ್ಲ. ಹಿಂದೆ ಋಷಿಗಳ ಕಾಲದಲ್ಲಿ ಗಿಡಗಳ ಕೆಳಗೆ ಶಾಲೆಗಳನ್ನು ಆಗ ಮೇಜು ಖುರ್ಚಿ ಇರಲೇ ಇಲ್ಲ. ಆದರೆ ಈ ಆಗಲ್ಲ ಮೈಲುಗಳ ದೂರದಿಂದ ಸ್ಕೂಲುಗಳಿಗ ಬರುತ್ತಾರೆ. ಅವರಿಗೆ ಪಾಠ ಹೇಳುವುದಕ್ಕೆ ಎನರ್ಜಿಯೇ ಇರುವುದಿಲ್ಲ. ಎಂ.ಬಿ.ಬಿ.ಎಸ್. ಇಂಜಿನಿಯರಿಂಗ್ ಮುಂತಾದವುಗಳಿಗೆ ಪ್ರೈಮರಿ ಎಜುಕೇಷನ್ನೇ ಫೌಂಡೇಷನ್ ಅಂಥ ಪ್ರೈಮರಿ ಎಜುಕೇಷನ್ ಇವೊತ್ತು ಅತ್ಯಂತ ಹೀನ ಸ್ಥಿತಿಯಲ್ಲಿದೆ. ಶಿಕ್ಷಕರಿಗೆ ಒಂದು ಟೆಸ್ಟ್ ಮಾಡಿ ಅವರನ್ನು ಮೂವತ್ತು ವರ್ಷಗಳ ವರೆಗೂ ಇಟ್ಟುಕೊಳ್ಳಬಹುದು. ಇವೊತ್ತು ಗವರ್ನ್‌ಮೆಂಟ್ ಬಡ್ಜೆಟ ಕೊಟ್ಟರೆ ಆಗುವುದಿಲ್ಲ. ಶಿಕ್ಷಕರಿಗೆ ಹೆಚ್ಚಿನ ಶಿಕ್ಷಣ ಕೊಡಬೇಕು.

ಪಿ.ಡಬ್ಲ್ಯೂ ಮಿನಿಸ್ಟರಿಗೂ ಮಂತ್ರಿಮಂಡಲಕ್ಕೂ ಒಂದು ಸೂಚನೆಯನ್ನು ಕೊಡುತ್ತೇನೆ. ನಮ್ಮ ಬಿಜಾಪೂರ ಜಿಲ್ಲೆ ಮುಂಬಯಿನಿಂದಲೂ ದೂರ ಇತ್ತು. ಇವತ್ತು ಬೆಂಗಳೂರಿನಿಂದಲೂ ದೂರ ಇದೆ. ಇಲ್ಲಿಗೆ ಬರಬೇಕಾದರೆ 23 ತಾಸು ಇಡಿಯುತ್ತದೆ. ಆದುದರಿಂದ ಹುಲಿಕಲ್ಲ ಮೇಲೆ ಒಂದು ಷಾರ್ಟ್-ಕಟ್ ದಾರಿ ಮಾಡಿದರೆ, ನೂರು ಮೈಲು ಉಳಿಯುತ್ತದೆ. ರಾಜಧಾನಿಗೆ ಬಿಜಾಪೂರ ದೂರವಿರುವುದರಿಂದ ಈ ಒಂದು ಷಾರ್ಟ್-ಕಟ್ ದಾರಿಯನ್ನು ಮಾಡುವ ಯೋಜನೆ ಮಾಡಬೇಕು.

ಹೈದ್ರಾಬಾದ ರಾಜ್ಯದೊಳಗೆ ನವಾಬರು ಕುಡಿಯುವ ನೀರಿನ ಸಮಸ್ಯೆಯನ್ನು ಬಿಡಿಸಿ ಬಿಟ್ಟಿದ್ದರು. ಹರಿಜನರಿಗೆ ಒಂದು ಬೇರೆಯವರಿಗೆ ಒಂದು ಎಂದು ಎರಡು ಬಾವಿಗಳನ್ನು ಮಾಡಿದ್ದರು. ಎನ್.ಇ.ಎಸ್.ಸ್ಕೀಮ್ ಪ್ರಕಾರ ಬಾವಿಗಳಾಗುತ್ತಿವೆ. ಆದರೆ ಕಂಟ್ರಿಬ್ಯೂಷನ್ ಕೊಡದದೆ ಇರುವ ಕಡೆ ಅವು ಹಾಗಿಲ್ಲ.

ಇಡಿಯ ಮೈಸೂರು ರಾಜ್ಯದೊಳಗೆ ತಪಾಸ್‌ಮಾಡಿ ಕುಡಿಯುವ ನೀರಿನ ಕಷ್ಟವನ್ನು ಬಿಡಿಸಬೇಕು. ನನ್ನ ತಾಲೂಕಿನಲ್ಲಿ ಹಿಂದೆಯೂ ಕಂಟ್ರಿಬ್ಯೂಷನ್ ಕೊಟ್ಟಿಲ್ಲ. ಈಗಲೂ ಕೊಡುವುದಕ್ಕೆ ಶಕ್ಯವಿಲ್ಲ. ಕಣ್ಣು ಗುಡ್ಡಹಾಳ್ ಮತ್ತು ವಡಗಾವ್ ಹಳ್ಳಿ ಎಂಬುದು ಅತ್ಯಂತ ಸಣ್ಣ ಹಳ್ಳಿಗಳು. ಈ ಹಳ್ಳಿಗಳಲ್ಲಿ ಕುಡಿಯುವುದಕ್ಕೆ ನೀರಿಲ್ಲ. ಆದುದರಿಂದ ಈ ಹಳ್ಳಿಗಳಿಗೆ ಹೆಡ್‌ಕಾನ್‌ಸ್ಟೇಬಲ್ ಕೂಡ ಬರುವುದಿಲ್ಲ. ಆಫೀಸರುಗಳು ಅವರಲ್ಲಿಗೇ ಡೈರಿ ತರಿಸಿಕೊಂಡು ಬರೆಯುತ್ತಾರೆ. ಎಲ್.ಎಸ್.ಜಿ.ಮಿನಿಸ್ಟರು ತಪಾಸುಮಾಡಿ ಸಾಧ್ಯವಾದರೆ ಬಾವಿಗಳನ್ನು ತೆಗೆಸಬೇಕು. ಮೂರು ಸಾವಿರಕ್ಕಿಂತ ಹೆಚ್ಚಿಗೆ ಹಣ ಬೀಳುವುದಿಲ್ಲ.

ಇನ್ನೊಂದು ಮಹತ್ವದ ಮಾತು. ಬಿಜಾಪೂರ ಜಿಲ್ಲೆಯ ವಿಚಾರವನ್ನೇ ಹೇಳುತ್ತಿಲ್ಲ. ಇದು ಇಡಿಯ ರಾಜ್ಯದ ಸಮಸ್ಯೆ. ಹಳೆಯ ಮೈಸೂರು ಹೊಸ ಮೈಸೂರಿನಲ್ಲೇ ಆಗಬೇಕೆಂದು ಹೇಳುತ್ತಿಲ್ಲ. ಕೋಲಾರ ಜಿಲ್ಲೆ, ಬಿಜಾಪೂರ ಜಿಲ್ಲೆ ,ಮಂಡ್ಯ ಜಿಲ್ಲೆ ಎಲ್ಲಿ ಬೇಕಾದರೂ ಆಗಬಹುದು. ಮುಖ್ಯವಾಗಿ ಕನ್ನಡ ರಾಜ್ಯ ಆಹಾರ ವಿಷಯದಲ್ಲಿ ಸ್ವಾವಲಂಬನವಾಗಬೇಕು. ಬಿಜಾಪೂರ ಜಿಲ್ಲೆ ಚಲೋ ಇದ್ದರೆ ಅದನ್ನು ಎಕ್ಸಾಮಿನ್ ಮಾಡಿ ಯೋಗ್ಯವಾದ ಸಾಯಿಲ್ ಎಲ್ಲಿದ್ದರೂ ಎಕ್ಸಾಮಿನ್ ಮಾಡಿ ಬಿಜಾಪೂರದ ಮಣ್ಣು ಸರ್ವೋತ್ಕೃಷ್ಟವಾದುದು, ಫಲವತ್ತಾದುದು ಎಂದು ಎನಿಸಿದರೆ ಎಕ್ಸಾಮಿನ್ ಮಾಡಿ ನೀರಾವರಿಗೆ ತಯಾರಾಗಬೇಕು. ಫೈನಾನ್ಸ್ ಮಿನಿಸ್ಟರಿಗೆ ಹಣ ಒದಗಿಸಲು ಎಷ್ಟು ತೊಂದರೆ ಇದೆ. ಅವರು ಬಜೆಟ್ ಸರಿದೂಗಿಸಲು ಹೇಗೆ ಹಣ ತರಬೇಕೆಂಬ ವಿಚಾರದಲ್ಲಿ ಯಾರೂ ಮಾತನಾಡಲಿಲ್ಲ. ನಾನು ಕಾಂಗ್ರೆಸ್‌ನಲ್ಲಿದ್ದೇನೆಂದು ಹೀಗೆ ಹೇಳುತ್ತಿಲ್ಲ. ಫೈನಾನ್ಸ್ ಮಿನಿಸ್ಟರು ಬೊಂಬಾಯಿ ಕರ್ನಾಟಕದವರೇ ಆಗಿರಲಿ, ಈ ರಾಜ್ಯವನ್ನು ಸುಂದರವಾಗಿ ನಡೆಸುವ ಸಲುವಾಗಿ ನಾವು ಪ್ರಯತ್ನ ಮಾಡೋಣ. ಮೊನ್ನೆ ವಿರೋಧ ಪಕ್ಷದ ಸದಸ್ಯರು ಟೀಕೆ ಮಾಡುವ ಕಾಲಕ್ಕೆ ಟೀಕೆ ಮಾಡುವ ಹಕ್ಕಿದೆ ಎನ್ನುವ ದೃಷ್ಟಿಯಿಂದ ಟೀಕೆ ಮಾಡಿದ್ದಾರೆ. ನಮ್ಮ ರಾಜ್ಯದ ಮಂತ್ರಿಮಂಡಲವನ್ನು ಮಾಡುವಾಗ ಅದು ಕೆಲಸ ಮಾಡುವ ಸಲುವಾಗಿ ಸೂಕ್ತ ಸಲಹೆಗಳನ್ನು ಕೊಡಬೇಕು. ಮಲ್ಲಿಕಾರ್ಜುನ ಸ್ವಾಮಿಗಳು ಮಂತ್ರಿಮಂಡಲದ ಬಗ್ಗೆ ಒಂದು ಮಾತನ್ನು ಹೇಳಿದರು. ಮುಖ್ಯಮಂತ್ರಿತ್ವ ಯಾರದೂ ಅಲ್ಲ. ಮುಖ್ಯಮಂತ್ರಿಗಳನ್ನು ಮಾಡುವವರು ನಾವೇ, ಇಳಿಸುವವರು ನಾವೇ. ನಮ್ಮಲ್ಲಿ ದೋಷವಿದೆ. ಮಂತ್ರಿಮಂಡಲವನ್ನು ಆಗಾಗ್ಗೆ ಬದಲಾಯಿಸುವ ರೋಗ ಮೆಂಬರುಗಳಲ್ಲಿ ಇದೆ. ಮಲ್ಲಿಕಾರ್ಜುನ ಸ್ವಾಮಿಗಳು ಒಂದು ಚಲೋ ಔಷಧಿ ಕೊಟ್ಟು ಈ ಮೆಂಬರುಗಳ ರೋಗವನ್ನು ತೆಗೆಯುವ ಹಾಗೆ ಮಾಡಿದರೆ ಒಳ್ಳೆಯದು.

# ಪ್ರವಾಹ ಪೀಡಿತರ ಕುರಿತು

27ನೇ ಜುಲೈ 1961

**ಶ್ರೀ ಎಸ್.ವೈ. ಪಾಟೀಲ** – ಮಾನ್ಯ ಅಧ್ಯಕ್ಷರೆ, ಇವೊತ್ತಿನ ದಿವಸದ ಪ್ರವಾಹದ ಪರಿಸ್ಥಿತಿಯಿಂದ ಅತ್ಯಂತ ತೊಂದರೆಗೊಳಗಾದವರಿಗೆ ಸಹಾಯವನ್ನು ಕೊಡುವುದಕ್ಕೆ ಎಷ್ಟು ಶಕ್ಯವೋ ಕೊಡುವುದಕ್ಕೆ ಪ್ರಯತ್ನ ಮಾಡಿದ್ದಕ್ಕಾಗಿ ಅವರನ್ನು ಅಭಿನಂದಿಸಿ, ಇನ್ನೂ ಮಾಡಬೇಕಾದ ಕೆಲಸ ಬಹಳ ಇದೆಯೆಂದು ಹೇಳುತ್ತೇನೆ.

ಸಾಧಾರಣವಾಗಿ ಸಂಸ್ಥಾನಗಳ ಅನೇಕ ಸ್ಥಳಗಳ ಸ್ಥಿತಿಯ ಬಗ್ಗೆ ಮಾನ್ಯ ಸದಸ್ಯರೇಕರು ಸಾಕಷ್ಟು ಹೇಳಿದ್ದಾರೆ. ಬಾಕಿ ಜಿಲ್ಲೆಗಳ ವಿಚಾರ ಹೇಳುವುದಕ್ಕೆ ಸಮಯವಿಲ್ಲದಿರುವುದರಿಂದ ನಮ್ಮ ಜಿಲ್ಲೆಯ ಮಟ್ಟಿಗೆ ಹೇಳುತ್ತಾ ಇದ್ದೇನೆ. ಮುಖ್ಯವಾಗಿ ಬಿಜಾಪುರ ಜಿಲ್ಲೆಯ ತಂಗಡಗಿ ಮಧ್ಯೆ ಅನಾಹುತವಾಗಿ ಎಷ್ಟೋ ಜನ ಪ್ರಾಣ ಕಳೆದುಕೊಂಡಿದ್ದಾರೆ. ಬಗ್ಗೆ ಬರಿಯ ದುಃಖ ಸೂಚಿಸಿದರೆ ಸಾಲದು. ಬಿಜಾಪೂರ ಜೊರಾಪುರ ಮಧ್ಯೆ ಬ್ರಿಡ್ಜ್ ಮಾಡಿಕೊಡಬೇಕೆಂದು ನಾನು ಮಂಡನೆ ಮಾಡುತ್ತೇನೆ.

ಎರಡನೇಯ, ಸಿಂದಗಿ ಎನ್ನುವ ಸ್ಥಳದಿಂದ ಇಂಡಿಗೆ ಎನ್ನುವ ಸ್ಥಳಕ್ಕೆ ಹೋಗುವ ರಸ್ತೆಯಲ್ಲಿ ಒಂದು ಸೇತುವೆ ಬರುತ್ತದೆ. ಇಲ್ಲಿ ಡೋಣಿ ನದಿಯ ನೀರು ಬರುತ್ತದೆ. ಹಾಗೂ ಭೀಮಾ ನದಿಯ ನೀರೂ ಬರುತ್ತದೆ. ಹಿಂದೆ ಈ ನದಿಗಳು ಪ್ರವಾಹದಿಂದ ತುಂಬಿದ್ದಾಗ ಎಷ್ಟೋ ಜನ ತಮ್ಮ ಆಸ್ತಿ ಪಾಸ್ತಿಗಳನ್ನು ಮತ್ತು ದನಕರುಗಳನ್ನು ಕಳೆದುಕೊಂಡಿದ್ದಾರೆ. ಆದರೆ ಈ ಸಾರಿ ಪ್ರವಾಹ ಬರುವುದಕ್ಕೆ ಮುಂಚೆ ಈ ನದಿಯ ದಂಡೆಯಲ್ಲಿದ್ದ ಊರುಗಳ ಜನರು ಬೇರೆ ಕಡೆಗೆ ಬಂದಿದ್ದರಿಂದ ಅಷ್ಟು ಅನಾಹುತವಾಗಲಿಲ್ಲ. ಅವರುಗಳಿಗೆ ಸರಕಾರದ ಕಡೆಯಿಂದ ಸಾಲುಗಳನ್ನು ಕೊಟ್ಟರೆ ಅನುಕೂಲವಾಗುತ್ತದೆ. ಅದರಲ್ಲೆಯೂ 20–30 ಹಳ್ಳಿಗಳ ಜನಕ್ಕೆ ಬಹಳ ತೊಂದರೆಯಾಗಿದೆ. ಬಾಗೇವಾಡಿಯ ಬಳಿ ಇರುವ ಕೆಲವು ಹಳ್ಳಿಗಳು ಮತ್ತು ಡೋಣಿ ನದಿಯ ದಂಡೆಯಲ್ಲಿರುವ ಕೆಲವು ಹಳ್ಳಿಗಳಲ್ಲಿದ್ದ ಜನ ಮುಂಚಿತವಾಗಿಯೇ ಮುನ್ನೆಚ್ಚರಿಕೆ ವಹಿಸಿ ಊರು ಬಿಟ್ಟು ಬೇರೆ ಕಡೆಗೆ ಹೋಗಿದ್ದಾರೆ. ಇಂತಹ ಜನಕ್ಕೆ ಸುಮಾರು 20–30 ಲಕ್ಷ ರೂಪಾಯಿಗಳನ್ನು ಹಣವನ್ನು ಸಾಲವಾಗಿ ಕೊಟ್ಟಿದ್ದಾರೆ. ಇಲ್ಲಿರುವ ಪರಿಜನರು ವಸತಿ ಮಾಡಿಕೊಳ್ಳಲು ಗಾವಠಾಣ ಕೊಟ್ಟಿದ್ದಾರೆ. ಸುದೈವದಿಂದ ಈ ಹಳ್ಳಿಗಳ ಜನರನ್ನು, ನದಿಗಳಲ್ಲಿ ಪ್ರವಾಹ ಬರುವ ಮುನ್ನ ಬೇರೆ ಕಡೆಗೆ ಹೋಗುವಂತೆ ಅವಕಾಶ ಮಾಡಲು ನಮ್ಮ ಜಿಲ್ಲೆಯ ಜಿಲ್ಲಾಧಿಕಾರಿಗಳು, ನಾನು ಮತ್ತು ಸುರಪುರ ಅವರು ಎಲ್ಲರೂ ಹೋಗಿ ಸಹಾಯ ಮಾಡಿದುದರಿಂದ ಹೊಳೆಯಲ್ಲಿ ಹೆಚ್ಚು ನೀರು ಬಂದರೂ ಅವರಿಗೆ ಏನೂ ತೊಂದರೆಯಾಗಲಿಲ್ಲ. ಆದುದರಿಂದ ಇನ್ನು ಮುಂದೆ ಪ್ರವಾಹದ ದೆಸೆಯಿಂದ ಜನಗಳಿಗೆ

ತೊಂದರೆಯಾಗದಂತೆ ಸರಿಯಾಗಿ ನೋಡಿಕೊಳ್ಳಬೇಕು ಮತ್ತು ಈ ಬಡಜನರಿಗೆ ಸಹಾಯ ಮಾಡಬೇಕು ಎಂದು ಇಲ್ಲಿ ಹೇಳುತ್ತೇನೆ. ಹಣವಂತರ ಸ್ಥಿತಿ ಹೇಗೋ ಆಗುತ್ತದೆ. ಬಡವರಾಗಿರುವ ಈ ಜನಕ್ಕೆ ಸಾಲವನ್ನು ಕೊಟ್ಟು ಇವರನ್ನು ಸುಧಾರಿಸಲಿಕ್ಕೆ ತಕ್ಕ ಪ್ರಯತ್ನ ಮಾಡಬೇಕು. ಡೋಣಿ ನದಿಯ ಪ್ರವಾಹದಿಂದ ಎಷ್ಟೋ ಜನ ಮನೆಗಳನ್ನು ಕಳೆದುಕೊಂಡಿದ್ದಾರೆ. ಅವರಿಗೆ ಬೇರೆ ಕಡೆಗಳಲ್ಲಿ ತಂಗಲು ತಕ್ಕ ವ್ಯವಸ್ಥೆ ಮಾಡುವುದು ಅಗತ್ಯ. ಬಳ್ಳಾರಿ ಸೋಲಾಪುರ ರಸ್ತೆ ಬಹಳ ದೊಡ್ಡದು. ಈಗ ಇದು ಹಾಳಾಗಿ ಹೋಗಿದೆ. ಸರಕಾರದವರು ಇದನ್ನು ಕೂಡಲೇ ಸರಿಪಡಿಸಬೇಕು. ಮತ್ತು ಈ ಬಿಜಾಪೂರ ಜಿಲ್ಲೆಗೆ ಸೌಕರ್ಯ ಮಾಡಿಕೊಡಬೇಕು. ಇದರ ಕಡೆಗೆ ಸರಕಾರ ತೀವ್ರ ಲಕ್ಷ್ಯ ಕೊಟ್ಟು, ತೊಂದರೆಗೆ ಸಿಕ್ಕಿರುವ ಜನಕ್ಕೆ ತಕ್ಕ ಕೆಲಸಗಳನ್ನು ಕೊಟ್ಟು ಸಹಾಯ ಮಾಡುವ ಅವಶ್ಯಕತೆ ಇದೆ. ಇದಕ್ಕಾಗಿ ಸರಕಾರದವರು ಹಣದ ಕಡೆಗೆ ಹೆಚ್ಚಿನ ಲಕ್ಷ್ಯ ಕೊಡದೇ ವ್ಯವಹಾರಿಕ ದೃಷ್ಟಿಯಿಂದ ಇವನ್ನೆಲ್ಲಾ ಸರಿಯಾಗಿ ಪರಿಶೀಲನೆ ಮಾಡಬೇಕೆಂದು ಹೇಳಿ, ಎಷ್ಟು ಮಾತನಾಡಲು ಮಾನ್ಯ ಅಧ್ಯಕ್ಷರು ಅವಕಾಶ ಕೊಟ್ಟಿದ್ದಕ್ಕಾಗಿ ಅವರನ್ನು ವಂದಿಸಿ ನನ್ನ ನಾಲ್ಕು ಮಾತುಗಳನ್ನು ಮುಗಿಸುತ್ತೇನೆ.

# ಮೂರನೆಯ ಅವಧಿಯ ಚರ್ಚೆಗಳು–1972–1977

## ಸೇಲ್ಸ್ ಟ್ಯಾಕ್ಸ್ ಅಮೆಂಡಮೆಂಟ್ ಬಿಲ್ಲಿನಮೇಲೆ

24ನೇ ಜುಲೈ 1972

**ಶ್ರೀ ಎಸ್.ವೈ. ಪಾಟೀಲ** (ಸಿಂದಗಿ)–ಮಾನ್ಯ ಸಭಾಪತಿಗಳೇ, ಈ ಸೇಲ್ಸ್ ಟ್ಯಾಕ್ಸ್ ಅಮೆಂಡಮೆಂಟ್ ಬಿಲ್ಲಿನಮೇಲೆ ಶ್ರೀಮಾನ್ ಕೃಷ್ಣರವರು ಮಾತನಾಡುತ್ತಾ ಕೆಲವು ವಿಷಯಗಳನ್ನು ಹೇಳಿದ್ದಾರೆ. ಆದ್ದರಿಂದ ಹೆಚ್ಚು ಸಮಯ ನಾನು ತೆಗೆದುಕೊಳ್ಳದೆ ಜನರಲ್ಲಾಗಿ ಕೆಲವು ವಿಷಯಗಳನ್ನು ಅಧ್ಯಕ್ಷರ ಮೂಲಕ ಅರ್ಥ ಮಂತ್ರಿಗಳಿಗೆ ಸೂಚಿಸಬಯಸುತ್ತಿದ್ದೇನೆ. ಸಿಂಗಲ್ ಪಾಯಿಂಟ್ ಟ್ಯಾಕ್ಸ್ ಹಾಕದೆ ಮಲ್ಟಿಪಾಯಿಂಟ್ ಟ್ಯಾಕ್ಸ್ ಹಾಕಿದರೆ ತೊಂದರೆಯಾಗುವುದು. ಇದನ್ನು ಮಾನ್ಯ ಸದಸ್ಯರು ಆಗಲೆ ಹೇಳಿದ್ದಾರೆ. ಪ್ರಾರಂಭದಲ್ಲೇ ತೆರಿಗೆ ಹಾಕಿದರೆ ವ್ಯಾಪರಸ್ಥರಿಗೆ, ಸಾಧಾರಣ ಜನರಿಗೆ ತೊಂದರೆಯಾಗುವುದಿಲ್ಲ. ಇದರಿಂದ ಸರಕಾರಕ್ಕೆ ಹಣವೂ ಬರುವುದು. ಆದುದರಿಂದ ಯಾವಾಗಲೂ ಸಿಂಗಲ್ ಪಾಯಿಂಟ್ ಟ್ಯಾಕ್ಸ್ ಹಾಕಬೇಕೆಂದು ಅರ್ಥಮಂತ್ರಿಗಳಲ್ಲಿ ಪ್ರಾರ್ಥನೆ ಮಾಡುತ್ತೇನೆ. ಮಲ್ಟಿಪಾಯಿಂಟ್ ಟ್ಯಾಕ್ಸ್ ಹಾಕಲು ಸರ್ಕಾರದವರು ಪ್ರಯತ್ನ ಮಾಡಬಾರದು. ಅಧಿಕಾರಿಗಳನ್ನು ನಾನು ಟೀಕೆ ಮಾಡುವುದಿಲ್ಲ. ವರ್ತಕರು ಸಿಬ್ಬಂದಿ ಇಟ್ಟುಕೊಳ್ಳಲು ಸಾಧ್ಯವಿಲ್ಲ. ತಿಂಗಳಿಗೊಂದು ಸಲ ವರ್ತಕರು ಲೆಕ್ಕ ಕೊಡಬೇಕು. ಸರಕಾರ ತೆರಿಗೆ ವಸೂಲು ಮಾಡುವಾಗ ಜನರಿಗೆ ತೊಂದರೆಯಾಗದಂತೆ ನೋಡಿಕೊಳ್ಳಬೇಕು, ಹಾಗೆ ಮಾಡಲು ಆಗದಿದ್ದರೆ ಕಡಿಮೆ ತೊಂದರೆಯಾಗುವಂತೆ ಆದರೂ ವ್ಯವಸ್ಥೆ ಮಾಡುವುದು ಒಳ್ಳೆಯದು. ಅದು ಸರಕಾರದ ಕರ್ತವ್ಯ.

ಮುಖ್ಯವಾಗಿ ಬೆಲನಲ್ಲಿರುವಂತೆ ಐಷಾರಾಮ ವಸ್ತುಗಳೇನಿವೆ ಅವುಗಳ ಮೇಲೆ ಎಷ್ಟು ಬೇಕಾದರೂ ತೆರಿಗೆ ಹಾಕಬಹುದು, ಲಾಟರಿಯಿಂದ ಆದಾಯ ಪಡೆಯಬಹುದು. ಐಷಾರಾಮಿ ವಸ್ತುಗಳ ಮೇಲೆ ಎಷ್ಟು ತೆರಿಗೆ ಹಾಕಿದರೂ ಅಡ್ಡಿಯಿಲ್ಲ. ಇದರಿಂದ ಅಧಿಕಾರಿಗಳಿಗೂ ತೊಂದರೆ ಕಡಿಮೆಯಾಗುವುದು. ಮುಖ್ಯವಾಗಿ ಸರಕಾರ ಸಂಗ್ರಹ ಮಾಡುವ ತೆರಿಗೆ ಸಾಮಾನ್ಯ ಮನುಷ್ಯರಿಗೆ ಉಪಯೋಗವಾಗಬೇಕು. ಅವರಿಗೆ ಬೇಕಾದ ನೀರಾವರಿ ಸೌಕರ್ಯ ಮುಂತಾದುವಕ್ಕೆ ಅದನ್ನು ಖರ್ಚು ಮಾಡಬೇಕು. ಕೆಲವು ಅನೀತಿ ಜೀವನ ನಡೆಸುವುದು ಬೇಡ, ಐಷಾರಾಮಿ ವಸ್ತುಗಳ ಮೇಲೆ ಹೆಚ್ಚು ತೆರಿಗೆ ಹಾಕಿ ಬಡವರಿಗೆ ಅದು ಖರ್ಚಾಗುವಂತೆ ಮಾಡಿ, ತಿಂಗಳಿಗೊಮ್ಮೆ ಲೆಕ್ಕ ಕೊಡುವ ಏರ್ಪಾಡು ಸರಿಯಲ್ಲ, 6 ತಿಂಗಳಿಗೊಂದು ಸಲವಾದರೂ ಲೆಕ್ಕ ಕೊಡುವಂತೆ ಮಾಡಬೇಕು, ನಮ್ಮಂಥವರಿಗೆ ಲೆಕ್ಕವಿಡುವುದು ತಿಳಿಯುವುದಿಲ್ಲ, ಸಾಮಾನ್ಯ ಮನುಷ್ಯರಿಗೆ ತೆರಿಗೆ ಬೀಳುವುದು ಗೊತ್ತಾಗಬೇಕು. ಸರಕಾರಕ್ಕೆ ಹಣ ಬರಬೇಕೆಂಬುದು ಮುಖ್ಯ ಉದ್ದೇಶ. ಅದಕ್ಕೆ ತಕ್ಕಂತೆ ಐಷಾರಾಮಿ ವಸ್ತುಗಳ ಮೇಲೆ ಹೆಚ್ಚು ತೆರಿಗೆ ಹಾಕಿ, ಸಿಂಗಲ್ ಪಾಯಿಂಟ್ ಟ್ಯಾಕ್ಸ್ ವಿಧಿಸಿ, ಸಾಮಾನ್ಯ ಪ್ರಜೆಗೆ ತೊಂದರೆಯಾಗದಂತೆ, ಅವನ ಕಡೆ ಲಕ್ಷ್ಯವಿಟ್ಟು ಸೂಕ್ತಕ್ರಮ ಕೈಕೊಳ್ಳಬೇಕು, ಮಲ್ಟಿಪಾಯಿಂಟ್ ಟ್ಯಾಕ್ಸ್ ಹಾಕಬಾರದು, ಅನಿವಾರ್ಯವಾದ ಕಡೆ ಮಾತ್ರ ಮಲ್ಟಿಪಾಯಿಂಟ್ ಟ್ಯಾಕ್ಸ್ ಹಾಕಬಹುದು. ಹೀಗೆ ಮಾಡಬೇಕು ಎಂದು ಸರಕಾರಕ್ಕೆ ಪ್ರಾರ್ಥನೆ ಮಾಡಿ, ಅಧ್ಯಕ್ಷರಿಗೆ ವಂದಿಸಿ ನನ್ನ ಮಾತನ್ನು ಮುಗಿಸುತ್ತೇನೆ.

## ಸುಂದರ ಕರ್ನಾಟಕವಾಗಿರಬೇಕೆಂಬ ಸದಾಶಯ

26ನೇ ಜುಲೈ 1972

ಮಾನ್ಯ ಅಧ್ಯಕ್ಷರೇ ಕನ್ನಡ ನಾಡಿನ ಸಮರ್ಥ ಮುಖಂಡರಲ್ಲಿ ಒಬ್ಬರಾದ ಶ್ರೀ ಕೆ. ಹನುಮಂತಯ್ಯನವರು ಕರ್ನಾಟಕ ರಾಜ್ಯಕ್ಕೆ ಕನ್ನಡ ನಾಡಿಗೆ ಕಷ್ಟಪಟ್ಟವರಲ್ಲಿ ಒಬ್ಬರಾಗಿದ್ದಾರೆ. ಕರ್ನಾಟಕವೆಂದು ಹೆಸರಿಡುವುದಕ್ಕೆ ನಮ್ಮ ಶ್ರೀ ದೇವರಾಜ ಅರಸರ ಮಂತ್ರಿಮಂಡಲದ ಎಲ್ಲ ಸದಸ್ಯರು ಜವಾಬ್ದಾರಿ ವಹಿಸಿರಬಹುದು. ಅವರು ಸಹಾನುಭೂತಿ ತೋರಿಸಿರಬಹುದು. ಹೆಚ್ಚು ತ್ಯಾಗ ಮಾಡಿರಬಹುದು. ಆದರೂ ಈ ಸಂದರ್ಭದಲ್ಲಿ ನಾನು ಹಳೆಯ ಮೈಸೂರಿನ ಸದಸ್ಯರಿಗೆ ಅಭಿನಂದಿಸಬೇಕಾಗಿದೆ. ಏಕೆಂದರೆ ಕರ್ನಾಟಕವೆಂದು ಹೆಸರಿಡಬೇಕೆಂದು 1956 ನೆಯ ಇಸವಿ ನವೆಂಬರ್ 11 ರಂದು ನಾನು ಅಸೆಂಬ್ಲಿಯಲ್ಲಿ ಹೇಳಿದಾಗ ಅನೇಕರು ಹೇಳಿದಂತೆ ಶ್ರೀ ಹನುಮಂತಯ್ಯನವರು ಮುಖ್ಯಮಂತ್ರಿ ಪದವಿಯನ್ನು ಬಿಡುವುದರಲ್ಲಿದ್ದರು ಅವರ ತ್ಯಾಗ ಬುದ್ಧಿ, ಕರ್ನಾಟಕ ರಾಜ್ಯ ನಿರ್ಮಾಣ ಮಾಡಲು ಅವರು ಮಾಡಿರುವ ಉತ್ತಮವಾದ ಕೆಲಸ ಏನಿದೆ ಅದನ್ನು ಎಲ್ಲರೂ ಒಪ್ಪಬೇಕಾಗಿದೆ. ತ್ಯಾಗ ಮಾಡುವ ಮನುಷ್ಯರಿಗೆ ಕೀರ್ತಿ ಬರಬಹುದು. ಆದರೆ ಅದಕ್ಕೆ ತಕ್ಕಂತೆ ಅವರು ಅನೇಕ ಕಷ್ಟವನ್ನೂ ಅನುಭವಿಸಬೇಕಾಗುವುದು. ಹಳೆಯ ಮೈಸೂರಿನ ಸದಸ್ಯರು ಒಳ್ಳೆಯ ಪ್ರೀತಿಯಿಂದ ಈ ನಿರ್ಣಯಕ್ಕೆ ಒಪ್ಪಿಗೆ ನೀಡಿದ್ದಾರೆ. ಮೈಸೂರು

ರಾಜವಂಶದವರೂ ಸಹ ಕನ್ನಡ ನಾಡಿಗಾಗಿ ಶ್ರಮಿಸಿದ್ದಾರೆ. 1956 ರಲ್ಲಿ ಮಹಾನವಮಿಯ ದಿನ ಹೈದರಾಬಾದ ಕರ್ನಾಟಕದವರಿಗೆ ಮಹಾರಾಜರು ದರ್ಶನ ಕೊಟ್ಟರು. ಹಿಂದೂಗಳು ಮತ್ತು ಮುಸ್ಲಿಮರು ಎಂದು ಬೇದಮಾಡದೆ ಎಲ್ಲರ ಮೇಲೂ ಮಹಾರಾಜರು ಅಭಿಮಾನವಿಟ್ಟಿದ್ದರು. ಅದನ್ನು ತಿಳಿದು ನನಗೆ ಆನಂದವಾಯಿತು. ಕರ್ನಾಟಕಕ್ಕಾಗಿ ಹಳೆಯ ಮೈಸೂರಿನವರೂ ಟ್ರೆಜರಿ ಬೆಂಚಿನವರೂ ಮತ್ತು ಪತ್ರಿಕಾ ಕರ್ತರು ಮುಂತಾದವರು ಮಾಡಿರುವ ಸೇವೆಯನ್ನು ಸ್ಮರಿಸದೆ ಇರಲು ಸಾಧ್ಯವಿಲ್ಲ. ಅಂದಾನಪ್ಪ ದೊಡ್ಡ ಮೇಟಿಯವರು, ಮುದವೀಡು ಕೃಷ್ಣರಾಯರು, ಶಂಕರಗೌಡರು ಮುಂತಾದವರು ಕರ್ನಾಟಕಕ್ಕಾಗಿ ಪ್ರಾಣಾರ್ಪಣೆ ಮಾಡುವುದಕ್ಕೆ ಉಪವಾಸ ಮಾಡುವುದಕ್ಕೆ ತಯಾರಾಗಿದ್ದರು. ನೀವು ರಾಜೀನಾಮೆ ಕೊಡಿ ಎಂದು ನನಗೆ ಹೇಳಿದರು. 12ನೆಯ ಶತಮಾನದಿಂದ ಬಸವಣ್ಣನವರು ಮುಂತಾದವರು ಕೂಡ ಕನ್ನಡ ನಾಡಿಗಾಗಿ ಶ್ರಮಿಸಿದ್ದಾರೆ. ಆ.ನ.ಕೃಷ್ಣರಾಯರು, ಕುವೆಂಪು ಮುಂತಾದ ಕವಿ/ಸಾಹಿತಿಗಳು ಮತ್ತಿತರ ಮುಖಂಡರು ಕರ್ನಾಟಕಕ್ಕಾಗಿ ಬಹಳ ಪ್ರಯತ್ನಮಾಡಿದ್ದಾರೆ. ಮಾನ್ಯ ದೇವರಾಜ ಅರಸರವರು ಕರ್ನಾಟಕ ಎಂದು ಹೆಸರಿಡಲು ಮನಸ್ಸು ಮಾಡಿದರು, ಶ್ರೀಯುತರುಗಳಾದ ಹನುಮಂತಯ್ಯನವರು, ವೀರೇಂದ್ರ ಪಾಟೀಲರು, ನಿಜಲಿಂಗಪ್ಪನವರು ಮುಂತಾದವರ ಕಾಲದಲ್ಲಿ ಈ ಕೆಲಸವಾಗಲಿಲ್ಲ ಎಂದು ಕೆಲವರು ಹೇಳಿದ್ದಾರೆ. ಇದು ಸತ್ಯ. ಮಹಾತ್ಮಗಾಂಧಿಯವರು, ಸುಭಾಷ್ ಚಂದ್ರಬೋಸರು ಮುಂತಾದವರು ಭಾರತದ ಸ್ವಾತಂತ್ರ್ಯಕ್ಕಾಗಿ ಹೋರಾಡಿ ಹೆಸರುವಾಸಿಯಾಗಿರುವಂತೆ ಕರ್ನಾಟಕಕ್ಕಾಗಿ ರಾಜಮಹಾರಾಜರುಗಳೂ ಹಿಂದಿನ ಸರ್ಕಾರದವರು ಬಹಳ ಕಷ್ಟಪಟ್ಟಿದ್ದಾರೆ. ಇವರೆಲ್ಲರೂ ಕೂಡ ಇದರ ಕೀರ್ತಿಗೆ ಕಾರಣರು. ಇದಕ್ಕಾಗಿ ಈ ಸಭೆಯ ಸದಸ್ಯರೆಲ್ಲರೂ ದೇವರಾಜ ಅರಸರನ್ನು ಹೊಗಳಿದ್ದಾರೆ. ಈ ಠರಾವನ್ನು ಅವರು ತಂದರು. ಹಿಂದೆ ಕರ್ನಾಟಕವೆಂದು ಹೆಸರಿಡಬೇಕು, ಇಲ್ಲದಿದ್ದರೆ ಜನರು ಗೌರವ ಕೊಡುವುದಿಲ್ಲ, ಹೆಸರಿಟ್ಟು ಕೀರ್ತಿ ಪಡೆದುಕೊಳ್ಳಿ ಹಾಗೆ ಮಾಡದಿದ್ದರೆ ಸತ್ಯಾಗ್ರಹ ಮಾಡಬೇಕಾಗುವುದು ಎಂದು ಜನರು ಹೇಳಿದ್ದರು ಇದು ಔಪಚಾರಿಕವಾದ ಮಾತಲ್ಲ, ಕರ್ನಾಟಕ ಎಂದು ಹೆಸರಿಟ್ಟಿದ್ದರಿಂದ 3 ಕೋಟಿ ಜನರು ಆನಂದಪಡುವರು ಇಂಥ ಸೌಭಾಗ್ಯದ ದಿನ ಇಂದು ಬಂದಿದೆ. ಶ್ರೀಮಾನ್ ಗೋಪಾಲಗೌಡರು, ಶ್ರೀಮಾನ್ ದೊಡ್ಡ ಮೇಟಿಯವರು ಇಂದಿಲ್ಲದಿದ್ದರೂ ಅವರ ಆತ್ಮ ಕರ್ನಾಟಕವೆಂಬ ಹೆಸರನ್ನು ಮೈಸೂರಿಗೆ ಎಂದಿಡುವರೋ ಎಂದು ಎದುರು ನೋಡುತ್ತಿತ್ತು. ಇಂದು ಅವರ ಆತ್ಮಕ್ಕೆ ತೃಪ್ತಿಯಾಗಿದೆ. ಕರ್ನಾಟಕವೆಂದು ಕರೆಯಲು ಪಾರ್ಲಿಮೆಂಟಿನಲ್ಲಿ ಠರಾವು ಅಂಗೀಕಾರವಾಗಬೇಕು. ಭಾವೈಕ್ಯದ ದೃಷ್ಟಿಯಿಂದ ಬಹಳ ಉತ್ತಮವಾದ ಕೆಲಸ ಮಾಡಿದ್ದಾರೆ.

ಈ ಸಂದರ್ಭದಲ್ಲಿ, ಈ ರಾಜ್ಯಕ್ಕೆ 'ಕರ್ನಾಟಕ' ಎಂದು ಹೆಸರನ್ನಿಡುವುದು ಅಷ್ಟು ಆನಂದವಾಗದೆ ಇದ್ದರೂ, ಭಾವನಾ ದೃಷ್ಟಿಯಿಂದ ಆನಂದವಾಗುತ್ತದೆ. 3 ಕೋಟಿ ಜನತೆಯಲ್ಲಿ 19 ಜಿಲ್ಲೆಗಳ ಸ್ಥಿತಿ ಸಮಾನವಾಗಿ ಆಗಬೇಕು. ಆರ್ಥಿಕ ದೃಷ್ಟಿಯಿಂದ, ಸಾಮಾಜಿಕವಾಗಿ ಹರಿಜನರಿಗೆ ಕೆಲವು ಸವಲತ್ತುಗಳು ಸಿಕ್ಕುತ್ತಿದೆ. ವಾಟಾಳ್ ನಾಗರಾಜ್‌ರವರು ನಾವು ಹರಿಜನರಾಗಬೇಕಾದರೆ

ಏನು ಮಾಡಬೇಕು ಎಂದು ಕೇಳಿದರು. ಕೀಳುಮಟ್ಟದವರ ಪರಿಸ್ಥಿತಿ ಹರಿಜನ ಅಲ್ಲದವರಲ್ಲಿಯೂ ಇದೆ. ಹರಿಜನರಿಗೆ ಪ್ರೊಟೆಕ್ಷನ್ ಕೊಟ್ಟಿರುವುದಕ್ಕೆ ನಾನು ವಿರೋಧ ಮಾಡುತ್ತಿಲ್ಲ. ಎಲ್ಲ ಹರಿಜನರ ಕಲ್ಯಾಣವಾಗಲಿ, ಆದರೆ ಬ್ರಾಹ್ಮಣರಲ್ಲಿಯೂ, ಲಿಂಗಾಯತರಲ್ಲಿಯೂ ಅದೇ ರೀತಿ ಬಡತನ ಇದೆ. ಬಡತನದಲ್ಲಿ ಯಾರೇ ಇರಲಿ ಅವರಿಗೆ ಸಹಾಯ ಮಾಡಬೇಕು. ಲಿಂಗವನ್ನು ಯಾರು ಧರಿಸುತ್ತಾರೋ ಅವರು ಲಿಂಗಾಯಿತರು. ಬ್ರಹ್ಮಜ್ಞಾನವುಳ್ಳವರು ಬ್ರಾಹ್ಮಣರು. ಈವೊತ್ತು ಬಸವಲಿಂಗಪ್ಪನವರು ಹರಿಜನರು ಅಲ್ಲ, ಮಲ್ಲಿಕಾರ್ಜುನ ಸ್ವಾಮಿಯವರು ಹರಿಜನರು ಅಲ್ಲ, ಅವರ ತಂದೆ ತಾಯಿಗಳು ಆ ಹೆಸರು ಹೇಳಬಹುದು. ಹಾಗೆಯೇ ಕೆ. ಹೆಚ್. ಪಾಟೀಲರು ಹಿಂದುಳಿದವರಲ್ಲ. ಆದ್ದರಿಂದ ಹರಿಜನರಾಗಲಿ ಅಥವಾ ಇನ್ನಿತರ ಕೋಮಿನವರಾಗಲಿ ಎಲ್ಲರೂ ಉತ್ತಮ ಸ್ಥಿತಿಗೆ ಬರಬೇಕು. ಕರ್ನಾಟಕ ರಾಜ್ಯ ಸರ್ವಾಂಗ ಸಂವೃದ್ಧಿ ರಾಜ್ಯವಾಗಬೇಕು. ಈ ರಾಜ್ಯದಲ್ಲಿ ಹನುಮಂತಯ್ಯನವರ ಹೆಸರು ಹೇಳಿದರೂ ಸಹಿತ ಜನರು ಬೆಲೆ ಕೊಡುತ್ತಾರೆ. ಅದೇ ರೀತಿ ಮೊರಾರ್ಜಿ ದೇಸಾಯ್‌ರವರಿಗೆ ನಮ್ಮ ದೇಶದಲ್ಲಿ ಬೆಲೆ ಇದೆ. ಕಾಂಗ್ರೆಸ್ (ಓ) ಇರಲಿ, ಕಾಂಗ್ರೆಸ್ (ಆರ್) ಇರಲಿ ಅಥವಾ ರಿಪಬ್ಲಿಕನ್ ಪಾರ್ಟಿ ಇರಲಿ, ಯಾರೇ ಇರಲಿ ಎಲ್ಲರೂ ಕರ್ನಾಟಕ ಮಾತೆಯ ಮಕ್ಕಳು. ಈ ಕರ್ನಾಟಕ ಹೆಸರಿಗೆ ಇತಿಹಾಸ ಇದೆ, ವಿಶ್ವೇಶ್ವರಯ್ಯನವರು, ಹನುಮಂತಯ್ಯನವರು, ಮಿರ್ಜಾ ಇಸ್ಮಾಯಿಲ ರವರು ಇವರೆಲ್ಲರೂ ಕನ್ನಡಿಗರು. ನಾವು ಈ ಸಭೆಯಲ್ಲಿ ಆನಂದವಾಗಿ ಮಾತನಾಡುವ ಕಾಲಕ್ಕೆ ಬಿಜಾಪುರ ಜಿಲ್ಲೆಯಲ್ಲಿ ದುಷ್ಕಾಲ ಪರಿಸ್ಥಿತಿ ಬಂದಿದೆ. ಎಲ್ಲಾ ವ್ಯವಸ್ಥೆ ಮಾಡುತ್ತಿದ್ದೇವೆ ಎಂದು ರೆವಿನ್ಯೂ ಮಿನಿಸ್ಟರ್ ಹೇಳುತ್ತಿದ್ದಾರೆ. ಆದರೂ ಅಲ್ಲಿನ ಪರಿಸ್ಥಿತಿ ಇನ್ನೂ ಸುಧಾರಿಸಿಲ್ಲ. ಇನ್ನೂ ಮಾಡಬೇಕಾದ ಕೆಲಸ ಬಹಳಷ್ಟು ಇದೆ. ಅದನ್ನು ಕೂಡಲೆ ಮಾಡಬೇಕು ಎಂದು ಹೇಳುತ್ತೇನೆ.

ಇನ್ನು ಕರ್ನಾಟಕ ರಾಜ್ಯದಲ್ಲಿ ಸಮರ್ಥ ಆಡಳಿತ ಆಗಬೇಕು. ಅದು ಇಡೀ ದೇಶಕ್ಕೆ ಮಾರ್ಗದರ್ಶನ ಕೊಡಬೇಕು. ಈ ರಾಜ್ಯದ 19 ಜಿಲ್ಲೆಗಳಲ್ಲಿ ಒಂದೇ ತರಹವಾದ ವ್ಯವಸ್ಥೆ ಇರಬೇಕು. ಮಂಡ್ಯ ಜಿಲ್ಲೆಯಲ್ಲಿ ಬರೀ ನೀರಾವರಿ ಪ್ರದೇಶ ಇರುವ ಹಾಗೆ ವಿಶ್ವೇಶ್ವರಯ್ಯನವರು ಮಾಡಿದ್ದಾರೆ. ಅದೇ ರೀತಿ ಸಹಾಯವನ್ನು ಕರ್ನಾಟಕ ರಾಜ್ಯದ ಬಿಜಾಪುರ ಜಿಲ್ಲೆಗೂ ಮಾಡಿಕೊಡಬೇಕು. ಈ ರಾಜ್ಯಕ್ಕೆ ಉತ್ತಮ ಹೆಸರು ಇಡುವಾಗ ನನಗೆ ಕೆಟ್ಟ ಮಾತನಾಡುವುದಕ್ಕೆ ಮನಸ್ಸು ಇಲ್ಲ. ಬಿಜಾಪುರ ಜಿಲ್ಲೆಯ ದುಷ್ಕಾಲ ಪರಿಸ್ಥಿತಿ ಬಗ್ಗೆ ಪುನಃ ಈ ಸದನದಲ್ಲಿ ಚರ್ಚೆಗೆ ಬರಲಾರದಂತೆ ಅಪ್ಪರ್ ಕೃಷ್ಣಾ ಪ್ರಾಜೆಕ್ಟ್‌ನ ಕೆಲಸ ಮುಗಿಸಿ ಬಿಜಾಪುರ ಜಿಲ್ಲೆಗೆ ನೀರಾವರಿ ಸೌಕರ್ಯವನ್ನು ಒದಗಿಸಿಕೊಡಬೇಕು. ಈ ಕರ್ನಾಟಕ ಪ್ರಾಂತ್ಯ ನಿರ್ಮಾಣವಾಗಲಿಕ್ಕೆ ಶ್ರೀಮಾನ್ ನಿಜಲಿಂಗಪ್ಪನವರು, ಶ್ರೀಮಾನ್ ವೀರೇಂದ್ರ ಪಾಟೀಲರು ಸಹಾ ಕಾರಣರು ಇದ್ದಾರೆ. ಹಳೇ ಮೈಸೂರು ಸದಸ್ಯರು ಮೊದಲು ಈ ಹೆಸರಿಗೆ ವಿರೋಧ ಮಾಡಿದ್ದರೂ ಈಗ ಈ ಠರಾವಿಗೆ ಅನುಮತಿಯನ್ನು ಕೊಟ್ಟಿದ್ದಾರೆ. ಎಲ್ಲರೂ ಇದಕ್ಕಾಗಿ ತ್ಯಾಗ ಮಾಡಿದ್ದಾರೆ. ಕರ್ನಾಟಕ ಪ್ರಾಂತದಲ್ಲಿ ಎಲ್ಲ ನೀರಾವರಿ ಕೆಲಸಗಳು ನಡೆದು ಅವನ್ನು ಸರ್ವಾಂಗ ಸುಂದರವಾಗಿ ಮಾಡಿ ಕರ್ನಾಟಕ ರಾಜ್ಯದಿಂದ ಮತ್ತೊಂದು ಕಡೆಗೆ ಅನ್ನಕ್ಕಾಗಿ, ಬಟ್ಟೆಗಾಗಿ ಹೋಗಲಾರದಂತೆ ಮಾಡಬೇಕು. ಹಾಗೆ ಮಾಡಬೇಕಾದರೆ ಬಿಜಾಪುರ ಜಿಲ್ಲೆಗೆ ಆದಷ್ಟು

ಬೇಗನೆ ನೀರಾವರಿ ಸೌಲಭ್ಯವನ್ನು ಒದಗಿಸಿಕೊಡಬೇಕು. ಆಗ ಬಿಜಾಪುರ ಜಿಲ್ಲೆ ಸರ್ವಾಂಗ ಸುಂದರವಾಗಿ ಪ್ರತಿಯೊಂದು ದಿಶೆಯಲ್ಲಿಯೂ ಮುಂದಕ್ಕೆ ಬರುತ್ತದೆ. ಅದಕ್ಕೆ ಉತ್ತಮವಾದ ಕೆಲಸ ಮಾಡಬೇಕು ಎಂದು ಹೇಳುತ್ತೇನೆ. ಇಷ್ಟು ಹೇಳಿ ಮಾನ್ಯ ಅಧ್ಯಕ್ಷರಿಗೆ, ಕರ್ನಾಟಕ ರಾಜ್ಯದ ಹೆಸರಿನ ಸಲುವಾಗಿ ಪ್ರಯತ್ನ ಮಾಡಿದಂಥ ಸಮಗ್ರ ಮಂತ್ರಿಮಂಡಲಕ್ಕೆ ಮತ್ತು ಎಲ್ಲಾ ಸದಸ್ಯರಿಗೂ ವಂದಿಸಿ ನನ್ನ ಮಾತನ್ನು ಮುಗಿಸುತ್ತೇನೆ.

## ಬಿಜಾಪೂರ ಜಿಲ್ಲೆಯ ಕ್ಷಾಮ ಪರಿಹಾರದ ಮೇಲಿನ ಚರ್ಚೆ

31ನೇ ಜುಲೈ 1972

ಸ್ವಾಮಿ, ನಾನು ತಮ್ಮಲ್ಲಿ ಒಂದು ವಿಷಯವನ್ನು ಪ್ರಾರ್ಥನೆ ಮಾಡುತ್ತೇನೆ. ನನಗೆ ಬಿಜಾಪುರ ಜಿಲ್ಲೆಯಿಂದ ಫೋನ್ ಬಂದಿದೆ. ಅಲ್ಲಿ ಪರಿಸ್ಥಿತಿ ತೀವ್ರ ಕಳವಳಕಾರಿಯಾಗಿದೆ. ಬಿಜಾಪುರದ ಡಿವಿಜನಲ ಕಮೀಷನರ್ ಅವರು ಆ ಜಿಲ್ಲೆಯಲ್ಲಿ ಕ್ಷಾಮಪರಿಹಾರ ಕಾಮಗಾರಿಗಳನ್ನು ತೆಗೆದುಕೊಳ್ಳಲು ಸುಮಾರು 50 ಲಕ್ಷ ರೂಪಾಯಿಗಳು ಬೇಕು ಎಂದು ಹೇಳಿದ್ದಾರೆ. ನಿಜವಾಗಿ ಅಲ್ಲಿರತಕ್ಕ ಪರಿಸ್ಥಿತಿಯನ್ನು ಕೇಳಿದರೆ ಕಣ್ಣಿನಲ್ಲಿ ನೀರು ಬರುತ್ತದೆ. ಅದರ ಸಲುವಾಗಿ ಬಿಜಾಪುರ ಜಿಲ್ಲೆಯಲ್ಲಿ ಕ್ಷಾಮ ಪರಿಹಾರ ಕಾಮಗಾರಿಗಳನ್ನು ತೆಗೆದುಕೊಳ್ಳುವುದಕ್ಕೆ ಆ ಜಿಲ್ಲೆಯ ಡೆಪ್ಯುಟಿ ಕಮೀಷನರಿಗೆ ಎಷ್ಟು ಹಣವನ್ನು ಒದಗಿಸಿದ್ದಾರೆ ಎಂಬುದನ್ನು ಮಾನ್ಯ ಮಂತ್ರಿಗಳು ಹೇಳಿದರೆ ಒಳ್ಳೆಯದು. ಬಿಜಾಪುರ ಜಿಲ್ಲೆಯ ಡಿವಿಜನಲ ಕಮೀಷನರ ರಿಪೋರ್ಟ್ ಪ್ರಕಾರ ಅಲ್ಲಿಗೆ ಎಷ್ಟು ಹಣವನ್ನು ಕಳುಹಿಸಿದ್ದಾರೆ. ಅಲ್ಲಿ ಪರಿಹಾರ ಕಾಮಗಾರಿಗಳನ್ನು ತೆಗೆದುಕೊಳ್ಳುವ ಬಗ್ಗೆ ಸರ್ಕಾರದವರು ಏನು ವ್ಯವಸ್ಥೆ ಮಾಡಿದ್ದಾರೆ ಎನ್ನುವುದನ್ನು ಮಾನ್ಯ ಮಂತ್ರಿಗಳು ತಿಳಿಸಬೇಕೆಂದು ನಾನು ಪ್ರಾರ್ಥನೆ ಮಾಡಿಕೊಳ್ಳುತ್ತೇನೆ. ಜನ ದನಕರುಗಳನ್ನು ಮಾರಿ ಬೇರೆ ಕಡೆ ಗುಳೇ ಹೋಗುತ್ತಿದ್ದಾರೆ. ನಾನು ನೊಂದ ಮನಸ್ಸಿನಿಂದ ಹೇಳುತ್ತೇನೆ. ಅದರ ಸಲುವಾಗಿ ಅಲ್ಲಿ ಪರಿಹಾರ ಕಾಮಗಾರಿಗಳನ್ನು ತೆಗೆದುಕೊಳ್ಳಬೇಕೆಂದು ಡೆಪ್ಯುಟಿ ಕಮೀಷನರಿಗೆ ತಿಳಿಸಿದ್ದೀರಾ ಹೇಗೆ ಎಂಬುದನ್ನು ಸ್ಪಷ್ಟವಾಗಿ ಹೇಳಬೇಕು ಎಂದು ನಾನು ಮಾನ್ಯ ಮುಖ್ಯ ಮಂತ್ರಿಗಳಲ್ಲಿ ಪ್ರಾರ್ಥನೆ ಮಾಡಿಕೊಳ್ಳುತ್ತೇನೆ.

**ಶ್ರೀ ಡಿ. ದೇವರಾಜ್ ಅರಸ್** (ಮುಖ್ಯ ಮಂತ್ರಿಗಳು)- ಮಾನ್ಯ ಅಧ್ಯಕ್ಷರೇ, ಈ ಸಂದರ್ಭದಲ್ಲಿ ನಮ್ಮ ರೆವಿನ್ಯೂ ಮಂತ್ರಿಗಳು ಈ ಸಭೆಯ ಮುಂದೆ ಒಂದು ಹೇಳಿಕೆಯನ್ನು ಕೊಡುತ್ತಾರೆ. ಅವರು ಈಗ ಮೇಲ್ಮನೆಗೆ ಹೋಗಿದ್ದಾರೆ. ಅವರು ಎಲ್ಲಾ ವಿಷಯಗಳನ್ನೊಳಗೊಂಡಂತೆ ಅಂಕಿ ಅಂಶಗಳನ್ನು ಪಡೆದು ಒಂದು ಹೇಳಿಕೆಯನ್ನು ಕೊಡುವುದಕ್ಕೆ ಇಂದು ಕೆಲವು ಮಾಹಿತಿಗಳನ್ನು ಪಡೆಯುತ್ತಿದ್ದಾರೆ. ಅದಕ್ಕಾಗಿ ಇನ್ನೂ ಎರಡು ದಿವಸಗಳು ಬೇಕೆಂದು ಹೇಳಿ ಹೋಗಿದ್ದಾರೆ. ಅವರು ಈ ಸಭೆಯ ಮುಂದೆ ಅಂಕಿ ಅಂಶಗಳನ್ನು ಕೊಡುವುದು ನಿಧಾನವಾದರೆ ನಾವು ತೆಗೆದುಕೊಳ್ಳುವ ಕ್ರಮಗಳಂತೂ ನಿಧಾನವಾಗಬೇಕಾಗಿಲ್ಲವೆಂದು ನಾನು ತಿಳಿದಿದ್ದೇನೆ. ಈಗ ಮೊನ್ನೆ ತಾನೇ ನಾನು

ಒಂದು ಸಭೆಯನ್ನು ಕರೆದು ಬಿಜಾಪುರ ಜಿಲ್ಲೆ ಸದಸ್ಯರನ್ನು ಕಂಡು ಅಲ್ಲಿನ ವಿಚಾರಗಳನ್ನು ಅವರಿಂದ ತಿಳಿದುಕೊಂಡು ಜನರಿಗೆ ಕೆಲಸ ಒದಗಿಸುವ ದೃಷ್ಟಿಯಿಂದ ಯಾವ್ಯಾವ ಕಾರ್ಯಕ್ರಮಗಳನ್ನು ತೆಗೆದುಕೊಳ್ಳಬೇಕು ಎಂಬ ಬಗ್ಗೆ ಚರ್ಚೆಮಾಡಿ ಅದರಂತೆ ಆಜ್ಞೆ ಮಾಡಿದೆ. ಆ ಸಭೆಯಲ್ಲಿ ಶ್ರೀಮಾನ್ ಎಸ್.ವೈ. ಪಾಟೀಲರವರು ಸ್ವಲ್ಪಹೊತ್ತು ಇದ್ದು ಆಮೇಲೆ ಹೊರಟು ಹೋದರು. ಆದರೆ ಮಾನ್ಯ ಶ್ರೀ ಕಬಾಡಿಯವರು ಮಾತ್ರ ಇದ್ದರು. ಕ್ರಮ ತೆಗೆದುಕೊಂಡರೋ ಇಲ್ಲವೋ ಗೊತ್ತಿಲ್ಲವೆಂದು ಅವರು ಅನುಮಾನ ಪಡುವುದು ಏಕೆ ಎಂದು ನನಗೆ ಅನುಮಾನ. ದುಡ್ಡು ಕೊಟ್ಟಿಲ್ಲವೆಂದು ಯಾರು ಹೇಳುತ್ತಾರೆ?

**ಶ್ರೀ ಜೆ.ಎಲ್. ಕಬಾಡಿ** – ಕೂಲಿಗಾರರಿಗೆ ಸಂಬಳ ಕೊಟ್ಟರೆ ಸಾಕೇ?

**ಶ್ರೀ ಎಸ್. ವೈ. ಪಾಟೀಲ** – ಎಷ್ಟು ಕೊಟ್ಟಿದ್ದಾರೆ? ಜನಗಳಿಗೆ ಬೇಕಾಗುವಷ್ಟು ಕೊಟ್ಟರೆ ಸಾಕು.

**ಶ್ರೀ ಡಿ. ದೇವರಾಜು ಅರಸ್** – ಅಲ್ಲಿ ಕೆಲಸಗಳನ್ನು ಯಾವ ರೀತಿಯಾಗಿ ಒದಗಿಸಬೇಕೆಂಬುದನ್ನೂ ಸಹ ಚರ್ಚೆ ಮಾಡಿದ್ದೇನೆ. ಅಲ್ಲಿ ಹುಲ್ಲಿನ ಅಭಾವ ಇದೆ. ದನಕರುಗಳ ಮೇವಿನ ಅಭಾವವೂ ಇದೆಯೆನ್ನುವುದನ್ನು ತಿಳಿಸಲು ಬಿಜಾಪುರ ಜಿಲ್ಲೆಯ ಹೆಚ್ಚು ಸದಸ್ಯರು ಬಂದಿದ್ದರು. ಅವರೂ ನಾವೂ ಕುಳಿತು ಆಲೋಚನೆ ಮಾಡಿದೆವು. ಕೂಡಲೇ ಮೇವನ್ನು ಒದಗಿಸುವುದು ಬಹಳ ಕಷ್ಟವಿದೆಯೆಂದು ಹೇಳಿದ್ದೇನೆ. ದನಗಳ ಮೇವು ಬಿಜಾಪುರ ಜಿಲ್ಲೆಯಿಂದ ಹೊರಗಡೆ ಮಾರಾಟಕ್ಕೆ ಹೋಗುತ್ತಿದೆಯೆಂಬುದು ಗೊತ್ತಿದೆ. ಆದ್ದರಿಂದ ಅದನ್ನು ಕೂಡಲೇ ನಿಲ್ಲಿಸಬೇಕು. ಆಹಾರ ಧಾನ್ಯಗಳು ಹೊರಗಡೆ ಹೋಗುವುದನ್ನು ಮತ್ತು ದನಗಳ ಮೇವು ಹಾಗೂ ಜೋಳದ ಕಡ್ಡಿ ಹೊರಗೆ ಹೋಗುವುದನ್ನು ನಿಲ್ಲಿಸಬೇಕು, ಎಂದು ಅದೇ ರೀತಿಯಲ್ಲಿ ಆಜ್ಞೆ ಮಾಡಿದೆ. ಮೇವನ್ನು ಕೊಂಡುಕೊಳ್ಳುವವರಿಗೆ ಸರ್ಕಾರದಿಂದ ಸಾಲ ಕೊಡುವ ತೀರ್ಮಾನ ಮಾಡಿದ್ದೇವೆ. ಆ ರೀತಿಯಾಗಿ ನಾವು ಆಜ್ಞೆ ಮಾಡಿದ್ದೇವೆ. ಅಲ್ಲಿ ಕುಡಿಯುವ ನೀರಿನ ಬಾವಿಗಳೆಷ್ಟು, ನೀರಿಲ್ಲ. ಅಲ್ಲಿ ಬಾವಿಗಳನ್ನು ಅಗವಡಿಸುವುದಕ್ಕೆ ಡೆಪ್ಯುಟಿ ಕಮೀಷನರಿಗೆ ಆದೇಶ ಕೊಟ್ಟಿದೆ. ಅವರು ಎಷ್ಟು ಬೇಕಾದರೂ ಅಗವಡಿಸಬಹುದು. ಅದರಲ್ಲಿ ಮಿತಿ ಇಲ್ಲ. ಅದರ ಬಗ್ಗೆ ಪೂರ್ಣಾಧಿಕಾರವನ್ನು ಡೆಪ್ಯುಟಿ ಕಮಿಷನರಿಗೆ ಕೊಟ್ಟಿದೆ. ರಿಗ್ಸ್ ನಮ್ಮಲ್ಲಿ ಹೆಚ್ಚಿಗೆ ಇಲ್ಲ. 21 ಯಂತ್ರಗಳನ್ನು ಸರ್ವಿಸನಲ್ಲಿಟ್ಟುಕೊಂಡಿದ್ದರೂ ಅವುಗಳಲ್ಲಿ 8 ಕೆಲಸ ಮಾಡದೆ ಹಾಗೆಯೇ ಇವೆ. ಅವಕ್ಕೆ ಆಗಿಂದಾಗ್ಗ ಸ್ಪೇರ್‌ಪಾರ್ಟ್‌ಬೇಕಾಗಿವೆ. ಇದರಿಂದ ನಮಗೆ ಬಹಳ ಕಷ್ಟವಾಗಿ ಎಲ್ಲಾ ಕಡೆಯೂ ಸರ್ವಿಸ್ ಮಾಡುವುದಕ್ಕೆ ಅಸಾಧ್ಯವಾಗಿದೆ. ಜನಗಳಿಗೆ ಆಹಾರವಿಲ್ಲದೆ ಬಹಳ ತೊಂದರೆಯಾಗಿದೆ ಎಂದು ಹೇಳುತ್ತಾರೆ. ಜೋಳ ಸಾಕಷ್ಟು ಇಲ್ಲ. ಅಲ್ಲಿ ಹೆಚ್ಚಿಗೆ ಬೇಕಾಗಿರುವುದು ಜೋಳ. ಅದೇ ಅಲ್ಲಿ ರೂಢಿ. ಅದಕ್ಕೆ ನಾನಾ ಕಾರಣಗಳಿವೆ. ಈ ಸಂದರ್ಭದಲ್ಲಿ ಕೆಲವು ಕಾರಣಗಳನ್ನು ಹೇಳುವುದು ಬಹಳ ಒಳ್ಳೆಯದು. ಏಕೆಂದರೆ ನಮ್ಮಲ್ಲಿ ಕ್ಷಾಮ ಬಂದು ಮಳೆ ಇಲ್ಲದೆ ಅಭಾವ ಬಂದಾಗ್ಗೆ ಆಹಾರ ಇಲ್ಲ. ಬೆಳೆ ಬೆಳದಾಗ ರೈತರ ಹತ್ತಿರ

ತೆಗೆದುಕೊಳ್ಳಬೇಡಿ ನಾವು ಲೆವಿ ಏನು ಹೇಳುತ್ತೇವೆಯೋ ಅದನ್ನು ಹಾಕುವುದು ಬೇಡವೆಂದು ಹೇಳಿದ್ದು ಈಗ ಅವರಿಗೆ ತೊಂದರೆ ಇದ್ದಾಗ ನಿಜವಾಗಿ ಆಹಾರವನ್ನು ಒದಗಿಸಿಕೊಡಬೇಕೆಂದು ಹೇಳುತ್ತಾರೆ. ಅದು ಹೇಗೆ ಸಾಧ್ಯ? ಕೇಂದ್ರ ಸರ್ಕಾರದವರು ಹೆಚ್ಚಿಗೆ ಜೋಳ ಇಟ್ಟಿಲ್ಲ. ನಾವು ಈಗ ಲೆವಿ ಮುಖೇನ ಪಡೆದಿರುವ ಎಷ್ಟು ಧಾನ್ಯ ನಮ್ಮಲ್ಲಿದೆಯೋ ಅದನ್ನು ಈಗ ಕೊಡುವುದಕ್ಕೆ ಏರ್ಪಾಡುಮಾಡಬೇಕು. ಆದರೆ ಎಷ್ಟು ಬೇಕಾದರೂ ಗೋಧಿ ಸಿಗುತ್ತದೆ ಗೋದಿಯನ್ನು ಕೊಡಲು ನಾನು ಈಗಾಗಲೇ ಏರ್ಪಾಡು ಮಾಡಿದ್ದೇನೆ. ಬಿಜಾಪುರ ಜಿಲ್ಲೆಯಲ್ಲಾಗಲೀ ಅಥವಾ ಎಲ್ಲಿ ಆಹಾರದ ಕೊರತೆ ಇದೆಯೋ ಅಲ್ಲಿಗೆ ಎಷ್ಟು ಬೇಕಾದರೂ ಗೋದಿಯನ್ನು ಕೊಡುವುದಕ್ಕೆ ಸಾಧ್ಯತೆ ಇದೆ. ಆದ್ದರಿಂದ ಆಹಾರ ಧಾನ್ಯಗಳಿಗೆ ಚಿಂತೆ ಮಾಡುವುದು ಬೇಡ. ಈಗ ಸಾಕಷ್ಟು ಆಹಾರ ಧಾನ್ಯಗಳಿಲ್ಲ. ಇನ್ನು ಕೆಲವು ಕಡೆ ವರ್ತಕರು ಈ ಒಂದು ಸಮಯವನ್ನು ದುರುಪಯೋಗ ಮಾಡಿಕೊಂಡಿದ್ದಾರೆ. ಇವರೂ ಸಹ ಸ್ಟೋರ್ ಮಾಡಿಟ್ಟುಕೊಂಡು ಬೆಲೆ ಏರಿಸುತ್ತಿದ್ದಾರೆ. ಅದಕ್ಕೆ ನಾನು ಏನು ಯೋಚನೆ ಮಾಡುತ್ತಿದ್ದೇನೆಂದರೆ ಗೋದಿಯನ್ನು ಹೆಚ್ಚು ಪ್ರಮಾಣದಲ್ಲಿ ಮೂವ್ ಮಾಡಲು ನಾವು ಅದಕ್ಕೆ ಸಾಕಷ್ಟು ಪ್ರಚಾರ ಮಾಡೋಣ. ನಮ್ಮ ಮೈಸೂರು ರಾಜ್ಯದಲ್ಲಿ ಯಾವ್ಯಾವ ಕಡೆಗಳಲ್ಲಿ ಯಾವ್ಯಾವ ಆಹಾರ ಧಾನ್ಯಗಳು ಹೇರಳವಾಗಿ ಸಿಗುತ್ತವೆ ಎಂಬುದನ್ನು ನೋಡಬೇಕು. ಕೇಂದ್ರ ಸರ್ಕಾರದಲ್ಲಿ 8 ಮಿಲಿಯನ್ ಟನ್‌ಗಳಷ್ಟು ಗೋಧಿ ಸ್ಟಾಕ್ ಇದೆ. ನಮ್ಮಲ್ಲಿ ಎರಡು ಮೂರು ಕೆಲಸಗಳು ನಡೆಯುವುತ್ತಿವೆ. ಜೋಳ ಬೆಳದಂಥ ರೈತರು ಕಾನೂನಿಂದ ತಪ್ಪಿಸಿಕೊಳ್ಳುವುದಕ್ಕೆ ನಮ್ಮಲ್ಲಿ ಏನು ಈ ಸಾರಿ ಬೆಳೆಯಲಿಲ್ಲ, ನೀವು ಲೆವಿ ತೆಗೆದುಕೊಳ್ಳಬೇಡಿ ಎಂದು ಹೇಳಿ ಆಗಿದ್ದನ್ನು ಬಚಿಟ್ಟುಕೊಳ್ಳುವುದಕ್ಕೆ ಹೋಗುತ್ತಾರೆ. ಬಿಜಾಪುರ, ಸೋಲಾಪುರ, ಮತ್ತು ಮಂಗಳೂರು ಮುಂತಾದ ಪ್ರದೇಶಗಳಿಗೆ ಅಕ್ಕಿ ಕಳುಹಿಸುತ್ತಾರೆ. ಆದ್ದರಿಂದ ಇನ್ನು ಮುಂದೆ ಲೆವಿ ವಿಚಾರ ಬಂದಾಗ ಏನು ಮಾಡಬೇಕೆಂಬುದನ್ನು ಸೀರಿಯಸ್ಸಾಗಿ ಯೋಚನೆ ಮಾಡಬೇಕು. ಈಗ ಆಹಾರ ಬೇಕಾದರೂ ಲೆವಿ ವಸೂಲು ಮಾಡುವಾಗ ಯಾರೂ ತಡೆಯುವುದಕ್ಕೆ ಬರಬಾರದು.

**ಶ್ರೀ ಎಸ್.ವೈ. ಪಾಟೀಲ** – ಲೆವಿ ಬರುತ್ತಾ ಇದ್ದಂಥ ಕೆಲವು ಕಡೆ ಕೇವಲ ಹುಲ್ಲು ಬಿದ್ದಿದೆ. ಬೆಂಕಿ ಬಿದ್ದಿದೆ.

**ಶ್ರೀ ಡಿ. ದೇವರಾಜ್ ಅರಸ್** – ನೀವು ಸರಿಯಾಗಿ ವಿಚಾರ ತಿಳಿದುಕೊಳ್ಳಲಿ ಎಂದು ನಾನು ಹೇಳುತ್ತಿದ್ದೇನೆ.

**ಶ್ರೀ ಎಸ್.ವೈ. ಪಾಟೀಲ** – ಅದು ಸರಿಯಾಗಿ ನಡೆದಿದ್ದರೆ, ಇವತ್ತು ಇನ್ನೂ ಹೆಚ್ಚಿಗೆ ಪ್ರಮಾಣದಲ್ಲಿ ಜೋಳ ಸಿಗುತ್ತಿತ್ತು. ಅದರಲ್ಲಿ ಸರ್ಕಾರದ್ದೇ ತಪ್ಪು ಇರುವುದು.

**ಶ್ರೀ ಎಚ್.ಡಿ. ದೇವೇಗೌಡ** – ಹೋದ ವರ್ಷ ನೀವೂ ಇರಲಿಲ್ಲ, ನಾವೂ ಇರಲಿಲ್ಲ.

**ಶ್ರೀ ಡಿ. ದೇವರಾಜ್ ಅರಸ್** – ಹಿಂದಿನಿಂದಲೂ ಮಾನ್ಯ ಶ್ರೀ ದೇವೇಗೌಡರು ಮಾಡಿರುವುದು ಈಗಲೂ ಬಹಳ ದಿವಸಗಳಿಂದ ನಡೆದುಕೊಂಡು ಬಂದಿದೆ. ಅದು ನನಗೆ ಗೊತ್ತಿದೆ.

ಎಷ್ಟೋ ಜನರು ಅರ್ಜಿಗಳನ್ನು ತೆಗೆದುಕೊಂಡು ಬಂದು ನನಗೆ ಹೇಳುತ್ತಿದ್ದರು. ನಾನು ಆ ಮಾತನ್ನು ಯಾರೊಬ್ಬರ ನಿಂದನೆಗೆ ಹೇಳುತ್ತಾ ಇಲ್ಲ. ನಾವು ಸ್ವಲ್ಪ ವಿವೇಚನೆ ಉಪಯೋಗಿಸದೆ ಯಾರೋ ಹೇಳುತ್ತಿದ್ದಾರೆ ಎಂದು ಅವರ ಪರವಾಗಿ ಕೆಲಸ ಕಾರ್ಯಗಳು ಮಾಡುವಾಗ ಬೇರೆಯವರಿಗೆ ಆಗುತ್ತಿರುವ ತೊಂದರೆಗಳೇನು ಎಂಬುದನ್ನು ತಮ್ಮ ಗಮನಕ್ಕೆ ತರುತ್ತಿದ್ದೇನೆ. ನಮ್ಮಲ್ಲಿ ಗೋಧಿ ಸಾಕಷ್ಟು ಇದೆ. ಯಾರು ಆಹಾರವಿಲ್ಲದೆ ಸಾಯುತ್ತಿದ್ದಾರೋ ಅಂತಹವರಿಗೆ ಸಾಯುವುದಕ್ಕೆ ಅವಕಾಶ ಕೊಡುವ ಪರಿಸ್ಥಿತಿ ಇಲ್ಲ. ಸಾಕಷ್ಟು ಗೋಧಿ ಇದೆ. ಅವರಿಗೆ ಎಲ್ಲಿ ಕೆಲಸಗಳನ್ನು ಒದಗಿಸಬೇಕೋ ಅಲ್ಲಿಯೇ ಒದಗಿಸೋಣ. ಶ್ರೀ ಕಬಾಡಿಯವರು ಹೇಳಿದ ಹಾಗೆ ನಮ್ಮ ಇಂಟೆರಿಂ ಬಜೆಟ್‌ನಲ್ಲಿ ಸ್ವಲ್ಪ ಹಣವನ್ನು ಈ ಬಾಬಿಗೆ ಒದಗಿಸಿದೆ. ಈಗ ಸ್ವಲ್ಪ ತಡವಾಗಿದೆ. ಅಪ್ರೋಪ್ರಿಯೇಷನ್ ಬಿಲ ಮುಗಿಯುವವರೆಗೂ ದುಡ್ಡು ಕೊಡುವುದಕ್ಕಾಗಲಿಲ್ಲ. ಈಗ ಮಂಜೂರು ಆಯಿತು. ಈ ಒಂದು ಕೋಟಿ ರೂಪಾಯಿಗಳನ್ನು 64ನೇ ಫ್ಯಾಮಿನ್ ಕೆಳಗೆ ತಕ್ಷಣದಲ್ಲಿ ರಿಲೀಜ್ ಮಾಡಿ ಎಲ್ಲಾ ಕಡೆಯೂ ಕೆಲಸ ಕಾರ್ಯಗಳನ್ನು ಒದಗಿಸುವುದಕ್ಕೆ ಪ್ರಯತ್ನಮಾಡಿ ಎಂದು ಹೇಳಿದೆ.

ಇದರ ಜೊತೆಯಲ್ಲೇ ಈಗ ಬಿಜಾಪುರ ಜಿಲ್ಲೆಯಲ್ಲಿ ಮೂರು ನಾಲ್ಕು ರೀತಿಯಲ್ಲಿ ಜನರಿಗೆ ಕೆಲಸವನ್ನು ಒದಗಿಸುವುದಕ್ಕೆ ವ್ಯವಸ್ಥೆ ಮಾಡಲಾಗಿದೆ. ಅಲ್ಲಿ ಕೆಲವು ಕಡೆ ರಸ್ತೆಗಳನ್ನು ಮಾಡುವುದಕ್ಕೆ ಸಾಧ್ಯವಿದೆ. ಮೊನ್ನೆ ಅಲ್ಲಿಗೆ ನಮ್ಮ ಪಿ.ಡಬ್ಲ್ಯೂ.ಡಿ. ಮಂತ್ರಿಗಳು ಹೋಗಿದ್ದಾಗ ಅಲ್ಲಿ ಜನರಿಗೆ ಕೆಲಸಗಳನ್ನು ಒದಗಿಸತಕ್ಕ ಬಗ್ಗೆ ಕೂಡಲೆ ರಸ್ತೆ ಕಾಮಗಾರಿಗಳನ್ನು ಪ್ರಾರಂಭ ಮಾಡಬೇಕೆಂದು ಆಜ್ಞೆಯನ್ನು ಕೊಟ್ಟಿದ್ದಾರೆ. ಬಿಜಾಪುರ ಜಿಲ್ಲೆಯ ಏಳು ತಾಲ್ಲೂಕುಗಳಲ್ಲಿ ಯಾವುವು ಕ್ಷಾಮಕ್ಕೆ ಹೆಚ್ಚಿಗೆ ತುತ್ತಾಗಿವೆ, ತೊಂದರೆಯಾಗಿದೆ ಎಂಬುದನ್ನು ಒಪ್ಪುತ್ತೇನೆ. ಹಾಗೆ ಎಲ್ಲೆಲ್ಲಿ ಜನರ ಕಷ್ಟ ಹೆಚ್ಚಾಗಿದೆ ಜನರು ಎಲ್ಲಿ ಸ್ವಲ್ಪ ಚೇತರಿಸಿಕೊಂಡಿದ್ದಾರೆ, ಅನ್ನುವುದನ್ನು ನೋಡಿ ಪರಿಸ್ಥಿತಿಗನುಸಾರವಾಗಿ ಆಯಾ ಸ್ಥಳಗಳಿಗೆ ಪ್ರಾಯಾರಿಟಿ ಕೊಟ್ಟು ಕೆಲಸಗಳನ್ನು ಒದಗಿಸುತ್ತೇವೆ. ಎಲ್ಲಿ ಜನರಿಗೆ ದೊಡ್ಡ ಪ್ರಮಾಣದಲ್ಲಿ ಕೆಲಸಗಳು ಬೇಕಾಗಿವೆ, ಎಲ್ಲಿ ಕೆಲಸಗಳು ಕಡಿಮೆ ಮಟ್ಟದಲ್ಲಿ ಜನರಿಗೆ ಬೇಕೆಂಬುದನ್ನು ನೋಡಿ ಕೆಲಸಗಳನ್ನು ಒದಗಿಸಲಾಗುತ್ತದೆ.

ಇನ್ನು ರಸ್ತೆ ಕೆಲಸಗಳಾದ ಮೇಲೆ ಜನರಿಗೆ ಒದಗಿಸಬಹುದಾದ ಕೆಲಸ ಎಂದರೆ ಸಾಯಿಲ ಕನ್ ಸರ್ವೇಷನ್ ಕೆಲಸ. ಇದನ್ನು ಎಲ್ಲಾ ಕಡೆಗಳಲ್ಲೂ ತೆಗೆದುಕೊಳ್ಳಬಹುದು. ಅಲ್ಲಿ ಎಲ್ಲ ಕಡೆಗಳಲ್ಲೂ ಈ ಕೆಲಸವನ್ನೂ ಕೂಡ ತೆಗೆದುಕೊಳ್ಳಬೇಕೆಂದು ಅಧಿಕಾರಿಗಳಿಗೆ ನಾವು ತಿಳಿಸಿದ್ದೇವೆ. ಆದರೆ ಕೆಲವು ಭಾಗಗಳಿಗೆ ಇದರ ಅವಶ್ಯಕತೆ ಅಷ್ಟಾಗಿಲ್ಲವೆಂದು ಕಾಣುತ್ತದೆ ಅಲ್ಲದೆ ಈ ಕೆಲಸಕ್ಕೆ ಅಗತ್ಯವಾಗಿ ಲೆವಲಿಂಗ್ ಇನ್‌ಸ್ಟ್ರುಮೆಂಟ್ ಒಂದು ಬೇಕಾಗಿದೆ. ಅದನ್ನೂ ಒದಗಿಸೋಣ. ಇನ್ನು ಅಲ್ಲಿ ಜನರಿಗೆ ಕೊಟ್ಟ ಮೇಲೆ ಅವರು ಸರಿಯಾಗಿ ಕೆಲಸ ಮಾಡುತ್ತಿದ್ದಾರೆಯೇ ಅಥವಾ ಇಲ್ಲವೇ ಎಂಬುದನ್ನು ಸೂಪರವೈಜ್ ಮಾಡಲು ಜನರಿಗೆ 15 ದಿನಗಳ ಒಂದು ಶಿಕ್ಷಣವನ್ನು ಕೊಡುವುದಕ್ಕೂ ವ್ಯವಸ್ಥೆ ಮಾಡಲಾಗುವುದು. ಈ ಎಲ್ಲ ಕಾರ್ಯಗಳಿಗೂ ಈಗಾಗಲೇ ಬಜೆಟ್ಟಿನಲ್ಲಿ ಒಂದು ಕೋಟಿ ರೂಪಾಯಿಗಳನ್ನು ಒದಗಿಸಲಾಗಿದೆ. ಇನ್ನೂ ಸ್ವಲ್ಪ ಹಣ ಜಾಸ್ತಿಯಾದರೂ ಚಿಂತೆ ಇಲ್ಲ ಒದಗಿಸುತ್ತೇವೆ.

ಇನ್ನು ನಮ್ಮ ಪಾಟೀಲರು, ಇಂಡಿ ಮತ್ತು ಸಿಂಧಗಿ ತಾಲ್ಲೂಕುಗಳಲ್ಲಿ ಸಾಯಿಲ ಕನ್‌ಸರ್ವೇಷನ್ ಕೆಲಸವೇನೂ ಬೇಕಾಗಿಲ್ಲ, ಅಲ್ಲಿ ಒಂದು ಸಾವಿರ ಬಾವಿಗಳನ್ನು ತೆಗೆಸಿಕೊಟ್ಟರೆ ಸಾಕೆಂದು ನನ್ನ ಹತ್ತಿರ ಬಂದು ತಿಳಿಸಿದ್ದಾರೆ. ಅದಕ್ಕೆ ನಾನು ಈಗ ಲ್ಯಾಂಡ್ ಮಾರ್ಟಗೇಜ್ ಬ್ಯಾಂಕಿನವರಿಗೆ ಸರ್ಕಾರದ ಪರವಾಗಿ ಒಂದು ಕೋಟಿ ರೂಪಾಯಿಗಳನ್ನು ಕೊಟ್ಟರೆ ಅವರು ಅದರ ಜೊತೆಗೆ ಒಂದು ಒಂದೂವರೆ ಕೋಟಿ ಹಾಕಿ ಹಣವನ್ನು ಜನರಿಗೆ ಸಾಲವಾಗಿ ಕೊಡುವುದಕ್ಕೆ ಸಾಧ್ಯವಾಗುತ್ತದೆ. ಆ ಕಾರ್ಯಕ್ರಮವನ್ನು ಸರ್ಕಾರದವರು ಕೈಗೊಳ್ಳುವುದಕ್ಕೆ ಸಿದ್ಧವಾಗಿದ್ದಾರೆ. ಅದಕ್ಕೆ ನಾನು ಶ್ರೀಮಾನ್ ಪಾಟೀಲರಿಗೇ ಹೇಳಿದ್ದೇನೆ. ನಿಮಗೆ ಅಲ್ಲಿ ಎಷ್ಟು ಬಾವಿಗಳನ್ನು ತೆಗೆಸಬೇಕೋ ಅಷ್ಟು ಜನರ ಅರ್ಜಿಯನ್ನೂ ನೀವೇ ಶೇಖರಣೆ ಮಾಡಿ ಅದಕ್ಕೆ ನಡೆಸಬೇಕಾದ ಎಲ್ಲಾ ಶಾಸ್ತ್ರಗಳನ್ನು ನಡೆಸಿ, ತಯಾರುಮಾಡಿಸಿ, ಅಲ್ಲೇ ಸ್ಥಳದಲ್ಲೇ ಸಂಬಂಧಪಟ್ಟ ಅಧಿಕಾರಿಗಳನ್ನೆಲ್ಲಾ ಬರಮಾಡಿಕೊಂಡು ಬಂದರೆ ಡಿ.ಸಿ. ಮತ್ತು ತಾಶೀಲ್ದಾರರನ್ನು ಇಟ್ಟುಕೊಂಡು ಅಲ್ಲಿಯೇ ಆಜ್ಞೆ ಮಾಡುವಂತೆ ಮಾಡುವುದಾಗಿ ತಿಳಿಸಿದ್ದೇನೆ. ಹೀಗೆ ಅಲ್ಲಿ ರಸ್ತೆ ಕೆಲಸ, ಸಾಯಿಲ ಕನ್‌ಸರ್ವೇಷನ್ ಮತ್ತು ಬಾವಿಗಳ ಕೆಲಸ ಇಷ್ಟನ್ನು ಮಾಡುವುದಲ್ಲದೆ, ಅಲ್ಲಿ ಮೈನರ್ ಇರಿಗೇಷನ್ ಕೆಲಸ ಮಾಡುವುದಕ್ಕೆ ಎಲ್ಲೆಲ್ಲಿ ಸಾಧ್ಯತೆ ಇದೆ, ಎಲ್ಲೆಲ್ಲಿ ಅಂಥ ಕೆಲಸಗಳು ಮಂಜೂರಾಗಿವೆ ಎಂಬುದನ್ನು ನೋಡಿ ಅವುಗಳನ್ನು ಕೈಗೊಳ್ಳುವುದಕ್ಕೂ ಏರ್ಪಾಡನ್ನು ಮಾಡಲಾಗುತ್ತದೆ. ಇನ್ನು ಬಿಜಾಪುರ ಜಿಲ್ಲೆಯಲ್ಲಿ ಸ್ಮಾಲಫಾರ್ಮರ್ಸ್ ಫೋರಂಗಳೆಂದು ಇವೆ. ಅವುಗಳಿಗೂ ಮತ್ತು ಲ್ಯಾಂಡ್ ಆರ್ಮಿ ಅವುಗಳಿಗೂ ಈ ರೂರಲ ವರ್ಕ್ಸ ಅನ್ನು ತೆಗೆದುಕೊಳ್ಳುವಂತೆ ತಿಳಿಸಲಾಗುತ್ತದೆ. ಒಟ್ಟಿನಲ್ಲಿ ಜನರಿಗ ಕೆಲಸ ಒದಗಿಸುವುದಕ್ಕೆ ಏನೇನು ಪ್ರಯತ್ನಗಳನ್ನು ಮಾಡಬೇಕೋ ಅವೆಲ್ಲವನ್ನೂ ಮಾಡಲಾಗುತ್ತವೆ. ಜನರಿಗೆ ಬಹಳ ಮುಖ್ಯವಾಗಿ ಬೇಕಾಗತಕ್ಕ ಅನ್ನ ನೀರು ಅದರಲ್ಲೂ ಜನರಿಗೆ ಕುಡಿಯುವ ನೀರನ್ನು ಒದಗಿಸತಕ್ಕ ಕೆಲಸ ಇವುಗಳಿಗೆ ಆದ್ಯತೆಯನ್ನು ಕೊಡಲಾಗುತ್ತದೆ.

ಇನ್ನು ಅಲ್ಲಿ ದನಕರುಗಳಿಗೆ ಸೊಪ್ಪನ್ನು ಕತ್ತರಿಸಿ ಹಾಕುತ್ತಿದ್ದಾರೆಂದು ಹೇಳಿದರು. ಹಾಗೆ ಸೊಪ್ಪನ್ನು ಹಾಕತಕ್ಕದ್ದು ಹೊಸದೇನೂ ಅಲ್ಲ. ಅದು ಬಹಳ ದಿನಗಳಿಂದಲೂ ಇದೆ. ಆದರೆ ಬಿಜಾಪುರದಲ್ಲಿ ದನಗಳಿಗೆ ಸೊಪ್ಪು ಕೂಡ ಸಿಕ್ಕುವುದಿಲ್ಲ. ಈ ದಿವಸ ಆ ಜಾನುವಾರುಗಳಿಗೆ ಮೇವನ್ನು ಒದಗಿಸುವುದಕ್ಕೆ ಸ್ವಲ್ಪ ಕಷ್ಟವೇ. ಕಾರಣ ಇದು ಸೀಜನ್ನಲ್ಲ. ಗಂಗಾವತಿ ಗದ್ದೆ ಬಯಲಿನಲ್ಲಿ ಹುಲ್ಲು ಸಿಕ್ಕುವುದು ಬಹಳ ಕಷ್ಟ. ಖ್ಷ್ಡ್ಟ್ಡ ಡಿಜ ಜಟಿಜ್ಜಿ ಡಿಜ ಡಜಭಷ್ಟಟಿ ಕೆಲವು ಕಡೆ ಸಿಕ್ಕಿದರೂ ಧಾರಣೆ ಒಂದಕ್ಕೆ ಹತ್ತರಷ್ಟನ್ನು ಕೊಡಬೇಕಾಗುತ್ತದೆ. ಆದ್ದರಿಂದ ಸರ್ಕಾರ ಇದನ್ನು ಸರಬರಾಜು ಮಾಡತಕ್ಕ ಬಗ್ಗೆ ಏನಾದರೂ ದುಡ್ಡನ್ನು ಕೊಟ್ಟರೆ ಅದರಿಂದ ಕಷ್ಟದಲ್ಲಿರತಕ್ಕ ರೈತನಿಗೇನೂ ಸಹಾಯವಾಗುವುದಿಲ್ಲ. ದುಡ್ಡು ಮಧ್ಯವರ್ತಿ ಜನರ ಜೇಬಿಗೆ ಬೀಳುತ್ತದೆ. ಇತ್ತ ಸರ್ಕಾರಕ್ಕೂ ನಷ್ಟ ಅತ್ತ ಜಾನುವಾರುಗಳಿಗೂ ಅನುಕೂಲವಾಗುವುದಿಲ್ಲ. ಆದ್ದರಿಂದ ಜೋಳದ ಕಡ್ಡಿಗೆ ಸ್ಥಳದಲ್ಲಿ ಬೆಲೆ ಸ್ವಲ್ಪ ಜಾಸ್ತಿಯಾದರೂ ಚಿಂತೆಯಿಲ್ಲ ನೇರವಾಗಿ ಆ ರೈತರೇ ಕೊಳ್ಳುವಂತೆ ಅವರಿಗೆ ಅನುಕೂಲವಾಗತಕ್ಕ ರೀತಿಯಲ್ಲಿ ಅವರಿಗೆ ತಕಾವಿ ಸಾಲದ ಮೂಲಕ ಹಣವನ್ನು ಒದಗಿಸುವುದಕ್ಕೆ ಏರ್ಪಾಡನ್ನು ಮಾಡಬೇಕೆಂಬ ಉದ್ದೇಶ ಸರ್ಕಾರಕ್ಕಿದೆ. ನಾನು ಹೇಳುತ್ತಿರುವುದು ಎಲ್ಲೆಲ್ಲಿ ಈ ಅನಾನುಕೂಲಗಳಿವೆಯೋ ಆ ಸ್ಥಳಗಳಿಗೆಲ್ಲಾ ಅನ್ವಯಿಸುತ್ತದೆ.

ಇನ್ನು ಕುಡಿಯುವ ನೀರಿನ ಅಭಾವ ಪರಿಹಾರದ ಬಗ್ಗೆ ಇರತಕ್ಕ ಬಾವಿಗಳನ್ನು ಆಳಮಾಡುವುದಕ್ಕೆ ಜಿಲ್ಲಾಧಿಕಾರಿಗಳಿಗೆ ಪೂರ್ಣಾಧಿಕಾರವನ್ನು ಕೊಡಲಾಗಿದೆ. ಕೆರೆ ಅಂಗಳದಲ್ಲಿ ಹಂಗಾಮಿಯಾಗಿ ಬಾವಿಗಳನ್ನು ತೆಗೆಸಲು 2 ಸಾವಿರ ರೂಪಾಯಿಗಳವರೆಗೂ ಖರ್ಚುಮಾಡುವುದಕ್ಕೆ ಅವಕಾಶ ಇತ್ತು. ಈಗ ಅದನ್ನು ಮೂರು ಸಾವಿರಕ್ಕೆ ಏರಿಸಲಾಗಿದೆ. ಈ ಬಾಬಿಗೆ ಒಂದು ಕೋಟಿ ರೂಪಾಯಿಗಳನ್ನು ಒದಗಿಸಲಾಗಿದೆ. ಹೀಗೆ ಜನರ ಕಷ್ಟ ನಿವಾರಣೆಗಾಗಿ ಅನೇಕ ಕಾರ್ಯಕ್ರಮಗಳನ್ನು ಕೈಗೊಳ್ಳಲಾಗಿದೆ ಎಂದು ತಮ್ಮಲ್ಲಿ ವಿನಂತಿ ಮಾಡಿಕೊಳ್ಳುತ್ತೇನೆ.

**ಶ್ರೀ ಎಸ್.ವೈ. ಪಾಟೀಲ** – ತಮ್ಮ ಮಾತನ್ನು ಕೇಳಿ ನಮಗೆಲ್ಲರಿಗೂ ಬಹಳ ಆನಂದವಾಗಿದೆ. ಆದರೆ ಅಲ್ಲಿ ಇನ್ನೂ ಸಾಕ್ಷಾತ್ತಾಗಿ ಕೆಲಸಗಳು ಪ್ರಾರಂಭವಾಗಿಲ್ಲ.

**ಶ್ರೀ ಎಚ್.ಎಂ. ಚನ್ನಬಸಪ್ಪ** (ಲೋಕೋಪಯೋಗಿ ಖಾತೆಯ ಮಂತ್ರಿಗಳು) – ನಿಜವಾಗಿ ಕೆಲಸ ಶುರುವಾಗಿಲ್ಲವೆಂದು ಶ್ರೀ ಪಾಟೀಲರು ಕಳಕಳಿಯಿಂದ ಹೇಳುತ್ತಿದ್ದಾರೆ. ಯಾವ ಊರಿನಲ್ಲಿ ಎಷ್ಟು ಜನರಿಗೆ ಕೆಲಸ ಬೇಕೋ ಅದನ್ನು ನಾಳೆಯೇ ಕೊಡಿಸುತ್ತೇನೆ, ಅವರು ಬೇಕಾದರೆ ಊರಿಗೆ ಹೋಗಿ ಬೇಕಾದವರಿಗೆ ಕೊಡಿಸಲಿ ಎಂದು ಅರಿಕೆಮಾಡಿಕೊಳ್ಳುತ್ತೇನೆ. ಬಹಳ ವಿಷಾದದಿಂದ ವಿಚಾರ ತಿಳಿಸಿದ್ದಾರೆ. ಬಹಳ ಅವಶ್ಯಕವಿದೆ. ಆತುರವಿದೆ, ಹಳ್ಳಿಗಳಲ್ಲಿ ಮನೆಯ ಮುಂದೆ ಜನರಿಗೆ ಕೆಲಸ ಸಿಕ್ಕಬೇಕು ಎಂಬುದನ್ನು ಅರಿತು ತಕ್ಕ ಕ್ರಮ ಕೈಕೊಂಡಿದ್ದೇವೆ. ಸಾಯಿಲ ಕನ್ಸರ್ವೇಷನ್ ಕೆಲಸ ಮತ್ತು ರಸ್ತೆ ಕೆಲಸ ಇವೆರಡನ್ನೂ ಕೈಗೊಳ್ಳಲು ತಿಳಿಸಿದೆ. ರಸ್ತೆ ಕೆಲಸ ಮಾಡಿದರೆ ಊರಿನವರಿಗೆ ಕೆಲಸ ಸಿಕ್ಕುವುದು. ಹತ್ತನೆಯ ತಾರೀಖಿನೊಳಗೆ ಮಾನ್ಯ ಸದಸ್ಯರು ಸಲಹೆ ಕೊಟ್ಟ ಮೇಲೆ ಕಾಂಪ್ರಿಹೆನ್ಸಿವ್ ಆರ್ಡರನ್ನು ಮಾಡಬೇಕು ಎಂದು ಯೋಚನೆ ಮಾಡಿದ್ದೇವೆ. ಮುಖ್ಯಮಂತ್ರಿಗಳ ಅಧ್ಯಕ್ಷತೆಯಲ್ಲಿ ನಿನ್ನೆ ಮೊನ್ನೆ ಮೀಟಿಂಗ್ ನಡೆ ತೀವ್ರತೆಯನ್ನರಿತು ಬಿಜಾಪುರ ಜಿಲ್ಲೆಯ ಯಾವ ತಾಲ್ಲೂಕಿನಲ್ಲಿ ಕೆಲಸವಿಲ್ಲದೆ ತೊಂದರೆಯಾಗಿದೆಯೋ ಅಲ್ಲಿ ರೂಲ್ಸ ಮತ್ತು ಕಾನೂನನ್ನು ತಡೆದು ಕೆಲಸ ಪ್ರಾರಂಭಿಸಬೇಕು ಎಂದು ಹುಕುಂ ಮಾಡಲಾಗಿದೆ. ಈ ದಿವಸವೇ ಬೇಕಾದರೆ ಮಾನ್ಯ ಸದಸ್ಯರ ಕೈಗೆ ಹುಕುಂ ಕೊಡಲಾಗುವುದು.

**ಶ್ರೀ ಎಸ್.ವೈ. ಪಾಟೀಲ** – ನನಗೆ ಇಲ್ಲಿ ಕೆಲಸವಿಲ್ಲ, ಹುಕುಂ ಕಾಪಿ ಕೊಟ್ಟರೆ ಸಾಕು. ನಾನು ಊರಿಗೆ ಹೋಗುತ್ತೇನೆ.

**ಶ್ರೀ ಎಚ್.ಎಂ. ಚನ್ನಬಸಪ್ಪ** – ನಿಮಗೆಷ್ಟು ತೀವ್ರತೆಯಿದೆಯೋ ಅಷ್ಟೇ ತೀವ್ರತೆ ಸರಕಾರಕ್ಕೂ ಇದೆ. ಜನರು ಕೆಲವು ಕಡೆ ಬಹಳ ಕಷ್ಟಪಡುತ್ತಿದ್ದಾರೆಂದು ತಿಳಿದು ಮಾನವೀಯತೆ ದೃಷ್ಟಿಯಿಂದ ಜನರಿಗೆ ಕೆಲಸ ದೊರೆಯುವಂಥ ಕೆಲಸಗಳನ್ನು ಪ್ರಾರಂಭಿಸುವಂತೆ ಅಧಿಕಾರಿಗಳಿಗೆ ಹುಕುಂ ಮಾಡಿದ್ದೇವೆ. ಸಾಯಂಕಾಲ ಬೇಕಾದರೆ ಮಾನ್ಯ ಸದಸ್ಯರಿಗೆ ಅದರ ಕಾಪಿ ಕೊಡುತ್ತೇನೆ. ಅವರು ಜೊತೆಯಲ್ಲೇ ತೆಗೆದುಕೊಂಡು ಹೋಗಬಹುದು. ಇಂಡಿ ಮತ್ತು ಸಿಂದಗಿ ತಾಲ್ಲೂಕುಗಳಲ್ಲಿ ಎಷ್ಟು ಜನಕ್ಕೆ ಕೆಲಸ ಬೇಕೋ ಅಷ್ಟು ಜನರಿಗೂ ಕೆಲಸ ಕೊಡಲು ವ್ಯವಸ್ಥೆ ಮಾಡಿದೆ.

# ಭೂ-ಸುಧಾರಣಾ ಕಾಯದೆ ವಿರೋಧಿ ನಿಲುವು

8ನೇ ಡಿಸೆಂಬರ್ 1972

**ಶ್ರೀ ಎಸ್.ವೈ. ಪಾಟೀಲ** (ಸಿಂದಗಿ) – ಮಾನ್ಯ ಅಧ್ಯಕ್ಷರೇ, ಲ್ಯಾಂಡು ರಿಫಾರಂಸ್ ಅಮೆಂಡುಮೆಂಟ್ ಬಿಲ್ಲಿನ ಮೇಲೆ ಕೆಲವು ದಿನಗಳಿಂದ ಇಲ್ಲಿ ಚರ್ಚೆಯಾಗುತ್ತಿದೆ. ಈ ಚರ್ಚೆಯನ್ನು ನೋಡಿದರೆ ಸಾಧಾರಣವಾಗಿ ಈ ಭೂಮಿ ವಿಷಯವಾಗಿ ಯಾವುದೋ ಕೆಲವು ವಿಚಾರಗಳನ್ನು ಪ್ರಸ್ತಾಪ ಮಾಡುತ್ತಾ ನಮ್ಮ ಮಾನ್ಯ ಮಿತ್ರರನೇಕರು ಎಂದರೆ ಶ್ರೀ ಕೋಣಂದೂರು ಲಿಂಗಪ್ಪನವರು ಹಾಗೂ ಇನ್ನಿತರ ಮಿತ್ರರು ಇಲ್ಲಿ ಹೇಳಿದುದನ್ನೆಲ್ಲಾ ಕೇಳಿದ್ದೇನೆ. ಆದರೆ ನಮ್ಮ ದೇಶದಲ್ಲಿ ತತ್ವ ಪ್ರತಿಪಾದನೆ ಮಾಡತಕ್ಕದ್ದು ಬಹಳ ಸುಲಭ. ಆದರೆ ಆ ತತ್ವವನ್ನು ಅನುಷ್ಠಾನಕ್ಕೆ ತರುವುದು ಬಹಳ ಕಠಿಣ. ಭೂಮಿ ಎಂದರೇನು? ಅದು ರೈತನ ಕೈಯಲ್ಲಿ ಬಂದು ಅದು ಯಾವ ರೀತಿ ಇಲ್ಲಿಯವರೆಗೆ ಉಳಿದಿದೆ? ಈ ಭೂಮಿಯನ್ನು ಅನ್ ಅಥೆರೈಸ್ಡ್ ಆಗಿ ಕೊಟ್ಟಿದ್ದರೋ ಹೇಗೆ? ಇಲ್ಲವೇ ಭೂಮಿಯನ್ನೇನಾದರೂ ಕಳ್ಳತನ ಮಾಡಿ ತೆಗೆದುಕೊಂಡು ಬಂದಿದ್ದಾರೆಯೋ ಹೇಗೆ? ಇಂದಿನವರೆಗೂ ಅನಾಥನಾಗಿದ್ದ ರೈತ ಇಲ್ಲಿಯವರೆಗೂ ಜನಕ್ಕೆ ಅನ್ನ ಒದಗಿಸಿಕೊಡುತ್ತಿದ್ದ. ಇಂದು ಇಂತಹ ರೈತನ ಮೇಲೆ ಗಧಾಪ್ರಹಾರವಾಗುತ್ತಿದೆ. ಈ ಬಿಲ್ಲನ್ನು ನೋಡುವಾಗ ನಾನೇನೂ ಇಲ್ಲಿ ಹೆಚ್ಚು ಭೂಮಿ ಉಳ್ಳವರ ಪರವಾಗಿ ಮಾತನಾಡುತ್ತಿಲ್ಲ. ಮತ್ತು ನನಗೇನೂ ಇವರನ್ನು ಸಪೋರ್ಟ್ ಮಾಡಲು ನನ್ನಲ್ಲಿ ಭೂಮಿ ಏನು ಇಲ್ಲ. ಇದರಿಂದ ಬಡವರ ಕಲ್ಯಾಣ ಹೇಗೆ ಆಗುತ್ತದೆ ಎನ್ನುವುದರ ಬಗ್ಗೆ ಇಲ್ಲಿ ಹೇಳುತ್ತಿದ್ದೇನೆ. ಬಹು ಜನರಿಗೆ ಅನುಕೂಲವಾಗುವಂತೆ ಮತ್ತು ಬಡವರಿಗೆ ಕಲ್ಯಾಣವಾಗುವಂತೆ ಇದರಲ್ಲಿ ವಿಚಾರ ಮಾಡುವುದು ಅವಶ್ಯವಾಗಿದೆ. ಮುಖ್ಯವಾಗಿ ಭಾರತ ದೇಶದೊಳಗ ಅನ್ನ ವಸ್ತುಗಳಿಗಾಗಿ ಪರಾವಲಂಬನೆಯನ್ನು ಮಾಡದೆ ಭೂಮಿಯ ಮುಖೇನ, ಭೂಮಿಯನ್ನು ಅಭಿವೃದ್ಧಿ ಮಾಡಿಕೊಂಡು ಅನ್ನ ಸಮಸ್ಯೆ ಹಾಗೂ ಅರಿವೆ ಸಮಸ್ಯೆಯನ್ನು ಬಗೆಹರಿಸಬೇಕಾದರೆ ಇದರಿಂದ ಏನು ಪರಿಣಾಮವಾಗುತ್ತದೆ ಎನ್ನುವುದನ್ನು ವಿಚಾರ ಮಾಡುವುದು ಅತ್ಯಾವಶ್ಯಕ. ಅನ್ನವನ್ನು ಕೊಡಬೇಕಾದರೆ ನಾವು ಮೆಕನೈಸೇಷನ್ ಕಲ್ಟಿವೇಷನ್ ಎಂದರೆ ಯಾಂತ್ರಿಕ ಸಹಾಯದಿಂದ ಹೆಚ್ಚು ಉತ್ಪತ್ತಿ ಮಾಡಲು ಇದರಿಂದ ಹೇಗೆ ಆದೀತು ಎನ್ನುವುದು ವಿಚಾರ ಮಾಡುವುದು ಅವಶ್ಯಕವಾಗಿದೆ. ಈ ಬಿಲ್ಲು ಹೇಗೂ ಸೆಲೆಕ್ಟ ಕಮಿಟಿಗೆ ಹೋಗುತ್ತಿರುವುದರಿಂದ ನಾನು ಹೆಚ್ಚು ಮಾತನಾಡಲು ಹೋಗದೆ ಕೇವಲ ಕೆಲವು ಅಂಶಗಳ ಬಗ್ಗೆ ಇಲ್ಲಿ ಹೇಳುತ್ತೇನೆ. ಇದರೊಳಗೆ 16 ಕಿಲೊ ಮೀಟರು ದೂರದೊಳಗೆ ಇರುವವರಿಗೆ ಮಾತ್ರ ಭೂಮಿ ಇಟ್ಟುಕೊಳ್ಳಲು ಅವಕಾಶವಿದೆ ಎನ್ನುವುದು ಇದೆ. ಸಾಧಾರಣವಾಗಿ ಒಬ್ಬರು ಗಂಡ ಸತ್ತ ಹೆಂಡತಿ ಹಾಗೂ ಅವರ ಮಕ್ಕಳು ಇದ್ದರೆ ಅವರಿಗೆ ಸ್ವಲ್ಪ ಜಮೀನು ಇದ್ದರೆ ಇದರಲ್ಲಿರುವಂತೆ 16 ಕಿಲೋ ಮೀಟರು ಒಳಗೆ ಇರಬೇಕಾಗುತ್ತದೆ. ಉದಾಹರಣೆಗೆ ಬಿಜಾಪುರ ಜಿಲ್ಲೆಯಲ್ಲಿರುವ ಒಂದು ಹಳ್ಳಿಯಲ್ಲಿ ಇರುವ ಇವರು ಧಾರವಾಡಕ್ಕೋ ಇಲ್ಲವೇ ಬೇರೆ ಒಂದು ಜಿಲ್ಲೆಗೋ ಹೋಗಿ ಅವರ ಮಕ್ಕಳ ವಿದ್ಯಾಭ್ಯಾಸ ಮಾಡಲು

ಎಂದರೆ ಎಂ.ಎ. ಮಾಡಿಸಲು ಇಲ್ಲವೇ ಎಂ.ಬಿ.ಬಿ.ಎಸ್. ಓದಿಸಲು ಹೋಗಬೇಕಾಗಿ ಬರುತ್ತದೆ. ಶಿಕ್ಷಣ ಕೊಡಿಸುವುದಕ್ಕಾಗಿ ಇವರು ಭೂಮಿಯನ್ನೇ ನಂಬಿಕೊಂಡು ಜೀವನ ನಡೆಸಬೇಕಾಗಿ ಬರುತ್ತದೆ. ಇಂತಹ ಬಡವರ ಬಗ್ಗೆ ಏನು ಮಾಡಬೇಕು ಎನ್ನುವುದನ್ನು ಸ್ಪಷ್ಟವಾಗಿ ಇಲ್ಲಿ ವಿಚಾರ ಮಾಡುತ್ತಿದ್ದಾರೆ. ರೈತರ ಮಕ್ಕಳು ಬೇರೆ ಕಡೆಗೆ ಹೋಗಿ ವಿದ್ಯಾಭ್ಯಾಸ ಮಾಡಿ ಸುಧಾರಣೆ ಮಾಡಿಕೊಳ್ಳಲು ಅವಕಾಶ ಮಾಡಬೇಕಾಗುತ್ತದೆ. ನಮ್ಮ ರಾಜ್ಯದಲ್ಲಿ ಹಂಚಲು ಸುಮಾರ್ ನಲವತ್ತು ಲಕ್ಷ ಎಕರೆ ಸಿಗುತ್ತದೆ ಎನ್ನುವ ಒಂದು ವಿಚಾರವನ್ನು ಸರ್ಕಾರದವರು ಹೇಳಿದರು. ಆದರೆ ನನಗೆ ತಿಳಿದ ಮಟ್ಟಿಗೆ ಐವತ್ತು ಸಾವಿರ ಎಕರೆ ಭೂಮಿ ಕೂಡ ಬರುವುದಿಲ್ಲ. ಇದರಂತೆ ಹಂಚಿಕೆ ಮಾಡಲು ಹೋದರೆ ಇಂದಿನ ರೈತರ ಸ್ಥಿತಿಯಲ್ಲಿ ಅರ್ಧ ಎಕರೆ ಕೂಡ ಬರುವುದಿಲ್ಲ. ರೈತರು ತಮ್ಮಲ್ಲಿದ್ದ ಹಣವನ್ನೆಲ್ಲಾ ಭೂಮಿಯ ಮೇಲೆ ಹಾಕಿಕೊಂಡು ಅದನ್ನು ಕಾಪಾಡಿಕೊಂಡು ಅನುಭವಿಸಿಕೊಂಡು ಬರುತ್ತಿದ್ದಾರೆ. ಸರ್ಕಾರ ಇಂತಹವರ ವಿಚಾರ ಮಾಡಿಲ್ಲ ಎಂದು ತೋರುತ್ತೆ. ಹತ್ತಾರು ವರ್ಷಗಳಿಂದಲೂ ಜಮೀನನ್ನು ಸುಧಾರಣೆ ಮಾಡಿಕೊಂಡು ಇವೊತ್ತು ಜನರಿಗೆ ಅನ್ನವನ್ನು ಕೊಡುತ್ತ ಬರುತ್ತಿರುವ ರೈತರ ಮೇಲೆ ಮಾತ್ರ ಇದರಲ್ಲಿ ಮಿತಿ ಇದೆ. ಆದರೆ ದೊಡ್ಡ ದೊಡ್ಡ ಇಂಡಸ್ಟ್ರೀಗಳಲ್ಲಿರುವವರ ಮೇಲೆ ಹಾಗೂ ಅರ್ಬನ್ ಏರಿಯಾದಲ್ಲಿರುವ ಜನರ ಮೇಲೆ ಯಾವ ರೀತಿಯಾದ ಸೀಲಿಂಗ್‌ನ್ನೂ ಮಾಡಿಲ್ಲ. ಇದನ್ನು ಮಾಡದೆ ರೈತರ ಮೇಲೆ ಅನ್ಯಾಯ ಮಾಡಿದರೆ ಸರಿಯಾಗುವುದಿಲ್ಲ. ಇದೂ ಅಲ್ಲದೆ ಇಂದು ಬರಗಾಲದ ಸ್ಥಿತಿ ಬೇರೆ ಬಂದು ರೈತರನ್ನು ಸುಧಾರಿಸಬೇಕೆಂದು ಇರುವಾಗ ಇವರಲ್ಲಿ 16 ಕಿಲೋಮೀಟರಿನಲ್ಲಿರಬೇಕು ಎಂದು ಹೇಳುವುದು ಸರಿಯೇ? ಇದರಿಂದ ಎಷ್ಟು ಅನ್ನ ಸಂಪತ್ತು ಬೆಳೆಯುತ್ತದೆ. ಬೇರೆಯವರಿಗೆ ಏನಾದರೂ ಅನುಕೂಲತೆ ಮಾಡಿ ಕೊಡಬೇಕಾದರೆ ಊರು ಊರಿಗೆ ಗ್ರಾಮ ಕೈಗಾರಿಕೆಯನ್ನು ಮಾಡಿ ಅದರಲ್ಲಿ ಜನರಿಗೆ ತೊಡಗಿಸಬೇಕು. ಭೂಮಿಯ ಮೇಲೆ ಈ ತರಹ ಕಾಯಿದೆ ಮಾಡುವುದಕ್ಕಿಂತ ಭೂಮಿಯಲ್ಲಿ ಉತ್ಪನ್ನ ಯಾರು ಹೆಚ್ಚಿಸುವುದಿಲ್ಲ ಅವನಿಂದ ಭೂಮಿಯನ್ನು ಕಸಿದುಕೊಳ್ಳುತ್ತೇವೆಂದು ಮಾಡಿದರೆ ಆ ದೃಷ್ಟಿಯಿಂದ ರೈತನ ಮೇಲೆ ಅವಲಂಬಿಸಿರುವ ಕೂಲಿಕಾರರ ಪಗಾರ ಹೆಚ್ಚಬಹುದು. ಅದರ ಸಲುವಾಗಿ 16 ಕಿಲೋ ಮೀಟರು ತತ್ವ ಏನಿದೆ ಅದು ಶುದ್ಧ ತಪ್ಪು. ಹೀಗೆ ಮಾಡಿದರೆ ಅವರ ಮಕ್ಕಳನ್ನು ವಿದ್ಯಾಭ್ಯಾಸಕ್ಕೆ ಹಾಕುವುದು ಶಕ್ಯವಿಲ್ಲ, ಮುಂದಿ ಮಕ್ಕಳಿಗೆ ಸಂರಕ್ಷಣೆಯ ಗ್ಯಾರಂಟಿ ಇಲ್ಲ. ಹೆಚ್ಚು ಭೂಮಿಯನ್ನು ಕಸಿದುಕೊಂಡು ಬೇರೆಯವರಿಗೆ ಕೊಡುತ್ತೇವೆಂದು ಹೇಳುವುದಾದರೆ, ಎಲ್ಲಾ ಭೂಮಿಯನ್ನು ಕಸಿದುಕೊಳ್ಳಿ. ಆದರೆ ಅವನ ಮಕ್ಕಳಿಗೆ ನೌಕರಿ ಕೊಡುವುದಾಗಲೀ ಅಥವಾ ಬೇರೆ ರೀತಿಯಲ್ಲಿ ಅವರ ಜೀವನ ಸಂರಕ್ಷಣೆಗಾಗಲೀ ವ್ಯವಸ್ಥೆ ಮಾಡಿ. ಮಕ್ಕಳ ಲಗ್ನ ಮತ್ತೊಂದು ಏನಾದರೂ ಮಾಡಬೇಕಾದರೆ ಯಾವ ರೀತಿ ಮಾಡಬೇಕು ಎನ್ನುವುದನ್ನೂ ಯೋಚನೆ ಮಾಡಿ. ಭಾರತೀಯ ಸಂಸ್ಕೃತಿಯನ್ನು ಬರೇ ಆರ್ಥಿಕ ದೃಷ್ಟಿಯಿಂದ ನೋಡುತ್ತಿದ್ದಾರೆಯೇ ಹೊರತು ನೈತಿಕ ದೃಷ್ಟಿಯಿಂದ ನೋಡುವ ದೃಷ್ಟಿಕೋನವಿಲ್ಲ. ಪರದೇಶಗಳಲ್ಲಿ ಬೇಕಾದಷ್ಟು ದುಡ್ಡು ಹೇಗೆ ಸಿಕ್ಕುತ್ತದೆ? ತಂದೆಯ ರಕ್ತವನ್ನು ತೆಗೆದುಕೊಂಡು ಯಂತ್ರೋಪಕರಣ ಮಾಡುತ್ತಾರೆ. ನಮ್ಮಲ್ಲಿ ಬಲಿದಾನ ಮಾಡಿ ತಂದೆ ತಾಯಿಯನ್ನು ಸಂರಕ್ಷಣೆ ಮಾಡುತ್ತಾರೆ. ನಮ್ಮಲ್ಲಿ

ಭೂಮಿ ತಾಯಿ ಎನ್ನುವ ಪದವನ್ನು ಉಪಯೋಗ ಮಾಡುತ್ತೇವೆ. ಅದು ಒಂದು ವಸ್ತುವಲ್ಲ. ಅದು ಒಂದು ವಸ್ತು ಎಂದು ಕೆಲವು ಮಾನ್ಯ ಸ್ನೇಹಿತರು ಹೇಳಿದರು. ಅದು ಸರಿಯಾದ ಮಾತಲ್ಲ. ನಾನು ಒಟ್ಟಿನಲ್ಲಿ ಹೇಳುವುದಾದರೆ 16 ಕಿಲೋ ಮೀಟರ್ ದೂರವೇನಿದೆ ಅವ್ಯವಹಾರಿಕ, ಇದರಿಂದ ತೊಂದರೆಯಾಗುತ್ತದೆ. ಇದನ್ನು ಇಡಬಾರದು ಎಂದು ಹೇಳುತ್ತೇನೆ.

ಕಾಯಿದೆ ಮಾಡುವ ಕಾಲಕ್ಕೆ ಸ್ಪಷ್ಟವಾದ ಅರ್ಥವಿರಬೇಕು. ವಕೀಲರಿಗೆ ಮಾತ್ರ ಅರ್ಥವಾಗುವಂತೆ ಇರಬಾರದು. ಅದರಿಂದ ಏನು ಕಾಂಪ್ಲಿಕೇಶನ್ ಉತ್ಪನ್ನವಾಗಬಾರದು. ಕುಟುಂಬದ ವ್ಯಾಖ್ಯೆಯಲ್ಲಿ ಏನು ಹೇಳಿದ್ದಾರೆಂದರೆ ಅಲ್ಪ ವಯಸ್ಸಿನ ಮಕ್ಕಳು, ತಂದೆ ತಾಯಿ ಎಂದು ಮಾತ್ರ ಹೇಳಿದ್ದಾರೆ. ವಯಸ್ಸಾದ ಮಕ್ಕಳು ಇದರೊಳಗೆ ಬರುವುದಿಲ್ಲ. ವಯಸ್ಸಾದ ಮಕ್ಕಳಿಗೆ ಪ್ರತ್ಯೇಕ ಸೀಲಿಂಗ್ ಇದೆ ಎಂದು ಅರ್ಥಮಾಡಬಹುದು ಎಂದು ಕೆಲವರು ಹೇಳುತ್ತಾರೆ. ಇಂಥದಕ್ಕೆ ಯಾವುದೇ ರೀತಿಯಲ್ಲಿ ಆಸ್ಪದ ಕೊಡದೆ ಸ್ವಚ್ಛವಾಗಿ ವಯಸ್ಸಿಗೆ ಬಂದ ಮಗನಿಗೆ ಏನು ವ್ಯವಸ್ಥೆ ಇದೆ ಎನ್ನುವುದನ್ನು ಕಾಯದೆಯಲ್ಲಿ ಸ್ಪಷ್ಟಪಡಿಸಬೇಕು.

ರಿಟ್ರಾಸ್ಪೆಕ್ಟಿವ್ ಎಫೆಕ್ಟ್ ಎಂದು ಇದೆ. ಯಾವುದೇ ಕಾಯದೆಯನ್ನು ಮಾಡುವ ಕಾಲಕ್ಕೆ ಹಿಂದಿನ 10 ವರ್ಷಗಳಿಂದ ಲಾಗು ಮಾಡಬೇಕು ಎನ್ನುವ ಶಬ್ದಗಳನ್ನು ಹಾಕಿದರೆ ಹೇಗೆ ಎನ್ನುವ ಬಗ್ಗೆ ಒಂದು ಮಾತು ಹೇಳುತ್ತೇನೆ. ಎಷ್ಟೋ ಜನ ಮಾರಾಟ ಮಾಡಿ ಹಣ ತೆಗೆದುಕೊಂಡಿದ್ದಾರೆ. ಭೂಮಿಯ ಬೆಲೆ ಕೊಡಬೇಕಾದರೆ, ರೊಕ್ಕ ಎಲ್ಲಿಂದ ತಂದು ಕೊಟ್ಟಿದ್ದಾನೆ? ಸರ್ಕಾರದಲ್ಲಿ ಇದಕ್ಕೆ ಬೇಕಾದ ಅಂಕಿ ಅಂಶಗಳಿರುವುದಿಲ್ಲ. ಒಂದು ಮನೆಯನ್ನು ಮಾರಿ ಹೊಲ ತೆಗೆದುಕೊಂಡಿರಬಹುದು, ಮತ್ತೊಂದು ಆಸ್ತಿಯನ್ನು ಮಾರಿ ತೆಗೆದುಕೊಂಡಿರಬಹುದು. ಮತ್ತೆ ಹೀಗೆ ಕಾಯದೆ ಬರುತ್ತದೆ ಎನ್ನುವ ಪರಿಜ್ಞಾನ ಅವನಿಗೆ ಇರಲಿಲ್ಲ. ಇಂಥ ಪರಿಸ್ಥಿತಿಯಲ್ಲಿ ಹತ್ತು ವರ್ಷಗಳ ಹಿಂದಿನಿಂದ ಈ ಕಾಯಿದೆಯನ್ನು ಲಾಗು ಮಾಡುತ್ತೇವೆಂದರೆ ತೊಂದರೆಯಾಗುತ್ತದೆ. ನಾನು ಒಂದು ಉದಾಹರಣೆಯನ್ನು ಕೊಟ್ಟರೆ ಯಾರು ಬೇರೆ ರೀತಿಯಲ್ಲಿ ಭಾವಿಸಬಾರದು.  ಒಂದು ಕನ್ಯೆಗೆ ಲಗ್ನವಾಗಿ ಹತ್ತು ವರ್ಷಗಳಾಗಿರುತ್ತವೆ. ಹತ್ತು ವರ್ಷಗಳ ನಂತರ ಕನ್ಯೆಯನ್ನು ಬಿಟ್ಟುಕೊಡು ನಿನಗೆ ಹೇಗಾದರೂ ವಯಸ್ಸಾಗಿದೆ ಎಂದು ಹೇಳುವ ರೀತಿಯಲ್ಲಿ ಕಾಯಿದೆಗಳು ಆಗಬಾರದು. ಆ ವಸ್ತು ಪ್ರೀತಿಯ ಸಂಬಂಧ, ಆ ವಸ್ತು ವ್ಯವಹಾರಕ್ಕೆ ಸಂಬಂಧಪಟ್ಟುದಲ್ಲ, ಆದ್ದರಿಂದ ರಿಟ್ರಾಸ್ಪೆಕ್ಟಿವ್ ಎಫೆಕ್ಟ್ ಎನ್ನುವುದು ಶುದ್ಧ ತಪ್ಪು ಇದೆ. ಕಾಯದೆಯನ್ನು ಜಾಯಿಂಟ್ ಸೆಲೆಕ್ಟ್ ಸಮಿತಿಗೆ ಕಳುಹಿಸಿದಂದಿನಿಂದ. ಅಥವಾ ಬಿಲ ಸಭೆಯ ಮುಂದೆ ಮಂಡಿಸಿದಂದಿನಿಂದ ಅಥವಾ ಕಾಯದೆ ಇಲ್ಲಿ ಪಾಸ್ ಆದಂದಿನಿಂದ ಎಂದು ಬೇಕಾದರ ಹೇಳಬಹುದು. ಈ ಎಲ್ಲ ದೃಷ್ಟಿಯಿಂದ ರಿಟ್ರಾಸ್ಪೆಕ್ಟಿವ್ ಎಂದು ಏನು ಹೇಳಿದ್ದಾರೆ ಅದು ಆಗಬಾರದು.

ಬಹಳಷ್ಟು ಸ್ನೇಹಿತರು ಮಾತನಾಡುತ್ತಾ, ಸ್ಕೇರ್ಸಿಟಿ ಏರಿಯಾದಲ್ಲಿ ಏಳನೇ ವರ್ಗವನ್ನು ಬಿಟ್ಟು ಎಂಟನೇ ವರ್ಗವನ್ನು ಮಾಡಬೇಕೆಂದು ಹೇಳಿದರು. ಸ್ಕೇರ್ಸಿಟಿ ಏರಿಯಾ ಎಂದರೆ ಏನು? ಎಂದು ಅದರ ಸ್ಪೆಲಿಂಗ್ ಓದಿ ತಿಳಿಯತಕ್ಕ ಮಾತಲ್ಲ. ಕನ್ನಡದಲ್ಲಿ 'ಬಂಜೆ ಬಲ್ಲಳೇ ಹಡೆವ

ಬೇನೆಯನ್ನು' ಎನ್ನುವ ಗಾದೆ ಇದೆ. ಯಾವ ಹೆಣ್ಣು ಮಗಳು ಮಗನಿಗೆ ಜನ್ಮ ಕೊಡುತ್ತಾಳೆಯೊ ಅವಳ ವಿನಾ ಬೇರೆಯವರಿಗೆ ಅದರ ಕಲ್ಪನೆ ಬರುವುದಿಲ್ಲ. ನಮ್ಮ ಭಾಗದಲ್ಲಿ ದುಷ್ಕಾಲ ಪರಿಸ್ಥಿತಿ ಏನಿದೆ ಅದರ ಬಗ್ಗೆ 1396 ನೇ ಇಸವಿಯ ಗೆಜೆಟ್ಟಿನಲ್ಲಿ ಒಂದು ವಿಚಾರ ಬಂದಿದೆ. ಕಳೆದ 700 ವರ್ಷಗಳಲ್ಲಿ 500ಕ್ಕಿಂತ ಹೆಚ್ಚು ಸಲ ದುಷ್ಕಾಲ ಬಿದ್ದಿದೆ ಎನ್ನುವ ಮಾತನ್ನು ಹೇಳಿದ್ದಾರೆ. ಬಿಜಾಪುರ ಜಿಲ್ಲೆಯ ಲೋಗಾವಿ ಎಂಬ ಊರು ಇದೆ. ಅಲ್ಲಿ ಶ್ರೀ ಎಲ.ಎಚ್. ಬಿದ್ರೆ ಎಂಬುವವರಿಗೆ ನೂರು ಎಕರೆ ಭೂಮಿ ಇದೆ. ಅದನ್ನು ನಾಲ್ಕೈದು ಸಾವಿರಕ್ಕೆ ತೆಗೆದುಕೊಳ್ಳಿ, ಬಂದುದರಲ್ಲಿ ಆಟೋ ಇಡುತ್ತೇನೆ ಎನ್ನುವ ದೃಷ್ಟಿಯಿಂದ ಹೇಳಿದರು. ಅಲ್ಲಿನ ಪರಿಸ್ಥಿತಿ ಹೀಗಿದೆ. ದುಷ್ಕಾಲ ಪರಿಸ್ಥಿತಿ ಬಗ್ಗೆ ಈಗ ಮಾತನಾಡಲಿಕ್ಕೆ ಬರುವುದಿಲ್ಲ. ಬಿಜಾಪುರ ಜಿಲ್ಲೆ ಯಾವತ್ತಿಗೂ ಅತ್ಯಂತ ದುಷ್ಕಾಲ ಬೀಳತಕ್ಕದ್ದು. ಅದಕ್ಕೆ ಆ ಭಾಗದ ಭೂಮಿಯನ್ನು ಏಳನೇ ವರ್ಗದಲ್ಲಿ ತರಕೂಡದು. ಮುಖ್ಯವಾಗಿ ಇಂಡಿ, ಸಿಂದಗಿ ತಾಲ್ಲೂಕುಗಳಲ್ಲಿ, ಎಂಟನೇ ವರ್ಗದಲ್ಲಿ ತರಬೇಕು. ಗುಲ್ಬರ್ಗ, ಬೀದರ, ಬಿಜಾಪುರ, ಬಳ್ಳಾರಿ, ಚಿತ್ರದುರ್ಗ, ಕೋಲಾರ ಇಂಥ ಜಿಲ್ಲೆಗಳಲ್ಲಿ ಯಾವತ್ತಿಗೂ ಮೈಸೂರು ರಾಜ್ಯದಲ್ಲಿ ದುಷ್ಕಾಲ ಬೀಳತಕ್ಕ ಪರಿಸ್ಥಿತಿ ಇದೆ. ಇಲ್ಲಿ ಯಾವ ವರ್ಗಕ್ಕೆ ಭೂಮಿಯನ್ನು ಹಾಕಿದ್ದಾರೆನ್ನುವುದು ಗೊತ್ತಿಲ್ಲ. ದುಷ್ಕಾಲ ಬೀಳತಕ್ಕ ಭಾಗಗಳಲ್ಲಿ ಎಂಟನೇ ವರ್ಗದ ಭೂಮಿ ಎಂದು ಮಾಡಿ 100 ಎಕರೆ ಮಾಡಬೇಕು ಎಂದು ಹೇಳುತ್ತೇನೆ.

12 ಸಾವಿರದ ರೂಪಾಯಿಗಳ ವರಮಾನವಿರುವವರಿಗೆ ಭೂಮಿ ಇರಬಾರದು ಎಂದು ಹೇಳಿದ್ದಾರೆ. ಇದು ನಿವ್ವಳ ವರಮಾನವೇ ಹೇಗೆ ಎನ್ನುವುದು ಗೊತ್ತಿಲ್ಲ. ಉತ್ಪನ್ನ ಎಂದು ಹೇಳಿದ್ದಾರೆ. 12,000 ರೂಪಾಯಿ ಉತ್ಪನ್ನ ಇರುವವನಿಗೆ ಭೂಮಿ ಹೋಯಿತು ಎಂದರೆ ನಾಳೆ ಅವನಿಗೆ ಟಿ.ಬಿ. ಆಯಿತು, ಮತ್ತೊಂದು ರೋಗ ಪ್ರಾಪ್ತವಾಯಿತು, ಅಥವಾ ಅಪಘಾತವಾಗಿ ಕೈಕಾಲು ಹೋಯಿತು ಎಂದರೆ ಇಂಥ ಪರಿಸ್ಥಿತಿಯಲ್ಲಿ ಮುಪ್ಪಿನ ಕಾಲಕ್ಕೆ ಮುಂದಿನ ವಂಶಕ್ಕೆ ಏನು ಮಾಡಬೇಕು ಎನ್ನುವುದನ್ನು ಕೂಡ ಯೋಚನೆ ಮಾಡಬೇಕಾಗಿದೆ. ನನ್ನ ಮಗ ಬಿ.ಎ. ಕಲಿಯುತ್ತಿದ್ದಾನೆ. ಈ ಕಾಯಿದೆ ಬರುತ್ತದೆ ಎಂದು ತಿಳಿದುಕೊಂಡು ನಾಳೆ ಏಪ್ರಿಲ ತಿಂಗಳಲ್ಲಿ ಪರೀಕ್ಷೆ ಆಗುವುದಿದ್ದರೂ ಈಗಲೇ ಬಿಡಿಸಿದ್ದೇನೆ. ಗ್ರಾಜ್ಯುಯೇಟ್ ಆಗುವ ಕಾಳಜಿ ಬೇಡ, ಹೊಲ ಭೂಮಿ ನೋಡಿಕೋ ಎಂದು ಹೇಳಿದ್ದೇನೆ. ಒಂದು ಕುಟುಂಬಕ್ಕೆ 50 ಎಕರೆ ನೂರು ಎಕರೆ ಭೂಮಿ ಇದ್ದರೂ ಭೂಮಿಯ ಸಲುವಾಗಿ ಕಾಲೇಜಿಗೆ ಹೋಗುವುದಕ್ಕೆ ಸಾಧ್ಯವಿಲ್ಲ. ಡಾಕ್ಟರಾಗುವುದಕ್ಕೆ ಶಕ್ಯವಿಲ್ಲ, ಅವನ ಆರ್ಥಿಕ ಪರಿಸ್ಥಿತಿ ಉತ್ತಮವಾಗಲಿಕ್ಕೆ ಶಕ್ಯವಿಲ್ಲ. ದನಗಳ ಹಾಗೆ ಅವರೂ ಬದುಕಿರಬೇಕಾಗುತ್ತದೆ. ಅವರೂ ಅಸಂಬ್ಲಿ ನೋಡುವುದಕ್ಕೆ ಬಂದು ಗ್ಯಾಲರಿಯಲ್ಲಿ ಕುಳಿತು ಪಿಳಿಪಿಳಿ ಕಣ್ಣು ಬಿಟ್ಟುಕೊಂಡು ಇರಬೇಕಾಗುತ್ತದೆ. ಶ್ರೀಮಂತರು ಎಷ್ಟು ಜನ ಇಲ್ಲದವರ ಮೇಲೆ ತಮ್ಮ ಅಧಿಕಾರವನ್ನು ತೋರಿಸುತ್ತಿದ್ದಾರೆ. ಶ್ರೀಮಂತರು ಎಷ್ಟು ಜನ ಬಡವರ ಸಲುವಾಗಿ ಮಾತನಾಡುವವರಿದ್ದಾರೆ? ಎಲ್ಲರೂ ಫಸ್ಟ್ ಕ್ಲಾಸಿನಲ್ಲಿ ಹೋಗುವವರಿದ್ದಾರೆ. ಆದರೆ ನೊಂದವರಿಗೆ ಪ್ರತ್ಯಕ್ಷವಾಗಿ ಸಹಾಯ ಮಾಡುವವರು ಯಾರೂ ಇಲ್ಲ.

ನಾನು ಪ್ರತ್ಯಕ್ಷವಾಗಿ ಅವರನ್ನು ನೋಡಿದ್ದೇನೆ. ಆದರೆ ನನಗೆ ಇಂದಿರಾ ಗಾಂಧಿಯವರ ಪರಿಚಯ ಇಲ್ಲ. ತಾವು ರೈತರ ಕಡೆ ಸರಿಯಾದ ದೃಷ್ಟಿಯಿಂದ ನೋಡಬೇಕು ಎಂದು ನಾನು ಹೇಳಬಯಸುತ್ತೇನೆ. ಒಂದು ವಸ್ತುವನ್ನು ಅಂದರೆ ಭೂಮಿಯನ್ನು ಮತ್ತೊಂದು ಕಡೆಗೆ ಕಸಿದು ಕೊಟ್ಟರೆ ಅದರ ಬೆಳವಣಿಗೆ ಜಾಸ್ತಿ ಆಗುತ್ತದೆ ಎಂದು ಹೇಳುವುದು ಸರಿಯಲ್ಲ. ಅದರ ಬೇಸಾಯ ಮಾಡುವ ರೈತರಿಗೆ ವ್ಯವಸಾಯಕ್ಕೆ ಬೇಕಾದ ಯಂತ್ರೋಪಕರಣ ಸಲಕರಣೆಗಳನ್ನು ಮಾಡಿಕೊಡಿರಿ, ಆ ರೈತರಿಗೆ ಬೇಕಾದ ಬಂಡಿಂಗ್ ಕೆಲಸ ಮಾಡಿಕೊಡಿರಿ, ನೀರಾವರಿ ಕೆಲಸಗಳನ್ನು ಮಾಡಿಕೊಡಿರಿ, ಆ ಕೆಲಸವನ್ನು ಮಾಡಿಕೊಟ್ಟರೆ ಅವನು ಆ ಭೂಮಿಯನ್ನು ಹೆಚ್ಚು ಬೆಳವಣಿಗೆ ಮಾಡುವುದಕ್ಕೆ ಸಾಧ್ಯ. ಅದನ್ನು ಹೇಳಿದರೆ ಒಪ್ಪೋಣ. ಇಡೀ ಭಾರತ ದೇಶದಲ್ಲಿ ಯಾವ ರೈತ ಬೆಳೆದರೂ ಎಲ್ಲರಿಗೂ ಅನ್ನ ಸಿಕ್ಕುತ್ತದೆ. ಇದರ ಬಗ್ಗೆ ನಾನು ಅನೇಕ ವಿಷಯಗಳನ್ನು ಹೇಳಬೇಕೆಂದಿದ್ದೆ. ಆದರೆ ಈ ಮಸೂದೆ ಜಾಯಿಂಟ್ ಸೆಲೆಕ್ಟ್ ಕಮಿಟಿಗೆ ಹೋಗುವುದರಿಂದ ಅಲ್ಲಿ ಅನೇಕ ತಜ್ಞರು ಇದನ್ನು ಕೂಲಂಕುಷವಾಗಿ ಪರಿಶೀಲಿಸಿ ಸರಿಯಾದ ಒಂದು ತಿದ್ದುಪಡಿ ಮಾಡಲಿ ಎಂದು ಸೂಚಿಸ ಬಯಸುತ್ತೇನೆ. ಮತ್ತು ಅದರಲ್ಲಿ 16 ಕಿಲೋಮೀಟರ್ ಅಂತರ ಇರಬೇಕು ಎಂದು ಏನು ಇಟ್ಟಿದ್ದೀರೋ ಅದನ್ನು ತೆಗೆಯಬೇಕು ಎಂದು ಹೇಳುತ್ತೇನೆ. ಮತ್ತು ಈ ಮಸೂದೆಯಲ್ಲಿ ಫ್ಯಾಮಿಲಿ ಡೆಫಿನೆಷನ್‌ನಲ್ಲಿ ಏನು ಒಂದು ಮಿತಿ ಇಟ್ಟಿದ್ದೀರೋ ಅದನ್ನು ಸರಿ ಮಾಡಬೇಕು. ಅದರಲ್ಲಿ ಲಗ್ನ ಆದ ಗಂಡು ಮಕ್ಕಳಿಗೆ ಎಷ್ಟು ಇರಬೇಕು ಅನ್ ಮ್ಯಾರೀಡ್ ಹೆಣ್ಣು ಮಕ್ಕಳಿಗೆ ಎಷ್ಟು ಇರಬೇಕು ಅದನ್ನು ಸ್ಪಷ್ಟವಾಗಿ ಸೂಚಿಸಬೇಕು. ಬಿಜಾಪುರ ಮತ್ತು ಉತ್ತರ ಕರ್ನಾಟಕ ಏರಿಯಾದಲ್ಲಿ ಯಾವಾಗಲೂ ಸ್ಕೇರ್ಸಿಟಿ ಇರುತ್ತದೆ. ಅದನ್ನು 8 ನೇ ತರಗತಿಗೆ ಸೇರಿಸಬೇಕು ಎಂದು ಹೇಳುತ್ತೇನೆ. ಬಿಜಾಪುರ, ಬಾಗೇವಾಡಿ, ಇಂಡಿ, ಸಿಂದಗಿ ಮತ್ತು ಜಮಖಂಡಿ ಇವುಗಳನ್ನು ಕ್ಲಾಸಿಫಿಕೇಷನ್ ಆಫ್ ಲ್ಯಾಂಡ್ಸ್ ನಲ್ಲಿ 8ನೇ ತರಗತಿಗೆ ಸೇರಿಸಬೇಕು. ನಾನು ಈಗ ತಾನೇ ಜಮಖಂಡಿ ಮತ್ತು ಹನಗುಂದನಿಂದ ಬರುತ್ತಾ ಇದ್ದೇನೆ. ಅಲ್ಲಿ ಬೆಳೆ ಏನೂ ಆಗಿಲ್ಲ, ಅಲ್ಲಿ ಬೇರೆ ಒಂದು ಇರ್ರಿಗೇಷನ್ ಕೆನಾಲ ಇದೆ. ಆ ಕಾಲುವೆಯಲ್ಲಿ ನೀರು ಇಲ್ಲ. ಅದು ಆತ್ಮವಿಲ್ಲದ ದೇಹದಂತಿದೆ. ಆದುದರಿಂದ ನಾನು ತಮ್ಮಲ್ಲಿ ಕಳಕಳಿಯಿಂದ ಪ್ರಾರ್ಥನೆ ಮಾಡಿಕೊಳ್ಳುತ್ತೇನೆ ಬಡವರಿಗೆ ಸಾಧಕವಾಗುವಂಥ ಕೆಲಸ ಮಾಡಿ. ಅವರಿಗೆ ಬೇಕಾದರೆ ಸ್ಕಾಲರ್ ಷಿಪ್ ಕೊಡಿ, ಅವರು ಬಿ.ಎ. ಬಿ.ಟಿ. ಬೇಕಾದ್ದು ಓದಿಕೊಳ್ಳಲಿ. ಅವರಿಗೆ ಇಷ್ಟು ಕೊಡಬೇಕು ಎಂದು ರಿಸರ್ವೇಷನ್ ಬೇಕಾದರೆ ಇಟ್ಟುಕೊಳ್ಳಿ. ಅವರಿಗೆ ಯಾವ ವಿದ್ಯಾಭ್ಯಾಸವನಾದರೂ ಮಾಡಿಸಿ, ಅವರಿಗೆ ಬೇಕಾದರೆ ಸ್ಕೂಲ ಟೀಚರ್ ಪೋಸ್ಟ್ ಗೆ ಕಳುಹಿಸಿ. ಆದರೆ ವ್ಯವಸಾಯದಲ್ಲಿ ಅನುಭವ ಇಲ್ಲದೇ ಇರತಕ್ಕಂಥವರಿಗೆ ಜಮೀನು ಕೊಡುವುದಕ್ಕೆ ಹೋಗಬೇಡಿ. ಅನುಭವ ಇಲ್ಲದೇ ಇರತಕ್ಕಂಥವನ ಕೈಯಲ್ಲಿ ಜಮೀನು ಕೊಟ್ಟರೆ ಅವನು ಏನು ಬೆಳೆದಾನು? ಹಳ್ಳಿಗಳಲ್ಲಿ ಎಷ್ಟೋ ಮಂದಿ ರೈತರು ಭೂಮಿಗಾಗಿ ಪ್ರಾಣವನ್ನೇ ಕಳೆದುಕೊಂಡಿದ್ದಾರೆ. ಅವರು ಭೂಮಾತೆ ಎಂದು ಹೇಳುತ್ತಾರೆ. ಅವರು ಎಲ್ಲರಿಗೂ ಆವಶ್ಯಕವಾದ ಆಹಾರವನ್ನು ಬೆಳೆಯುತ್ತಾನೆ. ಇದರಲ್ಲಿ ಪ್ಲಾನಿಂಗ್ ಕಮೀಷನ್‌ನವರೂ ಇರುವುದರಿಂದ ಅವರು ಈ ರೀತಿ

ಮಾಡಿದ್ದಾರೆ. ಆದುದರಿಂದ ಅವರಿಗೆ ನೀವು ಹೇಳಬೇಕು. ಇದರಲ್ಲಿ ಮಹತ್ತರವಾದ ಬದಲಾವಣೆ ಮಾಡಬೇಕು, ಸಾಗುವಳಿಗೆ ಭೂಮಿಯನ್ನು ಹಂಚುವುದರಿಂದ ಅನೇಕರಿಗೆ ಅದರ ಹಕ್ಕು ಹೊರಟು ಹೋಗುತ್ತದೆ. ಇದರಿಂದ ಏನಾಗುತ್ತದೆ ಎಂದರೆ ಇಲ್ಲದೇ ಇದ್ದವರನ್ನು, ಇದ್ದವರನ್ನಾಗಿ ಮಾಡುವುದೇ ಹೊರತು, ಇದ್ದವರಿಗೆ ಅವರಿಗೆ ಬೇಕಾದಂಥ ಸಹಾಯ ಸವಲತ್ತುಗಳನ್ನು ಕೊಟ್ಟು ಅವರನ್ನು ಮುಂದಕ್ಕೆ ತರುವಂತೆ ಮಾಡಬೇಕು ಎಂದು ಹೇಳಬೇಕು. ವ್ಯವಸಾಯದಲ್ಲಿ ಅನುಭವ ಇಲ್ಲದೇ ಇರತಕ್ಕಂಥವರಿಗೆ ಭೂಮಿಯನ್ನು ಕೊಡುವುದಕ್ಕೆ ಹೋಗಬೇಡಿ. ನೀವು ಕೌರವರ ತರಹ ನಡವಳಿಕೆ ಮಾಡಬೇಡಿ. ಬೇಕಾದರೆ ಭೂಮಿ ಇಲ್ಲದೇ ಇರುವವರಿಗೆ ಯಾವುದಾದರೂ ಒಂದು ಇಂಡಸ್ಟ್ರೀಸ್ ಮಾಡಿಕೊಡಿರಿ, ಒಂದು ಮಿಲ ಓಪನ್ ಮಾಡಿರಿ, ಆ ಕಾರ್ಖಾನೆಗೆ ಬೇರೆಯವರನ್ನು ತೆಗೆದುಕೊಳ್ಳಬೇಡಿ, ಭೂಮಿ ಇಲ್ಲದೇ ಇರುವವರನ್ನೇ ತೆಗೆದುಕೊಳ್ಳಿ ಎಂದು ಮಾಡಿರಿ. ಇದರ ಬಗ್ಗೆ ಏನಾದರೂ ಕಾಯದೆ ಮಾಡಿದ್ದೀರಾ?

**ಶ್ರೀ ಕೋಣಂದೂರು ಲಿಂಗಪ್ಪ** – ಹಾಗಾದರೆ ಬಡವರಿಗೆ ಜಮೀನು ಕೊಡಬಾರದು ಎಂದು ನಿಮ್ಮ ಅಭಿಪ್ರಾಯವೇ?

**ಶ್ರೀ ಎಸ್.ವೈ. ಪಾಟೀಲ** – ಅವರಿಗೆ ಕೊಡಬಾರದು ಅಂತಲ್ಲ, ಅವರು ಅದನ್ನು ಸರಿಯಾದ ರೀತಿಯಲ್ಲಿ ಉಪಯೋಗಿಸುವುದಕ್ಕಾಗುವುದಿಲ್ಲ.

**ಶ್ರೀ ಕೋಣಂದೂರು ಲಿಂಗಪ್ಪ** – ಹಾಗಾದರೆ ದೇಶದಲ್ಲಿ ದೊಡ್ಡ ಶ್ರೀಮಂತರಾಗಿರುವ ಟಾಟಾ ಬಿರ್ಲಾರವರಿಗೆ ಮಾರಾಟ ಮಾಡಿ ಬಿಟ್ಟರೆ ಈ ಪ್ರಾಬ್ಲೆಮ್ಮೇ ಬರುವುದಿಲ್ಲ ಅಲ್ಲವೇ?

**ಶ್ರೀ ಎಸ್.ವೈ. ಪಾಟೀಲ** – ಸಾಮಾನ್ಯವಾದ ರೈತನಿಗೂ ಟಾಟಾ ಬಿರ್ಲಾರವರಿಗೂ ಇದರಲ್ಲಿ ಏನು ಸಂಬಂಧ ಇದೆ.

**ಶ್ರೀ ಎಂ.ಎಸ್. ಕೃಷ್ಣನ್** – ಜಮೀನು ಇಲ್ಲದೇ ಇರುವವರಿಗೆ ಕೊಡಬೇಕಾದರೆ ಜಮೀನು ಇರುವವರ ಹತ್ತಿರ ತೆಗೆದುಕೊಂಡು ಕೊಡಬೇಕಲ್ಲವೇ? ತೆಗೆದುಕೊಳ್ಳದೇ ಇದ್ದರೆ ಹೇಗೆ ಕೊಡುವುದಕ್ಕಾಗುತ್ತದೆ?

**ಶ್ರೀ ಎಸ್.ಎಂ. ಶಿರನಾಳಿ ಚಂದ್ರಶೇಖರ್** – ಮಾನ್ಯ ಎಸ್.ವೈ. ಪಾಟೀಲರು ಜನಸಂಘದ ಪಾರ್ಟಿಯೊಂದಿಗೆ ಮೈತ್ರಿ ಮಾಡಿದ್ದರಿಂದ ಅವರು ಈ ರೀತಿ ಮಾತನಾಡುತ್ತಾ ಇದ್ದಾರೆ.

**ಶ್ರೀ ಎಸ್.ವೈ. ಪಾಟೀಲ** – ಹಿಂದುಸ್ತಾನದ ಜನತೆಯ ಕಲ್ಯಾಣಕ್ಕೆ ಈ ರೀತಿ ಒಂದು ಸುಧಾರಣೆ ಮಾಡಬೇಕು ಎಂದು ಹೇಳುತ್ತೇನೆ. ಯಾರೇ ಇರಲಿ ಅನುಭವ ಇಲ್ಲದೇ ಇರುವವರಿಗೆ ಒಬ್ಬ ಮನುಷ್ಯನಿಗೆ 2 ಎಕರೆ 3 ಎಕರೆ ಅಂತ ಜಮೀನು ಹಂಚಿದರೆ ಅವನು ದೇಶದಲ್ಲಿ ಹೆಚ್ಚು ಆಹಾರೋತ್ಪನ್ನ ಮಾಡುವುದಕ್ಕಾಗುತ್ತದೆಯೇ? ಒಬ್ಬ ಮನುಷ್ಯ ಒಂದು ಗಿರಣಿಯಲ್ಲಿ

ಕೆಲಸಕ್ಕೆ ಸೇರಿದರೆ ಅವನಿಗೆ ಸಂಬಳ ಬರುತ್ತದೆ ಅಲ್ಲದೇ ಬೋನಸ್ 200 ರೂಪಾಯಿ ಸಿಕ್ಕುತ್ತದೆ. ಅದೇ ಒಬ್ಬ ಮನುಷ್ಯನಿಗೆ ಜಮೀನು ಕೊಟ್ಟರೆ ಅವನಿಗೆ ಯಾವ ತರಹವಾದ ಫೆಸಿಲಿಟೀಸ್ ಕೊಡುವುದಿಲ್ಲ. ಈವೊತ್ತಿನ ದಿವಸ ಭೂಮಿ ಇಲ್ಲದೇ ಇರುವವರು, ಏನಿಕೊಂಡಂಥಾವರು ಒಬ್ಬರು ಡಾಕ್ಟರ್ ಆಗಲಿ, ಒಬ್ಬ ಇಂಜಿನೀಯರ್ ಆಗಲಿ ಅವನು ಬ್ಯಾಂಕ್‌ನಲ್ಲಿ ಇಟ್ಟಿರುವ ಎಸ್.ಬಿ. ಲೆಕ್ಕ ತೆಗೆದು ನೋಡಿದರೆ ಎಷ್ಟು ದುಡ್ಡು ಇಡಿದ್ದಾನೆ ಎನ್ನುವುದು ಗೊತ್ತಾಗುತ್ತದೆ. ಅದೇ ರೀತಿ ಯಾವನು ಭೂಮಿ ಒಡೆಯನಾಗಿದ್ದಾನೋ ಅವನ ಲೆಕ್ಕವನ್ನೂ ನೋಡಿ. ನಮ್ಮ ಹತ್ತಿರ 10 ಜನಕ್ಕೂ ಬ್ಯಾಂಕ್‌ನಲ್ಲಿ ದುಡ್ಡು ಇಡುವ ಯೋಗ್ಯತೆ ಇಲ್ಲ. ಅವನು ಯಾವ ಬ್ಯಾಂಕ್‌ನಲ್ಲೂ ಎಸ್.ಬಿ. ಅಕೌಂಟ್ ಇಟ್ಟಿಲ್ಲ. ಅವನು ಚೆಕ್ ಬರೆಯುವ ಸ್ಥಿತಿಗೇ ಹೋಗುವುದಿಲ್ಲ. ಅವನ ಪರಿಸ್ಥಿತಿ ನೋಡಿದರೆ ಬಹಳ ಶೋಚನೀಯವಾಗಿರುತ್ತೆ. ನನಗೇನೂ ಒಂದು ಎಕರೆ ಭೂಮಿಯೂ ಇಲ್ಲ ಆದರೂ ಈ ವಿಷಯದಲ್ಲಿ ಹೇಳಬೇಕಾದರೆ ಇಂತಿಷ್ಟು ಜನರು ಇಂತಿಷ್ಟು ಕೆಲಸವನ್ನು ಮಾಡಬೇಕು ಎಂತ ಮೊದಲಿನಿಂದಲೂ ದೈವದತ್ತವಾಗಿ ಬಂದಿದೆ, ಆದುದರಿಂದ ಈ ಮಾತನ್ನು ಹೇಳಬೇಕಾಗಿದೆ. ಉದಾಹರಣೆಗೆ ಹೇಳುವುದಾದರೆ ಮಹಾತ್ಮಾಗಾಂಧೀಜಿಯವರು ಇದ್ದರು ಅವರನ್ನು ಮಹಾತ್ಮಾ ಎಂದು ಕರೆಯುತ್ತಿದ್ದರು, ಅದೇ ರೀತಿ ತಾವೆಲ್ಲಾ ಮಹಾತ್ಮಾ ಗಾಂಧೀಜಿಯವರಂತೆ ಆಗುವುದಕ್ಕೆ ಆಗುತ್ತದೆಯೇ? ಈಗ 10 ಪೈಸೇ ಕೊಟ್ಟು ಒಂದು ಪೋಸ್ಟ್ ಕಾರ್ಡ್ ತೆಗೆದುಕೊಂಡು ವಿಷಯಗಳನ್ನು ಬರೆದು ಪೋಸ್ಟ್ ಆಫೀಸಿಗೆ ಹಾಕಿದರೆ ಪೋಸ್ಟ್ ಅಂಡ್ ಟೆಲಿಗ್ರಾಫ್ ಇಲಾಖೆಯವರು ಅದನ್ನು ಒಯ್ಯುತ್ತಾರೆ. ಅದು ಬಿಟ್ಟು ಈಗ ನನ್ನ ಹತ್ತಿರ ಒಂದು ಪೇಪರ್ ಇದೆ ನೋಡಿ, ಅದನ್ನು ಎಲ್ಲಿ ಹಾಕಬೇಕೋ ಅಲ್ಲಿ ಹಾಕದೆ ಈ ರೀತಿ ಹರಿದು ಚೂರು ಮಾಡಿದರೆ ಅದು ಈ ಬುಟ್ಟಿಗೆ ಹೋಗುತ್ತದೆ. ಆದುದರಿಂದ ಯಾರು ಯಾವ ಕೆಲಸವನ್ನು ಮಾಡಬೇಕೋ ಅವರು ಆ ಕೆಲಸವನ್ನು ಮಾಡಬೇಕು. ಒಬ್ಬ ಡಾಕ್ಟರ್ ಆದರೆ ಒಬ್ಬ ಇಂಜನೀಯರ್ ಆದರೆ ನೀವೂ ಆಗುವುದಕ್ಕಾಗುತ್ತದೆಯೇ? ಮತ್ತು ಈಗ ನಮ್ಮ ಅಧ್ಯಕ್ಷರು ಇದ್ದಾರೆ, ಮುಖ್ಯಮಂತ್ರಿಗಳು ಇದ್ದಾರೆ ಆ ಸ್ಥಾನದಲ್ಲಿ ನಾವು ಕೂತುಕೊಳ್ಳುವುದಕ್ಕಾಗುತ್ತದೆಯೇ?

**ಶ್ರೀ ಕೋಣಂದೂರು ಲಿಂಗಪ್ಪ** – ಅಧ್ಯಕ್ಷರೇ, ಅವರು ಈ ರೀತಿ ಉಪಮಾನ ಉಪಮೇಯಗಳನ್ನು ಹೇಳುತ್ತಿದ್ದಾರೆ. ಈ ಬಿಲ್ಲಿಗೆ ಸಂಬಂಧಪಟ್ಟದ್ದು ಹೇಳುತ್ತಾ ಇಲ್ಲ.

**ಶ್ರೀ ಎಸ್.ವೈ. ಪಾಟೀಲ** – ಮಾನ್ಯ ಸದಸ್ಯರಿಗೆ ಇದನ್ನು ಏತಕ್ಕೆ ಹೇಳುತ್ತಿದ್ದೇನೆ ಎಂದರೆ ಈಗ ಸೇಲ್ಸ್ ಟ್ಯಾಕ್ಸ್ ಡಿಪಾರ್ಟ್‌ಮೆಂಟ್ ಇದೆ, ಅವರು ವ್ಯಾಪಾರಸ್ಥರಿಂದ ಹಣ ವಸೂಲು ಮಾಡಬೇಕು ಎಂದು ಇದೆ, ಅದು ಅವರ ಕೆಲಸ ಅವರು ಮಾಡಬೇಕು, ಅದು ಬಿಟ್ಟು ಬೇರೆಯವರು ಹೋದರೆ ಹೊಡೆಯುತ್ತಾರೆ. ಆದುದರಿಂದ ಬಡತನಕ್ಕೆ ಬಡವರು ಹೊಣೆಗಾರರಾಗುತ್ತಾರೆಯೇ ವಿನಃ ಬೇರೆಯವರು ಯಾರೂ ಹೊಣೆಗಾರರಾಗುವುದಿಲ್ಲ. ಆದುದರಿಂದ ನನ್ನ ಉತ್ತರವಾದರೂ ಇಷ್ಟೆ. ಕೋಣಂದೂರು ಲಿಂಗಪ್ಪನವರು ನನಗೆ ವಿರೋಧವಲ್ಲ. ನನಗೆ ಈಗ ಒಂದು ಎಕರೆ ಭೂಮಿಯೂ ಇಲ್ಲ. ನನಗೆ ಮೊದಲು ಒಂದು ಎಕರೆ ಭೂಮಿ ಇತ್ತು ಅದು

ಕೆರೆಯ ಮಗ್ಗುಲಲ್ಲಿ ಇತ್ತು. ಅದನ್ನು ಒಂದು ಕೆರೆ ಕಟ್ಟುವುದಕ್ಕೆ ನಿಮ್ಮ ಜಮೀನು ಕೆರೆ ಹತ್ತಿರ ಇರುವುದರಿಂದ ಅದನ್ನು ಕೊಡಿರಿ ಎಂದು ಕೇಳಿದರು, ಆವಾಗ ಅದನ್ನು ಕೊಟ್ಟುಬಿಟ್ಟೆ.

**ಶ್ರೀ ಎಸ್.ಎಂ. ಶೀರನಾಳಿ ಚಂದ್ರಶೇಖರ್** – ತಮಗೆ ಒಂದು ಎಕರೆ ಭೂಮಿ ಇಲ್ಲದೇ ಇದ್ದರೂ ಕೂಡ ಜಮೀನು ಇದ್ದವರಿಗೇನೇ ಜಮೀನು ಕೊಡಿ ಎಂದು ಅವರ ಪರವಾಗಿಯೇ ವಾದ ಮಾಡುತ್ತಿದ್ದೀರಲ್ಲಾ, ಅವರ ಪರವಾಗಿ ಏನಾದರೂ ವಕಾಲತ್ತು ವಹಿಸಿದ್ದೀರಾ?

**ಶ್ರೀ ಎಸ್.ವೈ. ಪಾಟೀಲ** – ಈಗ ನೋಡಿರಿ ಈ ವಿಷಯದಲ್ಲಿ ಜನರಿಗೆ ಒಂದು ಕಲ್ಪನಾ ಭಾವನೆ ಬಂದಿದೆ. ಮಂತ್ರಿಗಳು ಅಧ್ಯಕ್ಷರಾಗಿಯಾಗಿ ನಮ್ಮ ಪಗಾರ 400 ರೂಪಾಯಿಯನ್ನು ಸ್ಪೇರ್ಸಿಟಿ ಕಂಡೀಷನ್ ಗೆ ಕೊಡಿರಿ ಎಂದರೆ ಕೊಡುತ್ತಾರೆಯೇ? ಹಿಂದೆ ಗಾಂಧಿ ಟೋಪಿಯನ್ನು ಹಾಕಿಕೊಂಡು ಹೋಗುತ್ತಿದ್ದರೆ ನಮ್ಮನ್ನೆಲ್ಲಾ ಪೂಜೆಮಾಡುತ್ತಿದ್ದರು, ಈಗ ಅದೇ ಗಾಂಧಿ ಟೋಪಿಯನ್ನು ಹಾಕಿಕೊಂಡು ಹೋದರೆ ಹೊಡೆಯುವುದಕ್ಕೆ ಬರುತ್ತಾರೆ, ಬಯ್ಯಲಾರದೇ ಇದ್ದಂಥ ಜನರೂ ಬಯ್ಯುವುದಕ್ಕೆ ಬರುತ್ತಾರೆ. ಏತಕ್ಕೆ ಈ ರೀತಿ ಆಯಿತು? ಇದನ್ನು ಯೋಚನೆ ಮಾಡಬೇಕು. ಈಗ ತಾವು ಅಧ್ಯಕ್ಷರಾಗಿದ್ದೀರಿ. ಆ ಜಾಗದಲ್ಲಿ ನಾವು ಕೂತರೆ ನಮಗೆ ನಡೆಸುವುದಕ್ಕೆ ಬರುವುದಿಲ್ಲ. ದಯವಿಟ್ಟು ಕೈ ಜೋಡಿಸಿ ಹೇಳುತ್ತೇನೆ. ಇದು ಭೂಮಿ ಪ್ರಶ್ನೆ. ಸಂಸಾರ ಬಿಡಬೇಕು ಎಂದು ಶ್ರೀ ಶಂಕರಾಚಾರ್ಯರು ಹೇಳಿದ್ದಾರೆ. ಎಲ್ಲರೂ ಹೆಂಡತಿ ಬಿಟ್ಟಿದ್ದಾರೆಯೇ? ಅದರ ಸಲುವಾಗಿ ವೇದಾಂತ ಬೇರೆ, ಸಿದ್ಧಾಂತ ಬೇರೆ. ದಯವಿಟ್ಟು ನಾನು ಹೇಳಿದಂತಹ ಪಾಯಿಂಟು ಜಾಯಿಂಟ್ ಸೆಲೆಕ್ಟ್ ಕಮಿಟಿಯಲ್ಲಿ ನನ್ನ ದೃಷ್ಟಿಯಿಂದ ಸುಧಾರಣೆಯಾಗಬೇಕು. ಅದರ ಸಲುವಾಗಿ ಭೂ ಮಾಲೀಕ ಸಣ್ಣ ಸಣ್ಣ ರೈತ ಅನಾದಿ ಕಾಲದಿಂದ ಭೂಮಿಯನ್ನು ಜೋಪಾನ ಮಾಡಿಕೊಂಡು ಜನರಿಗೆ ಅನ್ನ ಸಹಾಯ ಮಾಡಿದ್ದಾನೆ. ಪುಣ್ಯಾತ್ಮ ಎಂದು ತಿಳಿದರೆ ಸಾಕು ಎಂದು ಅಧ್ಯಕ್ಷರಿಗೆ ವಂದಿಸಿ ನನ್ನ ಮಾತನ್ನು ಮುಗಿಸುತ್ತೇನೆ.

## ಸಿರಸಂಗಿ ವಿದ್ಯಾಸಂಸ್ಥೆಯ ಮೇಲಿನ ಚರ್ಚೆ

29ನೇ ಜೂನ್ 1973

**ಶ್ರೀ ಎಸ್.ವೈ. ಪಾಟೀಲ** (ಸಿಂಧಗಿ) – ಮಾನ್ಯ ಸಭಾಧ್ಯಕ್ಷಣೀಯವರೆ, ಮಾನ್ಯ ಕಕ್ಕಿಲ್ಲಾಯ ಅವರು ಸಮಾಜದಲ್ಲಿ ಮರ್ಡರ್ ಮಾಡತಕ್ಕವರ ಬಗ್ಗೆ ವ್ಯಾಖ್ಯಾನ ಮಾಡಿದರು. ಸಧ್ಯದ ಪರಿಸ್ಥಿತಿಯಲ್ಲಿ ಸಮಾಜ ಶೋಷಣೆ ಮಾಡತಕ್ಕ ವ್ಯಕ್ತಿ ಸಮಾಜದ ಎದುರಿಗೆ ಇರಲಾರ ಎಂದು ಸ್ಪಷ್ಟವಾಗಿ ತಿಳಿಯಬೇಕು. ಸಮಾಜ ಇಲ್ಲದೆ ಸರ್ಕಾರ ಬದುಕವುದಿಲ್ಲ. ಸರ್ಕಾರ ಇಲ್ಲದೆ ಸಮಾಜ ಬದುಕವುದಿಲ್ಲ. ನಾವೂ ಬದುಕವುದಿಲ್ಲ. ಯಾರು ಸಮಾಜವನ್ನು ಶೋಷಣೆ ಮಾಡುತ್ತಾ ಇದ್ದಾರೆ, ಆ ವ್ಯಕ್ತಿಯನ್ನು ಸರ್ಕಾರ ಸಂರಕ್ಷಣೆ ಮಾಡಿದರೆ ಸರ್ಕಾರ ಉಳಿಯುವುದಿಲ್ಲ. ಸಮಾಜವನ್ನು ಶೋಷಣೆ ಮಾಡತಕ್ಕವರು ನಾಶವಾಗುತ್ತಾರೆ. ಇವತ್ತು ಸಮಾಜದಲ್ಲಿ, ಸ್ವಾತಂತ್ರ್ಯ ಬಂದನಂತರ ಸರ್ಕಾರದ

ಕ್ಕೆ ಹೆಚಾ□ಗಿದೆ. ಸಿರಸಂಗಿ ಟ್ರಸ್ಟ್‌ನವರು ಒಂದು ಎಕರೆ ಜಮೀನನ್ನು ಇರಿಗೇಷನ್ ಮಾಡಿದರೆ ಐದು ನೂರು ರೂಪಾಯಿಗಳ ಬೆಳೆಯನ್ನು ಉತ್ಪತ್ತಿ ಮಾಡುತ್ತಾರೆ. ಯಾರು ಬ್ಲಾಕ್ ಮಾರ್ಕೆಟ್ ಮಾಡುತ್ತಿದ್ದಾರೆ ಅವರು ಶೋಷಣೆ ಮಾಡುತ್ತಿದ್ದಾರೆ. ಸಿರಸಂಗಿ ಟ್ರಸ್ಟ್‌ನಿಂದ ಎಷ್ಟೋ ಜನ ದೊಡ್ಡ ದೊಡ್ಡ ಆಫೀಸರ್ಸ್ ಆಗಿದ್ದಾರೆ. ವಿದ್ಯಾವಂತರಾಗಿದ್ದಾರೆ, ಸಮಾಜ ಸುಧಾರಕರಾಗಿದ್ದಾರೆ. ಅದು ಇಂಥ ಕೆಲಸಗಳನ್ನು ಮಾಡುವುದರ ಸಲುವಾಗಿ ಅವರಿಗೆ ಇರತಕ್ಕ ಜಮೀನಿಗೆ ಯಾವ ಸೀಲಿಂಗನ್ನೂ ಇಡಬೇಡಿರಿ, ಅವರು ಮಾಡುವ ಕೆಲಸವನ್ನು ಯಾವ ಸರ್ಕಾರದ ಕೈಯಿಂದಲೂ ಮಾಡುವುದಕ್ಕಾಗುವುದಿಲ್ಲ. ಬಡವರ ಬಗ್ಗೆ ನಿಮಗೆ ಕನಿಕರ ಇದ್ದರೆ, ಇಂಥ ಟ್ರಸ್ಟ್‌ಗಳಿಗೆ ಸೀಲಿಂಗ್ ವಿನಾಯತಿ ಕೊಡ್ರಿ, ಬಾಂಬೆ ಗವರ್ನಮೆಂಟಿನಲ್ಲಿಯೂ ಸಹ ಇದು ಬಹಳ ಚರ್ಚೆಯಾಗಿ ಅವರಿಗೆ ವಿನಾಯತಿ ಕೊಟ್ಟರು. ಸಿರಸಿಂಗಿ ಟ್ರಸ್ಟ್ ಇಲ್ಲದಿದ್ದರೆ ಬಡವರ ಮಕ್ಕಳು ಕ್ರಿಮಿನಲ್ಸ್ ಆಗುತ್ತಿದ್ದರು. ಇದರಿಂದ ದೇಶಕ್ಕೂ ತೊಂದರೆಯಾಗುತ್ತದೆ; ಸರ್ಕಾರಕ್ಕೂ ತೊಂದರೆಯಾಗುತ್ತದೆ. ಸಿರಸಂಗಿ ಟ್ರಸ್ಟ್‌ನವರು ಪೂಜಾರಿಗಳು ಅಲ್ಲ, ಧರ್ಮದರ್ಶಿಗಳು ಅಲ್ಲ, ಇವರು ನಡೆಸತಕ್ಕ ವಿದ್ಯಾಸಂಸ್ಥೆಗೆ ಸೀಲಿಂಗ್ ಅನ್ನು ಲಾಗು ಮಾಡದೆ, ಅವರ ಪರಿಪೂರ್ಣವಾದ ಆಸ್ತಿಯನ್ನು ಬಳಿಸುವುದಕ್ಕೆ ಅವಕಾಶ ಮಾಡಿಕೊಡಬೇಕು. ಈ ಒಂದು ಟ್ರಸ್ಟಿಗೆ ಡೆಪ್ಯೂಟಿ ಕಮೀಷನರ್ ಅವರು ಚೇರ್ಮನ್ ಆಗಿದ್ದಾರೆ. ಅವರು ಸರ್ಕಾರಿ ಅಧಿಕಾರಿ, ಪ್ರೈವೇಟನ್ ವರು ಯಾರೂ ಇಲ್ಲ, ಅದರ ಸಲುವಾಗಿ ಸರ್ಕಾರ ಇದರ ಬಗ್ಗೆ ಸ್ವಲ್ಪ ನಿಗ ಇಟ್ಟರೆ ಒಳ್ಳೆಯದು, ಅಲ್ಲಿ ಉತ್ತಮವಾದ ವ್ಯವಸ್ಥೆ ಇದೆಯೆಂದು ನಮ್ರತೆಯಿಂದ ಹೇಳುತ್ತಾ ಇದ್ದೇನೆ. ಒಂದು ರೂಪಾಯಿ ಉತ್ಪತ್ತಿ ಕೊಡತಕ್ಕ ಜಮೀನಿನಲ್ಲಿ 10 ರೂಪಾಯಿ ಉತ್ಪತ್ತಿ ಮಾಡತಕ್ಕ ಸಾಧ್ಯವಿದೆ. ಅದನ್ನು ಹೇಗೆ ಬೆಳವಣಿಗೆ ಮಾಡಬೇಕು ಎಂದು ಸೂಚನೆ ಮಾಡ್ರಿ. ಸರ್ಕಾರದ ನೇತೃತ್ವದ ಮೇಲೆ ಅದರ ವ್ಯವಸ್ಥೆ ಇರಬೇಕು ಅದರ ಸಲುವಾಗಿ ಹೇಳುತ್ತಾ ಇದ್ದೇನೆ, ಸಿರಸಂಗಿ ಟ್ರಸ್ಟ್ ಏನು ಇದೆ ಅದರ ಭೂಮಿಗೆ ವಿನಾಯತಿ ಕೊಡ್ರಿ ಎಂದು. ದೇಶದಲ್ಲಿ ಹರಿಜನರ ಬಗ್ಗೆ ಬಹಳ ಮಾತನಾಡುತ್ತಾರೆ, ನಾನು ಹೇಳುವುದು ರಾಜ್ಯದಲ್ಲಿ ಎಲ್ಲರೂ ವಿದ್ಯಾವಂತರಾಗಬೇಕು ಎಂದು, ಸಿದ್ಧಗಂಗಾ ಮಠದಲ್ಲಿ ಅವರು ಮಾಡುವಂಥ ಕೆಲಸವನ್ನು ಯಾವ ಸರ್ಕಾರವೂ ಮಾಡುವುದಕ್ಕೆ ಶಕ್ಯವಿಲ್ಲ. ನಮ್ಮ ಮೈಸೂರು ಮಹಾರಾಜರು 1956 ನೇ ಇಸವಿಯಲ್ಲಿ ಅಲ್ಲಿಗೆ ಹೋದ ಕಾಲಕ್ಕೆ, ಅವರು ವಿದ್ಯಾ ಸಂಸ್ಥೆಗಳಿಗೆ ಎಷ್ಟು ಮದದ್ ಮಾಡಿದ್ದಾರೆ ಎನ್ನುವ ಬಗ್ಗೆ ತಮ್ಮ ಆನಂದವನ್ನು ವ್ಯಕ್ತಪಡಿಸಿದರು.

ಮಾನ್ಯ ಕಾಗೋಡು ತಿಮ್ಮಪ್ಪನವರು ಕೋಣಂದೂರು ಲಿಂಗಪ್ಪನವರು ಎಲ್ಲರೂ ಬಡವರ ಸಲುವಾಗಿ ಅನ್ನ ಹಾಕುವ ಪ್ರಯತ್ನ ಮಾಡುತ್ತಿದ್ದಾರೆ. ಮನುಷ್ಯನಿಗೆ ಬುದ್ಧಿ ಇರಬೇಕು. ಇಲ್ಲದಿದ್ದರೆ ದೇಶ ಅಲ್ಲೋಲ ಕಲ್ಲೋಲವಾಗುತ್ತದೆ. ಕಾಂಗ್ರೆಸ್ ಪಾರ್ಟಿ ಮೆಜಾರಿಟಿ ಪಾರ್ಟಿ ಇದೆ. ಅವರಿಗೆ ಏನು ಇನ್‌ಸ್ಟ್ರಕ್ಷನ್ ಇರುತ್ತದೆ. ಆ ಪ್ರಕಾರ ಆ ಪಾರ್ಟಿಯ ಸದಸ್ಯರು ಮಾಡಬೇಕಾಗುತ್ತದೆ. ಆ ಪ್ರಕಾರ ಅವರು ಹೋಗಬೇಕಾಗುತ್ತದೆ. ಆದರೆ ಇದು ಪಾರ್ಟಿ ಪ್ರಶ್ನೆಯಲ್ಲ ಇಡೀ ದೇಶದ ಪ್ರಶ್ನೆಯಾಗಿದೆ. ದೇಶದಲ್ಲಿರುವ ನಿರುಪಯುಕ್ತ ಶಾಲೆಗಳನ್ನು ಮುಚಿ□ಬಿಡಿ. ಸಮಾಜದಲ್ಲಿ ಶೋಷಣೆ ಮಾಡತಕ್ಕ ಸ್ವಾಮಿ ವರ್ಗ ಪೂಜಾರಿ ವರ್ಗ ಯಾರು ಇದ್ದಾರೋ ಅವರ ಮೇಲೆ ಕ್ರಮ ತೆಗೆದುಕೊಳ್ಳಿ,

ಯಾರು ನೀತಿ ಹೀನರು ಇದ್ದಾರೆ ಅವರ ಮೇಲೆ ಕ್ರಮ ತೆಗೆದುಕೊಳ್ಳಿ, ನಾನು ಬೇಡ ಎಂದು ಹೇಳುವುದಿಲ್ಲ. ಶೈಕ್ಷಣಿಕ ಸಂಸ್ಥೆಗಳಿಗೆ ಸಹಾಯ ಮಾಡತಕ್ಕಂಥವುಗಳಿಗೆ ಒಂದು ಸೀಲಿಂಗ್ ಕೊಟ್ಟರೆ, ಸಾಲದು ಶಿಕ್ಷಣ ಸಂಸ್ಥೆಗಳ ಜವಾಬ್ದಾರಿಯನ್ನು ಎಲ್ಲಾ ಸರ್ಕಾರವೇ ತೆಗೆದುಕೊಂಡರೆ ಆಗಬಹುದು. ಆದರೆ ಆ ಕೆಲಸ ಸರ್ಕಾರದ ಕೈಯಿಂದ ಆಗುವುದಿಲ್ಲ. ಯಾವ ಯಾವ ಕಾಲಕ್ಕೆ ಯಾವ ಯಾವ ಸರ್ಕಾರ ಬರುತ್ತದೆ ಎನ್ನುವುದು ಗೊತ್ತಾಗುವುದಿಲ್ಲ. ಹುಚ್ಚಮಾಸ್ತೆಗೌಡರವರೇ ಪರ್ಮನೆಂಟಾಗಿ ಇದ್ದರೆ ವ್ಯಥೆಯಿಲ್ಲ. ಯಾರ್ಯಾರು ಯಾವ ಕಾಲಕ್ಕೆ ಬರುತ್ತಾರೆಂದು ಗೊತ್ತಾಗುವುದಿಲ್ಲ. ಶಾಲೆಗಳಿಗೆ ಸಾಕಷ್ಟು ಭೂಮಿ ಇಲ್ಲದಿದ್ದರೆ ಅವುಗಳನ್ನು ಮುಚ್ಚಬೇಕಾಗಿ ಬರುತ್ತದೆ. ಆದುದರಿಂದ ಸಿರಸಂಗಿ ಟ್ರಸ್ಟ್‌ಗೆ ವಿನಾಯಿತಿ ಕೊಡಬೇಕೆಂದು ಹೇಳುತ್ತೇನೆ. ಅದು ಧಾರವಾಡ ಮತ್ತು ಶಿವಮೊಗ್ಗಾ ಡಿಸ್ಟ್ರಿಕ್‌ನಲ್ಲಿ ವಿದ್ಯಾಶಾಲೆಗಳನ್ನು ನಡೆಸುತ್ತಿದೆ. ಈ ವಿದ್ಯಾ ಸಂಸ್ಥೆಗಳಿಗೆ ಸೀಲಿಂಗ್ ತರಬೇಡಿ, ಕರಿಯಪ್ಪನವರು ವಿದ್ಯಾ ಸಂಸ್ಥೆಗಳನ್ನು ಮೈಸೂರು ರಾಜ್ಯದಲ್ಲಿ ನಡೆಸುತ್ತಿದ್ದಾರೆ. ಅವರು ದೇವರು ಇದ್ದ ಹಾಗೆ. ಯಾವ ಸನ್ಯಾಸಿಯೂ ಮಾಡದಂಥ ಕೆಲಸವನ್ನು ಮುನ್ನ ಕರಿಯಪ್ಪನವರು ಮಾಡಿದ್ದಾರೆ. ಈ ಕಾಯಿದೆ ಬರುತ್ತದೆ ಎಂದು ಗೊತ್ತಿದ್ದರೆ ಶಿಕ್ಷಣ ಸಂಸ್ಥೆಯವರು ಜಮೀನನ್ನು ಸ್ವಂತ ಮಾಡಿಕೊಳ್ಳುತ್ತಿದ್ದರು. ಈ ಶಿಕ್ಷಣ ಸಂಸ್ಥೆಗಳಿಗೆ ಸಾಕಷ್ಟು ಭೂಮಿ ಕೊಟ್ಟು ಸೀಲಿಂಗ್ ಹಾಕಬೇಡಿ ಎಂದು ಹೇಳಿ ನನ್ನ ಮಾತನ್ನು ಮುಗಿಸುತ್ತೇನೆ.

## ಶ್ರೀಮತಿ ಸುಮಿತ್ರಾ ದೇಸಾಯಿ ಪ್ರಕರಣದ ಮೇಲಿನ ಚರ್ಚೆ

28ನೇ ಆಗಸ್ಟ್ 1973

**ಶ್ರೀ ಎಸ್.ವೈ. ಪಾಟೀಲ** (ಸಿಂಧಗಿ) – ಮಾನ್ಯ ಸಭಾಧ್ಯಕ್ಷಿಣಿಯವರೇ, ಕೇವಲ ಸರ್ಕಾರವನ್ನು ಟೀಕೆ ಮಾಡಬೇಕೆಂಬ ಉದ್ದೇಶದಿಂದ ಇದರ ಬಗ್ಗೆ ಚರ್ಚೆ ಮಾಡಲು ಅವಕಾಶ ಮಾಡಿಕೊಡಬೇಕೆಂದು ನಾವು ಕೇಳುತ್ತಿಲ್ಲ. ಆಕೆ ಇಂದು, ಸತ್ತಿದ್ದಾಳೆಯೋ ಅಥವಾ ಬದುಕಿದ್ದಾಳೆಯೋ ಎಂಬುದು ಪ್ರಶ್ನೆ. ಆಕೆ ಬೆಂಗಳೂರಿಗೆ ಬಂದು ಮೊನ್ನೆ ಕಿತ್ತೂರ ಅವರ ಮನೆಗೆ ಹೋದಳು. ನಂತರ ಅಲ್ಲಿಂದ ಯಾವುದೋ ಆಶ್ರಮಕ್ಕೆ ಹೋದಳು. ಅಲ್ಲಿಂದ ಮತ್ತೆಲ್ಲಿಗೆ ಹೋಗಿದ್ದಾಳೆಂಬುದು ಯಾರಿಗೂ ಗೊತ್ತಿಲ್ಲ. ಕರ್ನಾಟಕ ರಾಜ್ಯದಲ್ಲಿ ಸರ್ವೇಸಾಮಾನ್ಯವಾಗಿ ಎಲ್ಲರ ಬಾಯಲ್ಲಿಯೂ ಸಹ ಇದೇ ಮಾತು ಕೇಳಿ ಬರುತ್ತಿದೆ. ಇದರಿಂದ ಕರ್ನಾಟಕ ರಾಜ್ಯಕ್ಕೆ ಅಪಮಾನ ಎಂದು ಹೇಳುತ್ತೇನೆ. ಈ ಸರ್ಕಾರ ನಮ್ಮದು, ಈ ಮಂತ್ರಿ ಮಂಡಲ ನಮ್ಮದು, ಆದಕಾರಣ ಸರ್ಕಾರ ಮತ್ತು ಮಂತ್ರಿಮಂಡಲದ ಗೌರವ ಹೋದರೆ ನಮ್ಮ ಗೌರವವೂ ಸಹ ಹೋದಂತೆ ಆದಕಾರಣ ನಾನು ತಮ್ಮಲ್ಲಿ ಹಾಗೂ ಸರ್ಕಾರದವರಲ್ಲಿ ಅತಿ ನಮ್ರತೆಯಿಂದ ಪ್ರಾರ್ಥನೆ ಮಾಡಿಕೊಳ್ಳುವುದೇನೆಂದರೆ, ಆಕೆ ಎಲ್ಲಿದ್ದಾಳೆಂಬುದನ್ನು ಪತ್ತೆ ಹಚ್ಚಬೇಕು. ಇಂತಹ ಒಂದು ಸಣ್ಣ ಕೇಸನ್ನು ತಪಾಸು ಮಾಡಲು ಇಷ್ಟೊಂದು ಸಮಯಬೇಕೇ ಎಂದು ನಾನು ಕೇಳುತ್ತೇನೆ. ಮಾನ್ಯ ಮುಖ್ಯಮಂತ್ರಿಗಳ ಹೃದಯ

ದೊಡ್ಡದು. ಮಾನ್ಯ ಕಿತ್ತೂರ ಅವರು ನಿರಪರಾಧಿಗಳು ಎಂದು ಮಾತನಾಡುವುದು ಸರಿಯಲ್ಲ. ಆ ರೀತಿ ಹೇಳುವುದರಿಂದ ಅಪರಾಧ ಸಿದ್ಧವಾಗವುದಿಲ್ಲ. ಮೊದಲು ತಾವು ಚರ್ಚೆಗೆ ಅವಕಾಶ ಮಾಡಿಕೊಡಬೇಕು. ಆಗ ಅಪರಾಧಿಗಳು ಯಾರೂ ಎಂಬುದು ತಿಳಿಯುತ್ತದೆ. ಚರ್ಚೆಯ ನಂತರ ಅಪರಾಧಿಗಳು ಯಾರು ಎಂದು ಗೊತ್ತಾಗುತ್ತದೋ, ಅವರಿಗೆ ಶಿಕ್ಷೆಯಾಗಲಿ. ಈ ಕಳಂಕದಿಂದ ನಮ್ಮ ನಾಡಿನಲ್ಲಿಯೇ ಏಕೆ, ಇಡೀ ಭಾರತ ದೇಶದಲ್ಲಿಯೇ ನಮಗೆ ಮೋರೆ ತೋರಿಸಲಾರದ ಪರಿಸ್ಥಿತಿ ಬಂದಿದೆ. ಆದಕಾರಣ ಈ ಕಳಂಕ ನಿವಾರಣೆಯಾಗಬೇಕಾಗಿದೆ. ನಮ್ಮ ರಾಜ್ಯ ಘಟನೆಯಲ್ಲಿ ಪ್ರತಿಯೊಬ್ಬರಿಗೂ ಪ್ರಾಣದ ರಕ್ಷಣೆ ಕೊಡಬೇಕೆಂದು ಹೇಳಿದೆ. ಆದರೆ ಇಂದು ಒಬ್ಬ ಕುಲೀನ ಹೆಣ್ಣು ಮಗಳು ಜೀವ ಸಹಿತ ಇದ್ದಾಳೆಯೇ ಅಥವಾ ಇಲ್ಲವೇ ಎಂದು ಧೈರ್ಯವಾಗಿ ಹೇಳುವುದಕ್ಕೆ ನಿಮಗೆ ಸಾಧ್ಯವಿಲ್ಲವಾಗಿದೆ. ನಿಮಗ ಈ ವಿಚಾರದಲ್ಲಿ ಏನು ಅನಿಸುತ್ತದೋ ನನಗೆ ಗೊತ್ತಿಲ್ಲ, ಆದರೆ ನಮಗ ಮಾತ್ರ ಆಕೆಯ ವಿಚಾರದಲ್ಲಿ ದುಃಖವಾಗಿದೆ. ಆಕೆಯ ಬಗ್ಗೆ ಏನು ಸಂಶಯ ನಮಗೆ ಬಂದಿದೆ ಅದು ಹೋಗಬೇಕಾದರೆ, ಆಕೆಯೇ ಬಂದು ಈ ಪ್ರಕರಣದಲ್ಲಿ ಯಾರು ಯಾರು ಒಳಗೊಂಡಿದ್ದಾರೆ. ಯಾರು ಯಾರು ಎಂಬುದನ್ನು ಹೇಳಬೇಕು, ಮತ್ತು ಇದರ ಬಗ್ಗೆ ಪೂರ್ಣವಾದ ಚರ್ಚೆ ಮಾಡಲು ಅವಕಾಶ ಮಾಡಿಕೊಡಬೇಕೆಂದು ನಮ್ರತೆಯಿಂದ ತಮ್ಮಲ್ಲಿ ಪ್ರಾರ್ಥನೆ ಮಾಡಿಕೊಳ್ಳುತ್ತೇನೆ.

## ಲೋಕಸಭೆ ಸೀಟಿನ ಹೆಚ್ಚಳ

28ನೇ ಆಗಸ್ಟ್ 1973

**ಶ್ರೀ ಎಸ್.ವೈ. ಪಾಟೀಲ** (ಸಿಂದಗಿ) – ಮಾನ್ಯ ಉಪಾಧ್ಯಕ್ಷರೇ...

**ಉಪಾಧ್ಯಕ್ಷರು** – ತಮ್ಮ ಮುಂದೆ ಈ ವಿಷಯದ ಬಗ್ಗೆ ಬಿಲ್ ಇಲ್ಲ. ತಾವು ಯಾವುದರ ಮೇಲೆ ಮಾತನಾಡುತ್ತೀರಿ?

**ಶ್ರೀ ಎಸ್.ವೈ. ಪಾಟೀಲ** – ನಾನು ಅಸೆಂಬ್ಲಿ ಮೆಂಬರ್ ಎಂದು ತಮಗೆ ನೆನಪು ಇದೆಯೋ ಇಲ್ಲವೋ ಎಂದು ನನಗೆ ಅನಿಸುತ್ತದೆ. ಈ ತರಹ ಅಪಮಾನ ಮಾಡಬೇಡಿ. ಬುದ್ಧಿವಂತ ವಕೀಲನಿಗೆ ಯಾವ ತರಹ ಬಿಲ್ ಬೇಕಾಗಿಲ್ಲ. ತಾವು ಹಾಗೆ ಮಾಡಬೇಕು? ಹೀಗೆ ಮಾಡಬೇಕು? ಎಂದು ಹೇಳಿದರೆ ಅದು ನಮಗೆ ಅಪಮಾನ ಮಾಡಿದಂತಾಗುತ್ತದೆ.

**ಉಪಾಧ್ಯಕ್ಷರು** – ತಮ್ಮ ಮುಂದೆ ಬಿಲ್ ಇಲ್ಲ, ಆದುದರಿಂದ ತಮಗೆ ಸಹಾಯ ಮಾಡಲಿಕ್ಕೆ ನಾನು ಹೇಳುತ್ತೇನೆ.

**ಶ್ರೀ ಎಸ್.ವೈ. ಪಾಟೀಲ** – ನನಗ ಅದರ ಸ್ಕೋಪ್ ಗೊತ್ತಿದೆ. ಇದೇನೂ ಡಾ. ಅಂಬೇಡ್ಕರ್ ಬರೆದಂಥ ಒಂದು ದೊಡ್ಡ ಮಹತ್ವವಾದ ಕಾನೂನು ಪುಸ್ತಕವಲ್ಲ. ಇದಲ್ಲಿರುವುದು ಲೋಕಸಭೆಗೆ ಸೀಟು ಹೆಚ್ಚು ಮಾಡುವ ವಿಷಯ ಅಷ್ಟೆ. ಇದು ಸೂಕ್ತ ಉಂಟೋ, ಇಲ್ಲವೋ ಅನ್ನುವ ಬಗ್ಗೆ ಲೋಕಸಭೆಗೆ ನಮ್ಮ ಅಭಿಪ್ರಾಯ ಕೊಡತಕ್ಕದ್ದರ ಬಗ್ಗೆ ನಮ್ಮ ಮುಂದೆ ನಿರ್ಣಯ

ಬಂದಿದೆ. ಇದು ಯೋಗ್ಯವೋ, ಅಯೋಗ್ಯವೋ ಅನ್ನುವ ಅಭಿಪ್ರಾಯ ಹೇಳಬೇಕಾಗಿದೆ. ಆದುದರಿಂದ ಮಾನ್ಯ ಅಧ್ಯಕ್ಷರಲ್ಲಿ ನಾನು ನಮ್ರತೆಯಿಂದ ವಿನಂತಿ ಮಾಡಿಕೊಳ್ಳುತ್ತೇನೆ, ಏನೆಂದರೆ ಒಬ್ಬ ಅಸೆಂಬ್ಲಿ ಮೆಂಬರ್ ಹೆಚ್ಚೆಟ್ಟು ಒತ್ತಿದರೂ ಸಹ ಅವನು ಹೇಗೆ ಮಾತನಾಡಬೇಕು ಎನ್ನುವುದು ಗೊತ್ತಿದೆ, ಅವನು ಹಾಗೆ ಮಾತನಾಡಬೇಕು, ಹೀಗೆ ಮಾತನಾಡಬೇಕು ಎಂದು ಹೇಳುವುದಕ್ಕೆ ಇದು ಸ್ಕೂಲ ಅಲ್ಲ, ಕಾಲೇಜು ಅಲ್ಲ, ರಾಜ್ಯಾಂಗದ ಪ್ರಕಾರ ಡಿಲಿಮಿಟೇಷನ್ ಪ್ರಕಾರ ನಾವು ಈ ಅಸೆಂಬ್ಲಿಗೆ ಆರಿಸಿ ಬಂದಿದ್ದೇವೆ, ಈ ಬಗ್ಗೆ ನಾವು ಏನು ಮಾತನಾಡಬೇಕೆಂಬುದು ನಮ್ಮ ಕಕ್ಷೆ ಒಳಗೆ ಬರುತ್ತದೆ.

ಈ ಬಗ್ಗೆ ಮುಂದುವರೆದು ಹೇಳುವುದಾದರೆ ಈಗ ಲೋಕಸಭೆಗ 20 ಸೀಟುಗಳು ಹೆಚ್ಚು ಮಾಡುವ ಉದ್ದೇಶ ಏನು ಇದೆ ಅದು ಸ್ವಾಗತಾರ್ಹವಾದುದು. ಆದರೆ ಈ ಪ್ರಜಾಪ್ರಭುತ್ವದಲ್ಲಿ ನಾವು ಆ ರೀತಿ ಮಾತನಾಡತಕ್ಕಂಥಾದ್ದು. ಈ ಕಕ್ಷೆ ಒಳಗೆ ಬರುವುದಿಲ್ಲ. ಈವೊತ್ತಿನ ಈ ಪ್ರಜಾಪ್ರಭುತ್ವದಲ್ಲಿ ಒಬ್ಬ ಮೆಂಬರ್ ಮಾತನಾಡಬೇಕಾದರೆ ಅವನ ಪರಿಪೂರ್ಣವಾದ ಅಂಶವನ್ನು ತಿಳಿದುಕೊಂಡಿರುತ್ತಾರೆ. ಅದು ತನ್ನಷ್ಟಕ್ಕೆ ತಾನೇ ಬರುತ್ತದೆ. ಆದುದರಿಂದ ಈಗ ಲೋಕಸಭೆಗೆ ಸೀಟುಗಳನ್ನು ಹೆಚ್ಚು ಮಾಡಬೇಕೆಂಬ ಮೂಲ ಉದ್ದೇಶ ಏನು ಇದೆ. ಅದರ ಸ್ಪಿರಿಟ್ ಏನು ಇದೆ ಅದು ಯೋಗ್ಯವಾದುದು ಮತ್ತು ಸೂಕ್ತವಾದುದು ಎಂದು ಹೇಳುತ್ತೇನೆ. ಈ ಪ್ರಜಾಪ್ರಭುತ್ವದಲ್ಲಿ ಜನಸಂಖ್ಯೆ ಹೆಚ್ಚಾದಂತೆ ಅವರ ಅಭಿಪ್ರಾಯ. ವ್ಯಕ್ತ ಮಾಡುವುದಕ್ಕೆ ಈ ರೀತಿಯ ಒಂದು ಅನುಕೂಲತೆ ಇರತಕ್ಕಂಥದ್ದು ಸ್ವಾಗತಾರ್ಹವಾದುದು. ಇದರಲ್ಲಿ ಮುಖ್ಯವಾದುದು ಏನೆಂದರೆ ಮಾನ್ಯ ಕೋಣಂದೂರ ಲಿಂಗಪ್ಪನವರು ಹೇಳಿದಂತೆ ಇದರಲ್ಲಿ ರಾಜ್ಯ ಸಭೆ ಪ್ರಶ್ನೆ ಬಾರದೇ ಇದ್ದರೂ ಸಹ ಪಾರ್ಲಿಮೆಂಟಿಗೆ 10 ಲಕ್ಷಕ್ಕೆ ಒಬ್ಬ ಪ್ರತಿನಿಧಿ ಇರಬೇಕು ಎಂದು ಏನು ಹೇಳುತ್ತಿರೋ ಅದೇ ರೀತಿ ರಾಜ್ಯ ಸಭೆಗೂ ಹೆಚ್ಚು ಪ್ರಾತಿನಿಧ್ಯ ಕೊಡಿ ಎಂದು ಹೇಳುತ್ತೇನೆ. ಮತ್ತು ಹಾಗೆ ಮಾಡಿದರೆ ರಾಜ್ಯ ಸಭೆಯಲ್ಲೂ ಕೂಡ ಅವರ ಅಭಿಪ್ರಾಯವನ್ನು ವ್ಯಕ್ತ ಮಾಡಲಿಕ್ಕೆ ಅನುಕೂಲವಾಗುತ್ತದೆ. ಎಂದು ಹೇಳುತ್ತೇನೆ.

**ಸಭಾಧ್ಯಕ್ಷರೆ** – ನೀವು ಏನಾದರೂ ಮಾತನಾಡಿದರೆ ನಮಗೆ ಬಹಳ ಅನುತಾಪವಾಗುತ್ತದೆ. ನಮಗೆ ನಿಮ್ಮ ಸಹಾಯ ಏನು ಬೇಕಾಗಿಲ್ಲ. ನಿಮ್ಮ ಸಹಾಯ ನಮಗೆ ಏನಾದರೂ ಬೇಕಾಗಿದ್ದರೆ ರಿಕ್ವೆಸ್ಟ್ ಮಾಡಿಕೊಳ್ಳುತ್ತವೆ. ನಾನು ಈ ಬಗ್ಗೆ ಒಂದೇ ಒಂದು ವಿಷಯ ಹೇಳಬೇಕಾಗಿದೆ. ಇದನ್ನು ಸಮರ್ಥನೆ ಮಾಡುತ್ತ ಮುಖ್ಯವಾಗಿ ಹೇಳುವುದಾದರೆ ಈಗ ಜನಸಂಖ್ಯೆ ಪ್ರಮಾಣದ ಮೇಲೆ 10 ಲಕ್ಷಕ್ಕೆ ಒಬ್ಬ ಪ್ರತಿನಿಧಿಯಂತೆ ಚುನಾವಣೆಯಲ್ಲಿ ಆರಿಸಿ ಲೋಕಸಭೆಗೆ ಕಳುಹಿಸುತ್ತಾರೆ.

ಇದರ ಜೊತೆಗೆ ಟ್ರೈಬಲ ಏರಿಯಾದ್ದು ಹೆಚ್ಚಿನ ಸೀಟುಗಳನ್ನು ರಿಸರ್ವೇಷನ್ ಸೀಟುಗಳನ್ನಾಗಿ ಮಾಡಿ ಲೋಕಸಭೆಗೆ ಇನ್ನಷ್ಟು ಹೆಚ್ಚು ಸ್ಥಾನಗಳನ್ನು ಮಾಡಲಿಕ್ಕೆ ಅವಕಾಶ ಮಾಡಿದ್ದೀರಿ. ಅದರಂತೆ ಆ ಭಾಗದ ಜನತೆಯಲ್ಲಿ ಒಂದು ಕಲ್ಯಾಣವಾಗುವುದಕ್ಕೆ ಅವಕಾಶವಾಗಿದೆ. ಇಷ್ಟು ಹೇಳಿ ನನ್ನ ಮಾತನ್ನು ಮುಗಿಸುತ್ತೇನೆ.

# ಕುರಿ ಸಾಕಾಣಿಕೆಯ ಮೇಲಿನ ಚರ್ಚೆ

25ನೇ ಸೆಪ್ಟೆಂಬರ್ 1973

**ಶ್ರೀ ಎಸ್. ವೈ. ಪಾಟೀಲ** (ಸಿಂದಗಿ) - ಮಾನ್ಯ ಸಭಾಧ್ಯಕ್ಷಿಣಿಯವರೇ, ಕುರಿ ಹಾಲು, ಮಾಂಸ, ಉಣ್ಣೆ, ಗೊಬ್ಬರ, ತೊಗಲು ಪರದೇಶದಿಂದ ಹಣ ದೊರಕಿಸತಕ್ಕ ವಿಷಯ ವಿಚಾರ ಮಾಡಬೇಕು. ನಾವು ಈ ಬಿಲ್ಲನ್ನು ಹಾಸ್ಯ ದೃಷ್ಟಿಯಿಂದ ನೋಡದೆ; ಇದರಿಂದ ನಮ್ಮ ರಾಷ್ಟ್ರದ ಆರ್ಥಿಕ ಪರಿಸ್ಥಿತಿಯ ಮೇಲೆ ಏನು ಪರಿಣಾಮವಾಗುತ್ತದೆ. ಈ ಉದ್ಯಮದ ಮೇಲೆ ಮೇಲೆ ಏನು ಪರಿಣಾಮವಾಗುತ್ತದೆ ಎಂಬುದನ್ನು ನೋಡಬೇಕು. ರಾಷ್ಟ್ರಪಿತ ಮಹಾತ್ಮಾಗಾಂಧಿಯವರ ಫೋಟೋ ಹಾಕಿ ಅವರಿಗೆ ನಾವು ಭಕ್ತಿ ತೋರಿಸುತ್ತೇವೆ. ಅವರು ಜೀವಂತರಾಗಿ ಇಲ್ಲದೇ ಇದ್ದರೂ, ಅವರ ಆತ್ಮಕ್ಕೆ ತಕ್ಕಂತೆ ನಾವು ನಡೆಯಬೇಕು. ಆದರೆ ನಾವು ಇವತ್ತು ಮಾತನಾಡತಕ್ಕ ಸನ್ನಿವೇಶ ನೋಡಿದರೆ, ನನಗೆ ಬಹಳ ದುಃಖವಾಗುತ್ತದೆ. ಶಾಖಾಹಾರವಾಗಲೀ, ಮಾಂಸಾಹಾರವಾಗಲಿ, ಏನಾದರೂ ಆಗಲೀ, ನಮ್ಮ ದೇಶದಲ್ಲಿ ಪ್ರತಿಯೊಂದು ಸಣ್ಣ ಮಕ್ಕಳ ಆರೋಗ್ಯ ಬಹಳ ಕೆಡಲಿಕ್ಕೆ ಹತ್ತಿದೆ. ವಿದ್ಯಾರ್ಥಿಗಳು ಈ ಪ್ರಕಾರ ಏಕೆ ಆಗಲಿಕ್ಕೆ ಹತ್ತಿದ್ದಾರೆ. ಎಂದು ನಾನು ವಿಚಾರ ಮಾಡಲಿಕ್ಕೆ ಹತ್ತಿದ್ದೇನೆ. ಅವರಿಗೆ ಉತ್ತಮ ಆಹಾರ ಸಿಕ್ಕುವುದಿಲ್ಲ, ಹಾಲು ಸಿಕ್ಕುವುದಿಲ್ಲ. ಆದುದರಿಂದ ಓದುವುದಕ್ಕೆ ಮನಸ್ಸು ಬರುವುದಿಲ್ಲ. ಆ ದೃಷ್ಟಿಯಿಂದ ಪರೀಕ್ಷೆ ವೇಳೆಗೆ ಆಂದೋಳನ ನಡೆಯುತಕ್ಕದ್ದು ಆಗಿದೆ. ನಮ್ಮ ದೇಶದಲ್ಲಿ ಹಾಲಿನ ಸಂಪತ್ತ ಬೆಳೆಯಬೇಕು. ಎಲ್ಲಕ್ಕಿಂತಲೂ ಮುಖ್ಯವಾಗಿ ಕುರಿ ಹಾಲು ಸರ್ವೋತ್ಕೃಷ್ಟ. ಮಹಾತ್ಮಾಗಾಂಧಿಯವರು ಪರದೇಶದಲ್ಲಿ ರೌಂಡ ಟೇಬಲ ಕಾನಫರೆನ್ಸ್‌ಗೆ ಹೋಗುವ ಕಾಲದಲ್ಲಿ ಯಾವುದನ್ನು ಬಿಟ್ಟಿಲ್ಲ.

**ಅಧ್ಯಕ್ಷರು** - ಕುರಿ ಹಾಲು ಅಲ್ಲ, ಆಡಿನ ಹಾಲು.

**ಶ್ರೀ ಎಸ್.ವೈ. ಪಾಟೀಲ** - ಇದರಲ್ಲಿ ಕುರಿ, ಆಡು ಎರಡೂ ಸೇರಿದೆ. ಅವುಗಳನ್ನು ಅಭಿವೃದ್ಧಿ ಮಾಡಬೇಕು. ಆ ದೃಷ್ಟಿಯಿಂದ ಹಾಲಿನ ಸಂಪತ್ತು ಅತ್ಯಂತ ಅವಶ್ಯಕವಿದೆ. ಕುರಿ ಹಾಲು, ಆಡಿನ ಹಾಲು ಆರೋಗ್ಯಕ್ಕೆ ಒಳ್ಳೇಯದು. ಹಾಸ್ಪಿಟಲುಗಳಿಗೆ ನಮ್ಮ ಬಜೆಟ್ಟಿನಲ್ಲಿ ಹೆಚ್ಚು ರೊಕ್ಕ ಕೊಡುವುದಕ್ಕಿಂತ ಕುರಿಗಳನ್ನು ಅಭಿವೃದ್ಧಿ ಮಾಡಿ ಜನರ ಆರೋಗ್ಯ ಉತ್ತಮ ಪಡಿಸುವ ವಿಚಾರ ಮಾಡಬೇಕು.

ಉತ್ತಮವಾದ ಹಾಲನ್ನು ನಿರ್ಮಾಣ ಮಾಡಬೇಕಾದರೆ ಒಳ್ಳೆಯ ತಳಿ ಬೇಕು ಎನ್ನುವ ದೃಷ್ಟಿಕೋಣದಿಂದ ನೋಡಬೇಕು. ಈ ಬಿಲ್ಲು ನೋಡಿದರೆ ಬರೇ ಇಂಡಸ್ಟ್ರೀಗೆ ಸಂಬಂಧ ಪಟ್ಟದ್ದು ಮಾತ್ರವೇ ಅಲ್ಲ ಇದು ಹೆಲ್ತ ಡಿಪಾರ್ಟಮೆಂಟಗೂ, ಇಂಡಸ್ಟ್ರೀ ಡಿಪಾರ್ಟಮೆಂಟಗೂ ಮತ್ತು ಫೈನಾನ್ಸ ಡಿಪಾರ್ಟಮೆಂಟಗೂ ಎಲ್ಲಾ ಇಲಾಖೆಗಳಿಗೂ ಸಂಬಂಧಪಟ್ಟಿದ್ದಾಗಿದೆ. ಈವೊತ್ತಿನ ದಿವಸ ಪರದೇಶದ ಗೊಬ್ಬರದ ಕಡೆ ಅಂದರೆ ಅಮೋನಿಯಂ ಸಲ್ಫೇಟ ಮತ್ತು ಸೂಪರ ಫಾಸ್ಫೇಟ ಕಡೆ ನೋಡುತ್ತಿದ್ದಾರೇ ಹೊರತು ನಮ್ಮ ರಾಜ್ಯದ ಕುರಿ ಗೊಬ್ಬರದ ಕಡೆ ಹೆಚ್ಚು ನಿಗಾ ಕೊಡುತ್ತಾ ಇಲ್ಲ. ಈವೊತ್ತು ನಮ್ಮ ಜಮೀನಿಗೆ ಆ ಪರದೇಶದ ಗೊಬ್ಬರವನ್ನು 10 ಟನ್ ಹಾಕುವ ಬದಲು ನಮ್ಮ

ರಾಜ್ಯದ ಕುರಿ ಗೊಬ್ಬರ ಒಂದು ಟನ್ ಹಾಕಿದರೆ ಸಾಕು. ಆ ಜಮೀನಿನಲ್ಲಿ ಹೆಚ್ಚು ಫಲವತ್ತಾಗಿ ಬೆಳೆಯುತ್ತದೆ. ಅಲ್ಲದೆ ಈ ಪರದೇಶದ ಗೊಬ್ಬರವನ್ನು ಜಮೀನಿಗೆ ಹಾಕಿದರೆ ಅದಕ್ಕೆ ಹೆಚ್ಚು ನೀರು ಬೇಕು. ನಮ್ಮ ಈ ಕುರಿ ಗೊಬ್ಬರವನ್ನು ಹಾಕಿದರೆ ಹೆಚ್ಚು ನೀರು ಇಲ್ಲದೆ ಇದ್ದರೂ ಬಹಳ ಫಲವತ್ತಾಗಿ ಬೆಳೆಯುತ್ತದೆ. ಆದುದರಿಂದ ಹಾಲಿನ ದೃಷ್ಟಿಯಿಂದ ಮತ್ತು ಗೊಬ್ಬರದ ದೃಷ್ಟಿಯಿಂದ ನೋಡಿದರೆ ಈ ಬಿಲ್ಲು ಬಹಳ ಉತ್ತಮವಾದ ಬಿಲ್ಲು ಎಂದು ನನಗೆ ಅನಿಸುತ್ತದೆ. ನಿನ್ನೆ ದಿವಸ ಮಾನ್ಯ ಮುಖ್ಯಮಂತ್ರಿಗಳು ಹೇಳಿದರು ಮದ್ರಾಸಿಗೆ ಎಲೆಕ್ಟ್ರಿಸಿಟಿ ಕೊಟ್ಟು ಅಲ್ಲಿಂದ 2 ಸಾವಿರ ಟನ್ ಆಹಾರಧಾನ್ಯ ತೆಗೆದುಕೊಂಡ ಬರುತ್ತೇವೆ ಎಂದು ಆದುದರಿಂದ ನಾನು ಹೇಳುವುದು ಏನೆಂದರೆ ನಮ್ಮ ದೇಶದಲ್ಲಿ ಈ ಕುರಿ ಉತ್ಪಾದನಾ ಇಂಡಸ್ಟ್ರಿಯೊಂದನ್ನು ಮಾಡಿದರೆ ನಾವು ಯಾವ ರಾಜ್ಯಕ್ಕೂ ಹೋಗಿ ತಾಳಿ ಹೊಡೆದು ಆಹಾರಧಾನ್ಯವನ್ನು ತರಬೇಕಾಗಿಲ್ಲ. ಪರದೇಶಕ್ಕೆ ಹೋಗಿ ತಾಳಿ ಹೊಡೆಯುವದು ಆಗಲಿ, ಮಹಾರಾಷ್ಟ್ರಕ್ಕೆ ಎಲೆಕ್ಟ್ರಿಸಿಟಿ ಸಾಲರೂಪವಾಗಿ ಕೊಟ್ಟು ಅಲ್ಲಿಂದ ಧಾನ್ಯ ತರುವುದಾಗಲಿ ಮತ್ತು ತಮಿಳುನಾಡಿಗೆ ಸಾಲರೂಪವಾಗಿ ಎಲೆಕ್ಟ್ರಿಸಿಟಿ ಕೊಟ್ಟು ಅಲ್ಲಿಂದ ಆಹಾರ ಧಾನ್ಯ ತರುವುದಾಗಲಿ ಮಾಡಬೇಕಾಗಿಲ್ಲ ಮತ್ತು ನಮ್ಮ ರಾಜ್ಯದಲ್ಲಿ ಈ ಬಗ್ಗೆ ಒಂದು ಸರ್ವೆ ಮಾಡಿ ಅದರಿಂದ ಏನೇನು ರೀಸರ್ಚ ಮಾಡಬಹುದೋ ಅದನ್ನು ಮಾಡಿದರೆ ಇದರಿಂದ ಉತ್ಕೃಷ್ಟವಾಗಿ ಉಪಯೋಗವಾಗುತ್ತದೆ. ನಮ್ಮ ರಾಜ್ಯದಲ್ಲಿ ಈ ಬಗ್ಗೆ ಸರಿಯಾದಂಥ ತಜ್ಞರು ಇದ್ದಾರೆ. ಅವರನ್ನು ಉಪಯೋಗ ಮಾಡಿಕೊಂಡರೆ ಒಂದು ಹೆಚ್ಚಿನ ಪ್ರತಿಫಲ ಬರುವಂತೆ ಉತ್ತಮವಾದ ತಳಿಯನ್ನು ಮಾಡಬಹುದು. ಮುಖ್ಯವಾಗಿ ನಾವು ಇದರಲ್ಲಿ ನೋಡಬೇಕಾದ್ದು ಇದರ ಹಾಲು, ಗೊಬ್ಬರ ಉಣ್ಣೆ ಮತ್ತು ತೊಗಲು ಇವುಗಳಿಂದ ಏನೇನು ಉಪಯೋಗ ಬರುತ್ತದೆ ಎನ್ನುವುದನ್ನು ನೋಡಬೇಕು. ಈ ಉದ್ಯಮವನ್ನು ಒಂದೇ ಭಾಗದ ಜನರು ಅವಲಂಬಿಸಬೇಕು ಎನ್ನುವುದೇನೂ ಇಲ್ಲ. ಬೇರೆ ಭಾಗದ ಜನರೂ ಕೂಡ ಅವಲಂಬಿಸಿದರೆ ತಪ್ಪೇನಿಲ್ಲ. ಸಾಮಾನ್ಯವಾಗಿ ಈಪ್ರೊತ್ತಿನ ದಿವಸ ಎಲ್ಲಾ ಕಡೆಯೂ ನೋಡಿ ಈ ಒಕ್ಕಲುತನ ಸಾಗುವಳಿ ಇದೆ. ಅವರೆ ಅವರಿಗೆ ಇರತಕ್ಕಂಥ ತೊಂದರೆ ಏನು ಎಂದರೆ ಕುರಿಗಳಿಗೆ, ದನಗಳಿಗೆ ಮೇಯಲಿಕ್ಕೆ ಭೂಮಿ ಇಲ್ಲ. ಆದುದರಿಂದ ನಾನು ಹೇಳುವುದು ಏನೆಂದರೆ ಈ ಕುರಿಗಳಿಗೆ ಮತ್ತು ದನಗಳಿಗೆ ಮೇಯುವ ಸಾಲುವಾಗಿ ಸರ್ಕಾರದವರು ಒಂದು ಲ್ಯಾಂಡನ್ನು ಅಕ್ವಿಸಿಷನ್ ಮಾಡುವುದಾಗಲಿ ಅಥವಾ ಇದ್ದ ಭೂಮಿಯನ್ನು ತೆಗೆದುಕೊಂಡು ಆ ಬಗ್ಗೆ ಒಂದು ವ್ಯವಸ್ಥೆ ಮಾಡಿಕೊಡಬೇಕು. ತಾವು ಯಾವ ಬಿಲ್ಲನ್ನೇ ತನ್ನಿರಿ. ನನ್ನ ಒಂದು ಸ್ವಭಾವ ಏನೆಂದರೆ ಬಿಜಾಪುರದಿಂದ ಏನು ಉಪಯೋಗವಾಗುತ್ತದೆ. ಅದನ್ನು ಸ್ವಾರ್ಥ ಮಾಡಿಕೊಳ್ಳುವ ಮನುಷ್ಯ. ಈ ದೃಷ್ಟಿಯಿಂದ ಹೇಳುತ್ತೇನೆ. ಬಿಜಾಪುರದ ಒಕ್ಕಲುತನದವರಿಗೆ ಉಪಯುಕ್ತವಾದಂಥ ಬಿಲ್ಲು ಇದು ಆದುದರಿಂದ ಇದನ್ನು ನಾನು ಪೃತ್ಪೂರ್ವಕವಾಗಿ ಸ್ವಾಗತಿಸುತ್ತೇನೆ ಮತ್ತು ಈ ಇಂಡಸ್ಟ್ರೀ ಮೈಸೂರು ರಾಜ್ಯದಲ್ಲಿ ಚೆನ್ನಾಗಿ ಬೆಳೆಯಬೇಕು ಎಂದು ಹೇಳುತ್ತೇನೆ. ಮತ್ತು ನಮ್ಮಲ್ಲಿ ಬಯಲು ಭೂಮಿ ಜಾಸ್ತಿ ಇದೆ. ಅದನ್ನು ಫಲವತ್ತಾಗಿ ಮಾಡಬೇಕು ಎಂದು ಹೇಳುತ್ತೇನೆ. ಇನ್ನು ಹಳೇ ಮೈಸೂರು ಪ್ರದೇಶದಲ್ಲಿ ಹೇಳುವುದಾದರೆ ಅಲ್ಲಿ ಸರ್.ಎಂ. ವಿಶ್ವೇಶ್ವರಯ್ಯನವರ ಸಹಾಯದಿಂದ ಮತ್ತು ಅವರ ಕೃಪಾಕಟಾಕ್ಷದಿಂದ ಅರ್ಧ ಎಕರೆಯಷ್ಟಾದರೂ ನೀರಾವರಿ ಮಾಡಿ ಕೊಂಡಿದ್ದೀರಿ. ಭತ್ತ ಬೆಳೆಯುವ ಹಾಗೆ ಮಾಡಿಕೊಂಡಿದ್ದೀರಿ.

ಆದುದರಿಂದ ನೀವು ಈ ಕುರಿ ಉದ್ಯಮದ ಬಗ್ಗೆ ಅಷ್ಟೊಂದು ಉಪಯೋಗ ಮಾಡಿಕೊಂಡಿಲ್ಲ. ಅದಕ್ಕೋಸ್ಕರ ನಾನು ಬಿಜಾಪುರದ ಒಕ್ಕಲುತನದ ವ್ಯಕ್ತಿಯಿಂದ ಹೇಳುವುದು ಏನೆಂದರೆ ನಮ್ಮ ಬಿಜಾಪುರದ ಜಿಲ್ಲೆ ಯಾವಾಗಲೂ ದುಷ್ಕಾಲಕ್ಕೆ ಈಡಾಗುವದರಿಂದಲೂ ಮತ್ತು ಅಲ್ಲಿ ಈ ಕುರಿ ಉದ್ಯಮದ ಸಾಗಾಣಿಕ ಬಹಳ ಉತ್ತಮವಾದ ಪ್ರದೇಶವಾದುದರಿಂದಲೂ ಕಾರಣ ಅಲ್ಲಿ ಬಯಲು ಭೂಮಿ ಹೆಚ್ಚಾಗಿರುವುದರಿಂದ ಆ ಒಂದು ಸ್ಥಳ ಚೇಂಜ ಆಗಬೇಕಾದರೆ ಅಲ್ಲಿ ಈ ಕುರಿ ಉದ್ಯಮದ ಒಂದು ಕೈಗಾರಿಕೆಯನ್ನು ಬೆಳೆಸುವಂತಾಗಬೇಕು ಎಂದು ಹೇಳುತ್ತೇನೆ ಆ ಕೆಲಸ ಈವೊತ್ತು ಅಲ್ಲದಿದ್ದರೂ ನಾಳೆ ದಿವಸ ಅಂದರೆ ಬೋರ್ಡ ಮಾಡಿದ ಕಾಲಕ್ಕಾದರೂ ಮಾಡಬೇಕು. ಇಲ್ಲದೇ ಹೋದರೆ ಈ ಬೋರ್ಡ ಮಾಡಿದಾಗ ನೀವು ಏನ ಮಾಡಿತ್ತೀರಿ ಅನ್ನುವದು ಗೊತ್ತಾಗುತ್ತದೆ. ನೀವು ನಮ್ಮ ರಾಜ್ಯದ ಕೈಗಾರಿಕಾ ಮಂತ್ರಿಗಳಾಗಿರುವುದರಿಂದ ಈ ಮಾತನ್ನು ಹೇಳುತ್ತಿದ್ದೇನೆ. ದುರ್ದೈವವಶಾತ ನಾವು ನಿಮ್ಮ ಎದುರು ಪಕ್ಷದವರಾಗಿದ್ದೇವೆ. ಆದರೂ ಕೂಡ ತಾವು ಈ ಬೋರ್ಡ ಮಾಡಿದ ಕಾಲಕ್ಕೆ ಒಳ್ಳೆಯ ತಜ್ಞರನ್ನು ಹಾಕಿ ಒಳ್ಳೆಯ ಉದ್ಯಮವನ್ನಾಗಿ ಬೆಳೆಸಿರಿ ಮತ್ತು ಬೋರ್ಡಗೆ ನಮ್ಮ ಪಾರ್ಟಿಯವರನ್ನು ಹಾಕದೇ ಇದ್ದರೂ ಹೋಗಲಿ ನಿಮ್ಮ ಪಾರ್ಟಿಯವರನ್ನೇ ಅಲ್ಲಿಯ ರೆಪ್ರೆಸೆಂಟೇಟಿವ್ ಆಗಿ ಹಾಕಿರಿ. ಈವೊತ್ತು ರಾಜ್ಯದಲ್ಲಿ ನೀವು ಒಳ್ಳೆಯ ಕೆಲಸ ಮಾಡಿದ್ದೀರಿ. ಅದು ಯಾವುದು ಎಂದರೆ ನಮ್ಮ ರಾಜ್ಯಕ್ಕೆ ಕರ್ನಾಟಕ ಅನ್ನುವ ಹೆಸರನ್ನು ಇಡಲಿಕ್ಕೆ ಒಂದು ಬಿಲ ತಂದು ಅದರಲ್ಲಿ ಕೀರ್ತಿ ಪಡೆದಿರಿ. ಅದೇ ತರಹ ಈ ಒಂದು ಬಿಲ್ಲು, ಸಣ್ಣ ಬಿಲ್ ಆದರೂ ಬಹಳ ಮಹತ್ವದ್ದಾಗಿದೆ. ಆದುದರಿಂದ ಇದನ್ನೂ ಕೂಡ ಸರಿಯಾದ ರೀತಿಯಲ್ಲಿ ಉಪಯೋಗಿಸಿಕೊಂಡದರೆ ಇದರ ಒಂದು ಕೀರ್ತಿಯೂ ಸಹ ನಿಮಗೆ ಬರುತ್ತದೆ.

ಇದು ಒಕ್ಕಲುತನಕ್ಕೆ ಬಹಳ ಉಪಯುಕ್ತವಾದುದರಿಂದ ಈ ಒಂದು ಮಹತ್ವವಾದ ಬಿಲ್ಲು ತಂದು ನಮ್ಮ ರಾಜ್ಯಕ್ಕೆ ಪುಣ್ಯದ ಕೆಲಸ ಮಾಡಿದ್ದಾರೆ ಎಂದು ಹೇಳುತ್ತೇನೆ. ಶ್ರೀಮಾನ್ ಪಾಟೀಲ್ ನಾಗರಾಜ ಅಂಥವರೂ ಕೂಡ ವಿರೋಧ ಪಕ್ಷದಲ್ಲಿದ್ದರೂ ಸಹ ಅವರು ಈ ಬಿಲ ಬಹಳ ಮುಖ್ಯವಾದ ಬಿಲ ಅಂತ ಹೇಳಬೇಕಾದರೆ ಇದು ಎಷ್ಟು ಮಹತ್ವದ ಬಿಲ ಎಂದು ಕಾಣುತ್ತದೆ. ಅವರ ಕೈಯಲ್ಲಿ ಯಾವ ಬಿಲ್ಲೂ ಕೂಡ ಪಾಸಾಗಲಾರದು ಅಂಥಾದ್ದರಲ್ಲಿ ಅವರು ಈವೊತ್ತು ಇದನ್ನು ಮಹತ್ವವಾದ ಬಿಲ ಎಂದಿದ್ದಾರೆ. ಆದುದರಿಂದ ನಾನು ಈ ಬಗ್ಗೆ ಹೇಳುವುದಾದರೆ ಯಾರೂ ಕೂಡ ಮಾಂಸಾಹಾರವನ್ನು ಮಾಡಬೇಡಿರಿ ಎಂದು ಹೇಳುವುದಕ್ಕಾಗುವುದಿಲ್ಲ. ಗೌತಮ ಬುದ್ಧ ಪುನರ್ಜನ್ಮವೆತ್ತಿ ಬಂದರೂ ಕೂಡ ಮಾಂಸಾಹಾರ ಮಾಡುವವರನ್ನು ತಪ್ಪಿಸುವುದಕ್ಕಾಗುವುದಿಲ್ಲ. ಈಗ ಕಾರವಾರದಲ್ಲಿ ಮೀನು ಉದ್ಯಮವಿದೆ. ತಮ್ಮ ಶ್ರೀಮಾನ್ ಕೆ.ಟಿ. ರಾಥೋಡ್ ರವರು ಫಿಷರೀಸ್ ಮಿನಿಸ್ಟರ್ ಆಗಿದ್ದಾರೆ. ಅವರು ಮೀನು ತಿನ್ನಬೇಡಿರಿ ಎಂದು ಹೇಳಿದರೂ ಅದನ್ನು ತಪ್ಪಿಸುವುದಕ್ಕೆ ಸಾಧ್ಯವಿಲ್ಲ ಮತ್ತು ಮಹಾತ್ಮಾಗಾಂಧೀಜಿಯವರು ಪುನರ್ಜನ್ಮ ಮಾಡಿಕೊಂಡು ಬಂದು ಮಾಂಸಾಹಾರವನ್ನು ಮಾಡಬೇಡಿರಿ ಎಂದು ಹೇಳಿದರೂ ಕೂಡ ಅದನ್ನು ತಪ್ಪಿಸುವುದಕ್ಕಾಗುವುದಿಲ್ಲ. ಆದುದರಿಂದ ಈ ಬಗ್ಗೆ ಆ ವಿಷಯಗಳನ್ನು ಮಾತನಾಡಿದರೆ ಅವರ ಆತ್ಮಕ್ಕೆ ಶಾಂತಿ ಬರುವುದಿಲ್ಲ. ಅದಕ್ಕೋಸ್ಕರವಾಗಿ ಈ ಬಿಲ್ಲು ಬರೇ

ಇಂಡಸ್ಟ್ರೀಗೆ ಸಂಬಂಧ ಪಟ್ಟದ್ದು ಎಂದು ಹೇಳುವ ಹಾಗೆ ಇಲ್ಲ. ಇದು ಎಲ್ಲಾ ಇಲಾಖೆಗಳಿಗೂ ಅಂದರೆ, ಹೆಲ್ತ ಡಿಪಾರ್ಟಮೆಂಟ್, ಇಂಡಸ್ಟ್ರೀ ಡಿಪಾರ್ಟಮೆಂಟ್, ಫೆನಾನ್ಸ್ ಡಿಪಾರ್ಟಮೆಂಟ ಮತ್ತು ಫಾರೆಸ್ಟ್ ಡಿಪಾರ್ಟಮೆಂಟ್ ಇವೆಲ್ಲಕ್ಕೂ ಸಂಬಂಧಪಟ್ಟದ್ದಾಗಿದೆ. ಇದು ಒಂದು ಆರ್ಡಿನರಿ ಮ್ಯಾಟರ್ ಅಲ್ಲ. ಇದು ಒಂದು ಧರ್ಮಕ್ಕೆ ಪರ್ಮಿಸಬಲ ಆಗಿಲ್ಲ. ಮಹಾತ್ಮಾ ಗಾಂಧಿಯವರು ಒಂದು ಫೋಟೋ ಇಟ್ಟುಕೊಂಡು ಈ ಬಗ್ಗೆ ಒಂದು ಕಾಯಿದೆ ಮಾಡಿದರೆ ತಿನ್ನುವುದಕ್ಕೆ ಲೈಸನ್ಸ್ ಕೊಟ್ಟ ಹಾಗೆ ಎಂದು ಭಾವಿಸಿಕೊಳ್ಳಬೇಡಿ. ಹಾಗಾದರೆ ಅವರ ಆತ್ಮಕ್ಕೆ ಶಾಂತಿ ಬರುವುದಿಲ್ಲ. ಯಾರನ್ನೇ ಆಗಲಿ ತಿನ್ನಿ ಅಥವಾ ಬಿಡಿರಿ ಎಂದು ಯಾರು ಹೇಳುವುದಕ್ಕೆ ಸಾಧ್ಯವಿಲ್ಲಾ. ದಿನಕ್ಕೆ 2 ಸಾರೆ ತಿನ್ನುವಬದಲು ಒಂದು ಸಾರೆ ತಿನ್ನಿರಿ, ಇಲ್ಲವೆ ತಿಂಗಳಿಗೆ ಒಂದು ಸಾರೆ ತಿನ್ನಿರಿ, ನಾನು ಈ ಮಾತನ್ನು ಹಾಸ್ಯದ ದೃಷ್ಟಿಯಿಂದ ಹೇಳುವುದಿಲ್ಲ.

**ಶ್ರೀ ವಾಟಾಳ್ ನಾಗರಾಜ್** – ಗಾಂಧೀಟೋಪಿಯವರೇ ಜಾಸ್ತಿ ತಿನ್ನುತ್ತಾರೆ.

**ಶ್ರೀ ಎಸ್.ವೈ. ಪಾಟೀಲ** – ನೀವೇ ತಿನ್ನಿರಿ, ಯಾರೇ ತಿನ್ನಲಿ, ಅದನ್ನು ಯಾರೂ ತಪ್ಪಿಸುವುದಕ್ಕೆ ಸಾಧ್ಯವಿಲ್ಲಾ. ಆದರೆ ಇದರ ಮುಖ್ಯವಾದ ಗುರಿ ಏನು ಎಂದು ತಿಳಿದುಕೊಳ್ಳಬೇಕು. ಇದರ ಮುಖ್ಯವಾದ ದೃಷ್ಟಿಕೋನ ಇದರ ಹಾಲು, ಉಣ್ಣೆ ಮತ್ತು ಚರ್ಮ ಇವುಗಳಿಗೆ ಉತ್ತೇಜನ ಕೊಡುವ ಸಲುವಾಗಿ ಇದರ ಕಾಯಿದೆಯನ್ನು ಅನಿವಾರ್ಯವಾಗಿ ಮಾಡಬೇಕಾಯಿತೇ ಹೊರತು. ಇದು ತಿನ್ನವುದಕ್ಕೆ ಲೈಸನ್ಸ್ ಕೊಟ್ಟ ಹಾಗೆ ಆಯಿತು. ಎಂದು ಭಾವಿಸಿಕೊಂಡರೆ ನಮ್ಮ ದೇಶದಲ್ಲಿ ಭಾರತೀಯ ಅಂತ ಏನು ಹೆಸರು ಇಟ್ಟುಕೊಂಡಿರುತ್ತಾನೋ ಅವನು ಭಾರತೀಯ ಸುಸ್ಕೃತಿಗೆ ಈಡಾಗಬೇಕಾಗುತ್ತದೆ ಎಂದು ಹೇಳುತ್ತೇನೆ. ಅಧ್ಯಕ್ಷ ೆ. ತಾವು ನನಗೆ ಇಷ್ಟು ಮಾತನಾಡಲು ಪರವಾನಗೆ ಕೊಟ್ಟದ್ದಕ್ಕಾಗಿ ತಮ್ಮನ್ನು ಅಭಿನಂದಿಸಿ, ಮ ್ತ ಈ ಬಿಲ್ಲನ್ನು ತಂದಂಥ ಮಾನ್ಯ ಕೈಗಾರಿಕೆ ಮಂತ್ರಿಗಳನ್ನೂ ಕೂಡ ಅಭಿನಂದಿಸಿ, ಮತ್ತು ಈ ಬಿಲ್ಲನ್ನು ಕಾರ್ಯ ರೂಪಕ್ಕೆ ತರುವದಾಗಿ ಬಹು ಎಚ್ಚರಿಕೆವಹಿಸಬೇಕೆಂದು ಸೂಚಿಸಿ ನನ್ನ ನಾಲ್ಕು ಮಾತುಗಳನ್ನು ಮುಗಿಸುತ್ತೇನೆ.

## ಮಹಾಜನ ವರದಿ

26ನೇ ಫೆಬ್ರವರಿ 1974

**ಶ್ರೀ ಎಸ್.ವೈ. ಪಾಟೀಲ** (ಸಿಂಧಗಿ) ಮಾನ್ಯ ಅಧ್ಯಕರೇ ಮಾನ್ಯ ಮುಖ್ಯಮಂತ್ರಿಗಳು ಇಲ್ಲಿ ಇಂತಹ ಒಂದು ಠರಾವನ್ನು ತಂದು ನಮ್ಮ ಕನ್ನಡಿಗರಿಗೆ ಬಹಳ ದೊಡ್ಡ ಉಪಕಾರ ಮಾಡಿದ್ದಾರೆ. ಇದರ ಸಲುವಾಗಿ ನಾನು ಅವರನ್ನು ಅಭಿನಂದಿಸುತ್ತೇನೆ ಮತ್ತು ಅವರು ಬಹಳ ಒಳ್ಳೆಯ ಮಾತುಗಳನ್ನು ಹೇಳಿದರು. ಪ್ರೈಂ ಮಿನಿಸ್ಟರು ಇದರ ಬಗ್ಗೆ ತೀವ್ರ ಕ್ರಮ ತೆಗೆದುಕೊಳ್ಳಬೇಕೆಂದು ಹೇಳುತ್ತೇನೆ. ಇದರ ಇತಿಹಾಸ ಬಹಳ ದೊಡ್ಡದು ನಾನು ಹಿಂದಿನ ಮುಂಬಯಿ ಸರಕಾರದ ವಿಧಾನ ಸಭೆಯಲ್ಲಿ ಮೆಂಬರಾಗಿದ್ದೆ. ಆಗಿನ ಸರಕಾರದಲ್ಲಿ ಆಗ ಹತ್ತು ಕೋಟಿ ರೂಪಾಯಿ ಸರ್‌ಪ್ಲಸ್ ಬಜೆಟ್ಟು ಇತ್ತು. ಆಗ ಅಲ್ಲಿದ್ದ ಮಂತ್ರಿಗಳಾಗಿದ್ದ ಶ್ರೀ ಮೊರಾರ್ಜಿ ದೇಸಾಯಿಯವರು ಒಂದು ಮಾತು ಹೇಳಿದರು.

ಮಹಾರಾಷ್ಟ್ರದ ಜನರಲ್ಲಿ ಯಾರೇ ಇರಲಿ. ಅವರಿಗೆಲ್ಲ ಸಹಾಯ ಮಾಡಬೇಕು. ಇಲ್ಲಿ ಶಿವಸೇನೆ ಇಲ್ಲವೇ ಬೇರೆ ಜನರು ಎಂದು ವಿಚಾರ ಮಾಡುವುದು ಮೂರ್ಖತನವಾದೀತು ಎಂದು ಹೇಳಿದ್ದರು. ಯಾರಿಗೂ ನಾನು ಸಮರ್ಥನೆ ಮಾಡುವುದಿಲ್ಲ. ದೇಶದ ಜನತೆಗೆ ಒಳ್ಳೆಯದನ್ನು ಮಾಡಬೇಕೆಂದು ಹೇಳಿದರು. ಅದರಂತೆ ನಮ್ಮ ರಾಜ್ಯ ಸರಕಾರದ ಮುಖ್ಯ ಮಂತ್ರಿಗಳಾದ ಶ್ರೀ ದೇವರಾಜ ಅರಸ್‌ರವರು ಕೂಡ ಕೂರಲಿದ್ದಾರೆ. ಆದರೆ ಅವರಿಗೆ ಮಹಾರಾಷ್ಟ್ರದಲ್ಲಿ ತಮ್ಮ ಪಾರ್ಟಿಯವರ ಸರಕಾರವೇ ಇದೆ ಎಂದು ಅವರಿಗೆ ಒಂದು ರೀತಿಯ ಮಾಯವಾಗಿದೆ. ಈ ದೃಷ್ಟಿಯಿಂದ ನಾನು ಹೇಳುವುದು ಇದರಲ್ಲಿ ಶ್ರೀ ವೀರೇಂದ್ರ ಪಾಟೀಲರವರು ಹೇಳಲಿಲ್ಲ. ಶ್ರೀ ದೇವರಾಜ ಅರಸ್‌ರವರು ಹೇಳಲಿಲ್ಲ ಎಂದು ಹೇಳುವುದು ಸರಿ ಕಾಣುವುದಿಲ್ಲ ಇದರಲ್ಲಿ ಎಲ್ಲರ ಕರ್ತವ್ಯವೂ ಇದೆ. ಯಾವ ರೀತಿ ಪೋಲಿಸು ಇಲಾಖೆಯ ಮುಖ್ಯಾಧಿಕಾರಿಯಾಗಿರುವವರು ಎಂದರೆ ಐ.ಜಿ. ಯವರು ಒಂದು ಮರ್ಡರು ಕೇಸು ಬಂದಾಗ ಇದರಲ್ಲಿ ಪೋಲಿಸರ ವರದಿ ಬಂದಿಲ್ಲ ಇನ್ನಾವುದೋ ವಿವರ ಬರಲಿಲ್ಲ ಎಂದು ತಡ ಮಾಡುತ್ತಾ  ಹೋಗುವುದಿಲ್ಲ ಅವರೇ ಖುದ್ದಾಗಿ ಜಾಗ್ರತೆ ತನಿಖೆ ಮುಗಿಸಿ ಕಾರ್ಯ ಮಾಡಲೇ ಬೇಕಾಗುತ್ತದೆ ಅದರಂತೆ ನಮ್ಮ ಪ್ರಧಾನಿಯವರು ಇನ್ನು ಹೆಚ್ಚು ತಡ ಮಾಡದೆ ಯಾರ ಮೇಲೂ ಹೇಳದೆ ಮಹಜನ್ ಕಮಿಷನ್ ಒಪ್ಪಿದ್ದೇವೆ ಎಂದು ಕೇಂದ್ರದವರು ಆದೇಶವನ್ನು ಕಳುಹಿಸುವುದೊಂದೇ ಇದಕ್ಕಿರುವ ಮಾರ್ಗ. ಇದರಲ್ಲಿ ಶ್ರೀ ವೀರೇಂದ್ರ ಪಾಟೀಲರವರು ಹೇಳಲಿಲ್ಲ, ಶ್ರೀ ನಿಜಲಿಂಗಪ್ಪನವರು ಹೇಳಲಿಲ್ಲ, ಶ್ರೀ ದೇವರಾಜ ಅರಸರು ಹೇಳಲಿಲ್ಲ ಎಂದು ಹೇಳುವುದಕ್ಕಿಂತ ಈಗ ನಮ್ಮ ಶಕ್ತಿ ಯಾವ ರೀತಿ ಇದೆ ಎನ್ನುವುದನ್ನು ಪ್ರದರ್ಶಿಸುವ ಕಾಲ ಬಂದಿದೆ. ಇವೊತ್ತು ಕೇಂದ್ರದವರಿಗೆ ನಮ್ಮ ರಾಜ್ಯ ಸರಕಾರ ಕೇವಲ ಒಂದು ಸಲಹೆ ಮಾಡುವುದೊಂದೇ ಎಂದು ತಿಳಿದಿರಬಹುದು. ಆದರೆ ಇಂದು ಶ್ರೀ ದೇವರಾಜಅರಸ್ ರವರಲ್ಲಿ ಕೇಳಿಕೊಳ್ಳುವುದು, ನಿಮ್ಮ ಕಾಂಗ್ರೆಸ್ ಪಾರ್ಟಿಯವರೇ ಸರ್ಕಾರ ನಡೆಸುತ್ತಿರುವಾಗ ಅವರ ಮೇಲೆ ಸಾಕಷ್ಟು ಒತ್ತಾಯ ತಂದು ಇದನ್ನು ಬಗೆಹರಿಸಬೇಕು. ಇಂದು ಮಹಾರಾಷ್ಟ್ರದಲ್ಲಿರುವ ಶಿವಸೇನೆಯಿಂದ ಅಪಾರವಾದ ಅನಾಹುತಗಳಾಗಿವೆ. ಹೆಣ್ಣು ಮಕ್ಕಳ ಮಾನಾಪಹರಣಗಳು ನಡೆದಿವೆ. ಇವನ್ನೆಲ್ಲಾ ತಡೆಗಟ್ಟುವುದು ಕೇಂದ್ರದ ಹಾಗೂ ರಾಜ್ಯ ಸರಕಾರಗಳ ಜವಾಬುದಾರಿ ಇದರಲ್ಲಿದೆ. ಶಿವಸೇನೆ ಈ ರೀತಿ ಹಾನಿ ಮಾಡುತ್ತಾ ಹೋದರೆ ಮುಂದೆ ಇದು ಎಂದೆಂದಿಗೂ ಉಳಿಯದಂತೆ ಮಾಡಲು ನಮ್ಮ ಜನರಲ್ಲಿ ಸಾಕಷ್ಟು ಶಕ್ತಿ ಇದೆ. ಶಿವಸೇನೆಯ ಅನಾಹುತಗಳನ್ನು ತಡೆಗಟ್ಟಲು ಕೇಂದ್ರ ಸರಕಾರ ಆದೇಶ ಕಳುಹಿಸಬೇಕೆಂದು ಇಲ್ಲಿ ಮಾನ್ಯ ಮುಖ್ಯಮಂತ್ರಿಗಳು ತಂದಿರುವ ನಿರ್ಣಯದಲ್ಲಿದೆ. ಇದನ್ನು ಕೇಂದ್ರ ಸರಕಾರ ಬೇಗನೆ ಅರಿತು ತಕ್ಕ ಕ್ರಮಗಳನ್ನು ಈ ಕೂಡಲೇ ತೆಗೆದುಕೊಳ್ಳಬೇಕು. ಇಂದು ಕೇಂದ್ರ ಸರಕಾರಕ್ಕೆ ಕರ್ನಾಟಕ ರಾಜ್ಯ ಸರಕಾರದವರು ಕೊನೆ ಎಚ್ಚರಿಕೆ ಕೊಡುತ್ತಿದ್ದೇವೆ ಎಂದು ಸ್ಪಷ್ಟವಾಗಿ ತಿಳಿಸಬೇಕು. ಇನ್ನು ಮುಂದೆ ಇಂತಹ ಅನಾಹುತಗಳಾಗಲು ಅವಕಾಶ ಕೊಟ್ಟರೆ ಶಿವಸೇನೆ ಎನ್ನುವುದು ಎಂದೆಂದಿಗೂ ಉಳಿಯುವುದಿಲ್ಲ. ಇದನ್ನು ಮುಂಬಯಿ ಸರಕಾರ ಅರಿಯಬೇಕು. ಹಿಂದೆ ಮಹಾತ್ಮಾ ಗಾಂಧಿಯವರು ದಾಂಡಿಯಲ್ಲಿ ಉಪ್ಪಿನ ಸತ್ಯಾಗ್ರಹ ಮಾಡಿದ ಕಾಲದಲ್ಲಿ ಬ್ರಿಟಿಶ ಸರಕಾರದ ಮೇಲೆ ಯಾವ ರೀತಿ ಧೈರ್ಯದಿಂದ ಮುನ್ನುಗ್ಗಿದರು ಅದೇ ರೀತಿ

ಇಂದು ನಮ್ಮ ಕರ್ನಾಟಕ ಸರಕಾರದವರು ಯಾರ ಒತ್ತಾಯಕ್ಕೂ ಮಣಿಯದೆ ಮುನ್ನುಗ್ಗಬೇಕು. ಮತ್ತು ಶಿವಸೇನೆಯಿಂದಾಗುತ್ತಿರುವ ಅನ್ಯಾಯಗಳನ್ನು ತಡೆ ಗಟ್ಟಲೇಬೇಕು. ಇದರಲ್ಲಿ ಯಾವ ಪಾರ್ಟಿಯ ಪ್ರಶ್ನೆಯೂ ಬರುವುದಿಲ್ಲ. ಇದನ್ನು ಪಕ್ಷಾತೀತವಾದ ಪ್ರಶ್ನೆ ಎಂದು ಎಲ್ಲರೂ ಮನಗಾಣಬೇಕು. ಆದರೆ ನಮ್ಮ ಮಾನ್ಯ ಮುಖ್ಯಮಂತ್ರಿಗಳಾದ ಶ್ರೀಮಾನ್ ದೇವರಾಜ ಅರಸ್‌ರವರಿಗೆ ಕೇಂದ್ರ ಸರಕಾರದ ಒಂದು ಮಾಯಾ ಬಂದು ಅವರನ್ನು ಆವರಿಸಿದೆ. ಹಿಂದೆ ಕುರುಕ್ಷೇತ್ರ ಯುದ್ಧದ ಕಾಲದಲ್ಲಿ ಭೀಷ್ಮ ಶರಸನ್ಯಾಸವನ್ನು ತೆಗೆದುಕೊಂಡು ಅರ್ಜುನನಿಗೆ ಒಂದು ರೀತಿಯ ಮಾಯಾ ಆವರಿಸಿದಂತೆ ಅರ್ಜುನನಂತಿರುವ ನಮ್ಮ ಶ್ರೀ ದೇವರಾಜ ಅರಸ್‌ರವರಿಗೆ ಮಾಯಾ ಬಂದಿದೆ. ಮಹಾರಾಷ್ಟ್ರದಲ್ಲಿ ಶಿವಸೇನೆಯವರು ಹೆಂಗಸರ ಮಾನಾಪಹರಣ ಮಾಡಿದ್ದಾರೆ. ಇಂದು ರಾಜ್ಯಕ್ಕೆ ತಾಯಿಯಾಗಿರವಂಥ ಪ್ರಧಾನಿಯವರಿಗೆ ಇದು ದೊಡ್ಡ ಅವಮಾನವಲ್ಲವೇ? ಹಿಂದೆ ಲೋಕಮಾನ್ಯ ತಿಲಕ್‌ರವರು ಕೂಡ ಸ್ವಾತಂತ್ರ್ಯ ಹೋರಾಟದ ಕಾಲದಲ್ಲಿ ಜನತೆಗೆ ಸರಿಯಾದ ಎಚ್ಚರಿಕೆಯನ್ನು ನೀಡಿದ್ದರು. ಇಂದು ಮುಂಬಯಿಯಲ್ಲಿ ಶಿವಸೇನೆಯಿಂದ ಆಗಿರುವ ಅನಾಹುತಗಳು ಅಷ್ಟಿಷ್ಟಲ್ಲ. ಇದನ್ನು ಅವರಿಗೆ ಚೆನ್ನಾಗಿ ತಿಳಿಯುವಂತೆ ಒತ್ತಿ ತಿಳಿಸಬೇಕಾದ್ದು ನಮ್ಮಗಳೆಲ್ಲರ ಕರ್ತವ್ಯ. ಇಂದು ದೆಹಲಿಯಲ್ಲಿ ಕುಳಿತುಕೊಂಡ ಮುಂಬಯಿ ರಾಜ್ಯಕ್ಕೆ ಆದೇಶ ಕಳುಹಿಸಿದರೆ ಅವರೇನೂ ಹೆದರುವುದಿಲ್ಲ. ಇಲ್ಲಿರುವ ಮಾನ್ಯ ಸದಸ್ಯರಾದ ಶ್ರೀ ಸಯನಕ್‌ರವರು 1956 ರಿಂದಲೂ ಹೇಳುತ್ತಿದ್ದಾರೆ ನಾವು ಯಾರಿಗೂ ಹೆದರುವುದಿಲ್ಲ ಎಂದು. ಇಂದು ಹೆಣ್ಣು ಮಕ್ಕಳಿಗೆ ಅವಮಾನ ಮಾಡಿರುವುದು ನಮ್ಮ ರಾಷ್ಟ್ರಕ್ಕೆ ಅಪಮಾನ ಮಾಡಿದಂತಾಗಿದೆ ಹಾಗೂ ರಾಷ್ಟ್ರದ ಉನ್ನತ ನಾಯಕರಿಗೂ ಅಪಮಾನ ಮಾಡಿದಂತಾಗುತ್ತದೆ.

ಈಗಾಗಲೇ ಶಿವಸೇನೆಯು ಗೋರಿ ಒಳಗೆ ಹೋಗಿದೆ. ಅದನ್ನು ಗೋರಿಯೊಳಗೆ ಮುಚ್ಚುವುದಕ್ಕೆ ಮತ್ತೆ ತಾವು ಏನೂ ಪ್ರಯತ್ನ ಮಾಡಬೇಕಿಲ್ಲ. ಮುಖ್ಯವಾಗಿ ನಮ್ಮ ಮುಖ್ಯಮಂತ್ರಿಗಳು ಮಹಾಜನ್ ವರದಿಯನ್ನು ಅನುಷ್ಠಾನಕ್ಕೆ ತರುವಂತೆ ಕೇಂದ್ರ ಸರಕಾರದವರಿಗೆ ತಿಳಿಸಬೇಕು. ಅದು ಏನಾದರೂ ರದ್ದಾದರೆ ಯಥಾಸ್ಥಿತಿಯೇ ಮುಂದುವರೆಯಲಿ ಎಂದು ಅವರು ಹೇಳಿದ್ದಾರೆ. ಒಂದು ಪಕ್ಷ ಅವರು ಹೇಳಿದಂತೆ ಅದು ರದ್ದಾದರೆ ಮತ್ತೊಂದು ಆಯೋಗವನ್ನು ರಚನೆ ಮಾಡುವುದಿಲ್ಲ ಎಂದು ಯಾವ ರೀತಿ ಹೇಳುವುದು? ಅದು ನಿಮ್ಮ ಕೈಯ್ಯಲ್ಲಿ ಇಲ್ಲ. ಮುಂದೆ ಕೇಂದ್ರದಲ್ಲಿ ಯಾರು ಅಧಿಕಾರಕ್ಕೆ ಬರುತ್ತಾರೆಂಬುದು ಯಾರಿಗೂ ಗೊತ್ತಿಲ್ಲ ಆದಕಾರಣ ಮಹಾಜನ್ ವರದಿಯಿಂದ ನಮಗೆ ಲುಕ್ಸಾನಾದರೂ ಸಹ ಅದನ್ನು ಒಪ್ಪಿಕೊಳ್ಳುವುದು ಒಳ್ಳೆಯದು. ನಮ್ಮ ರಾಜ್ಯದಿಂದ ಯಾವುದೇ ಭಾಗ ಮಹಾರಾಷ್ಟ್ರಕ್ಕೆ ಹೋದರೂ ಸಹ ಅದು ಭಾರತದಲ್ಲಿಯೇ ಇರುತ್ತದೆಯೇ ಹೊರತು ಆಫ್ರಿಕಾ ದೇಶಕ್ಕೇನೂ ಹೋಗುವುದಿಲ್ಲ ಬೆಳಗಾಂವ ಒಂದು ಪಕ್ಷ ಮಹಾರಾಷ್ಟ್ರಕ್ಕೆ ಸೇರಿದರೂ ಸಹ ಅದು ಭಾರತ ದೇಶದಲ್ಲಿಯೇ ಇರುತ್ತದೆ. ನಾವು ಮಹಾಜನ್ ವರದಿಯನ್ನು ಒಪ್ಪಿಕೊಂಡಿರುವುದರಿಂದ ಅದನ್ನು ಜಾರಿಗೆ ತರುವ ವಿಚಾರ ಕೇಂದ್ರ ಸರ್ಕಾರಕ್ಕೆ ಸೇರಿದ್ದು. ಅದನ್ನು ಪಾರ್ಲಿಮೆಂಟಿನಲ್ಲಿ ಪಾಸು ಮಾಡಬೇಕು. ಆ ರೀತಿ ಪಾಸ್ ಮಾಡಬೇಕೆಂದು ಮಾನ್ಯ ಮುಖ್ಯ ಮಂತ್ರಿಗಳು ದೆಹಲಿಗೆ ಹೋಗಿ ಹೇಳಬೇಕು. ಶ್ರೀಮಾನ್ ದೇವರಾಜ ಅರಸ್

ಅವರು ಅರ್ಜುನನ ರೀತಿಯಲ್ಲಿ ಇದ್ದಾರೆ. ಆದರೆ ಅವರ ಮೇಲೆ ಭೀಷ್ಮನ ಮಾಯೆ ಮುಚ್ಚಿಕೊಂಡು ಬಿಟ್ಟಿದೆ. ಆ ಒಂದು ಮಾಯೆಯಿಂದ ಅವರು ಹೊರಗೆ ಬಂದು ಸಹಾಯದಿಂದ ಚುನಾವಣೆಯಲ್ಲಿ ಆರಿಸಿ ಬರಬೇಕು, ಯಾವ ರೀತಿಯಿಂದಲಾದರೂ ಸಹ ಆರಿಸಿ ಬರಬೇಕು ಎಂದು ಹೊರಟಿರುವದು ಸರಿಯಲ್ಲ; ಅವರಿಗೆ ಒಂದು ರೀತಿಯ ಕೆಟ್ಟ ಕನಸು ಬಿದ್ದಿದೆ. ಗೆಲ್ಲುವುದಿದ್ದರೆ ಯೋಗ್ಯ ರೀತಿಯಿಂದ ಗೆಲ್ಲಬೇಕು. ಟಿ.ಬಿ. ಪೇಸೆಂಟ್ ತರಹ ಇರುವುದರ ಬದಲು ಸಾಯುವುದೇ ಮೇಲು, ಈ ದೃಷ್ಟಿಯಿಂದ ನಮ್ಮ ಮಾನ್ಯ ಮುಖ್ಯಮಂತ್ರಿಗಳು ಕೆಲಸ ಮಾಡಬೇಕು. ಅವರು ಕರ್ನಾಟಕ ರಾಜ್ಯದ ಪುಣ್ಯಾತ್ಮರಾಗಿದ್ದಾರೆ. ಅಂತಹವರು ಮಹಾಜನ್ ವರದಿ ಜಾರಿಗೆ ಬರುವುದು ಬೇಡ ಎಂದು ಹೇಳುವುದು ಸರಿಯಲ್ಲ. ಈಗಲೇ ಅವರು ದೆಹಲಿಗೆ ಹೋಗಿ ಕೇಂದ್ರ ಸರ್ಕಾರದವರಿಗೆ ಅದನ್ನು ಜಾರಿಗೆ ತರುವಂತೆ ಹೇಳಬೇಕು. ಇಷ್ಟು ಹೇಳಿ ಮಾನ್ಯ ಮುಖ್ಯ ಮಂತ್ರಿಗಳು ಈ ಸಭೆಯ ಮುಂದೆ ಏನು ಒಂದು ನಿರ್ಣಯ ತಂದಿದ್ದಾರೆ. ಅದನ್ನು ನಾನು ಸ್ವಾಗತ ಮಾಡುತ್ತೇನೆ. ಮತ್ತು ಅದಕ್ಕೆ ನಮ್ಮ ಮಾನ್ಯ ದೇವೇಗೌಡರು ಏನು ಒಂದು ತಿದ್ದುಪಡಿ ತಂದಿದ್ದಾರೆ. ಅವನ್ನು ಸಹ ನಾನು ಸ್ವಾಗತ ಮಾಡುತ್ತೇನೆ. ಮಾನ್ಯ ದೇವೇಗೌಡರು ಎಷ್ಟು ವಿಷಯಗಳನ್ನು ಪ್ರತಿ ದಿವಸ ಓದುತ್ತಾರೋ ನನಗೆ ಗೊತ್ತಿಲ್ಲ. ಅವರು ಬಹಳ ಯೋಚನೆ ಮಾಡಿ ಈ ಒಂದು ತಿದ್ದು ಪಡಿಯನ್ನು ತಂದಿದ್ದಾರೆ. ಅದಕ್ಕಾಗಿ ಅದನ್ನು ಸ್ವಾಗತ ಮಾಡಿ ನನ್ನ ಮಾತನ್ನು ಮುಗಿಸುತ್ತೇನೆ.

ಸನ್ಮಾನ್ಯ ಸಭಾಧ್ಯಕ್ಷಣೀಯ ನಾನು ಯಾವುದನ್ನು ಮಾತನಾಡಬಾರದೆಂದು ತಿಳಿದುಕೊಂಡು ವಿಚಾರ ಮಾಡತ್ತಿದ್ದೆನೋ ಅದನ್ನೇ ವಿಚಾರ ಮಾಡುವಂಥ ಪ್ರಸಂಗ ಬಂದುದಕ್ಕಾಗಿ ವೇದನೆಯಾಗುತ್ತಿದೆ. ನಾನು ಎದ್ದ ಕೂಡಲೇ ದುಷ್ಕಾಲದ ಬಗ್ಗೆ ಮಾತಡುತ್ತಾನೆ ಎಂಬ ಹೆಸರು ಆಗಿದೆ. ನಾನು ಇಲ್ಲಿಗೆ ಬರುವ ಕಾಲಕ್ಕೆ ನಮ್ಮ ಕಮಿಷನರ್‌ರವರು ದುಷ್ಕಾಲದ ಹೆಸರು ತೆಗೆಯಬೇಡಿ ಎಂದರು.ನಾನು ನಮ್ರತೆಯಿಂದ ಸೂಚಿಸಬಯಸುತ್ತೇನೆ. ಗವರ್ನರ್ ಭಾಷಣ ಆದಕೂಡಲೇ ಅನಿವಾರ್ಯವಾಗಿ ಅದನ್ನು ನಾವು ವಿರೋಧಿಸಬೇಕಾಗುತ್ತದೆ. ಅದರಲ್ಲಿ ಯಾವ ಸತ್ಯಾಂಶಗಳೂ ಇಲ್ಲ. ಒಂದು ಭಾಷಣವನ್ನು ಓದಬೇಕು, ಬಡ್ಜೆಟ್‌ನಲ್ಲಿ ಯಾವುದಾದರೂ ಹೇಳಬೇಕಾಗುತ್ತದೆ, ಹೇಳಿದ್ದನ್ನು ಸಮರ್ಥನೆ ಮಡಿಕೊಳ್ಳಬೇಕಾಗುತ್ತದೆ. ಆ ದೃಷ್ಟಿಯಿಂದ ನಾವು ವಿರೋಧ ಪಕ್ಷದವರಾಗಿ ವಿರೋಧ ಮಾಡಬೇಕು ಎನ್ನುವ ದೃಷ್ಟಿಕೋನ ಇಟ್ಟುಕೊಂಡಿರುವ ಮನುಷ್ಯನಲ್ಲ. 63 ಕೋಟಿ ರೂಪಾಯಿ ಬರಗಾಲಕ್ಕಾಗಿ ಖರ್ಚು ಮಾಡಿರುವುದು, ರಾಜ್ಯ ಸರಕಾರವೇ ಕೊಟ್ಟಿರಲ್ಲಿ, ಭಾರತ ಸರ್ಕಾರವೇ ಕೊಡಲಿ ಅದು ತಾತ್ಪೂರ್ತಿಕವಾಗಿ, ದುಷ್ಕಾಲದ ಸಲುವಾಗಿ ಖರ್ಚು ಆಗಿರುವ ಹಣ, ಇಷ್ಟು ಹಣ ಬೀದರ್ ಗುಲಬರ್ಗಾಗಳಿಗಾಗಿ ಖರ್ಚು ಆಯಿತು ಎಂದು ಕೆಲವು ಸ್ನೇಹಿತರು ಮಾತನಾಡಿದರು. ಹಳೆ ಮೈಸೂರಿನ ಕಡೆ ಇಷ್ಟು ಖರ್ಚು ಮಾಡಲಿಲ್ಲ ಎನ್ನತಕ್ಕಂಥ ಆರೋಪಣೆಯನ್ನು ಮಾನ್ಯ ಮುಖ್ಯ ಮಂತ್ರಿಯವರು ಹೊರಬೇಕಾಗುತ್ತದೆ ನಾನು ಮುಂಬೈ ಅಸೆಂಬ್ಲಿಯಲ್ಲೂ ಇದ್ದೆ, ಬ್ರಿಟಿಷ ಸರ್ಕಾರದವರು ಇದ್ದ ಕಾಲಕ್ಕೂ ತಿಳುವಳಿಕೆ ಇತ್ತು, ತಾತ್ಪೂರ್ತಿಕವಾಗಿ ದುಷ್ಕಾಲದ ಸಲುವಾಗಿ, ಬ್ರಿಟಿಷ ಸರ್ಕಾರದವು ಖಾಯಂ ಯೋಜನೆಯನ್ನು ಮಾಡಲಿಲ್ಲ. ಮುಂಬೈ ರಾಜ್ಯದವರು ಸಹ ಈ ಬೀದರ್ ಜಿಲ್ಲೆ ಕರ್ನಾಟಕಕ್ಕೆ ಸೇರಿ ಹೋಗತಕ್ಕಂಥೆದು, ಇವರಿಗೆ ಕಲ್ಯಾಣ ಮಾಡಬಾರದೆಂದು ಅವರು ಖಾಯಂ ಯೋಜನೆಯನ್ನು ಮಾಡಲಿಲ್ಲ.

ಮಾಡುತ್ತೀರಿ ಎಂದು ನೇರವಾಗಿ ಪ್ರಶ್ನೆ ಕೇಳುತ್ತಿದ್ದೇನೆ. ಲಗ್ನ ಮಾಡುತ್ತೇನೆ ಎಂದು ಹೇಳಿ ಗೋರಿಗೆ ಹೋಗುವ ಸಮಯ ಬಂದರೂ ಆ ಕಾರ್ಯವನ್ನು ಮಾಡಿಲ್ಲ ಎಂದು ಸ್ಪಷ್ಟವಾಗಿ ಮಂತ್ರಿಗಳಿಗೆ ಹೇಳುತ್ತಿದ್ದೇನೆ.

ಇನ್ನು, ನೇಕಾರರ ಸಮಸ್ಯೆ, ಅವರ ಬಗ್ಗೆ ಏನು ಕಾರ್ಯಕ್ರಮ ತಮ್ಮ ಮುಂದೆ ಇದೆ. ಸಿಂದಗಿ ಇಂಡಿಯ ಇವತ್ತಿನ ಪರಿಸ್ಥಿತಿ ತಮಗೆ ಗೊತ್ತಿಲ್ಲ ಹೋದ ವರ್ಷ ಅನಾವೃಷ್ಟಿ, ಆದರೆ ಈ ವರ್ಷ ಅತಿವೃಷ್ಟಿಯಾಗಿ ಈ ವರ್ಷ ನೀರು ಹೋಯಿತು. ವೇಳೆಯಾಗಲಿಲ್ಲ ಹತ್ತಿ ಬೆಳೆ ಎದೆಮಟ್ಟ ಬೆಳೆದು ಬಂದಿತ್ತು ಅದು ಒಣಗಿ ಹೋಯಿತು. ಕುಸುಬಿ ಸಹ ಬರಲಿಲ್ಲ. 50 ಚೀಲ ಆಗಬೇಕಾಗದ್ದುದ್ದು 20 ಚೀಲ ಆಗುವ ಪರಿಸ್ಥಿತಿ ಇದೆ ಕೊನೆಯದಾಗಿ ಲೆವಿಯ ಬಗ್ಗೆ ಒಂದು ಮಾತನ್ನು ಹೇಳುತ್ತೇನೆ ಸರ್ಕಾರದವರು ಯಾವ ಕಾರಣದಿಂದಲೂ ಫರ್ಟಿಲೈಜರ್ಸ್‌ನ್ನು ಕೊಡಲಿಕ್ಕೆ ಆಗಲಿಲ್ಲ. ಫುಡ್ ಪ್ರಾಬ್ಲಂನ್ನು ಬಿಡಿಸುವ ಸಲುವಾಗಿಯೂ ಒಂದು ಕಾರ್ಯಕ್ರಮ ಇರಬೇಕಾಗಿತ್ತು. ಮಾನ್ಯ ಚನ್ನಬಸಪ್ಪನವರು ಅಪ್ಪರ್ ಕೃಷ್ಣಾ ಪ್ರಾಜೆಕ್ಟ್ ಮಾಡುತ್ತೇವೆಂದು ಹೇಳಿದರು ಅದರಿಂದ ನಮಗೆ ಅಷ್ಟು ಪ್ರಯೋಜನವಾಗುವುದಿಲ್ಲ ನಮ್ಮ ಬಿಜಾಪುರ ಜಿಲ್ಲೆ ಉತ್ತರ ಭಾಗದಲ್ಲಿ ಇದೆ ಅಪ್ಪರ್ ಕೃಷ್ಣಾ ಪ್ರಾಜೆಕ್ಟ್‌ನಿಂದ ಸಿಂದಗಿ, ಇಂಡಿಗೆ ಅಷ್ಟು ಪ್ರಯೋಜವಾಗುವುದಿಲ್ಲ. ಈ 3–4 ಏರಿಯಾಕ್ಕೆ ಪ್ರಯೋಜನವಾಗಬೇಕಾದರೆ ಹೊಸ ಪ್ರಾಜೆಕ್ಟ್ ಮಾಡಬೇಕು ಇರಿಗೇಷನ್ ವೆಲ್ಸನ್ನು ಏನು ಮಾಡುತ್ತಿದ್ದೇವೆಂದು ಹೇಳುತ್ತಿದ್ದೀರಿ ಹೊಸ ಬಾವಿಗಳನ್ನು ತೋಡಿಸುವುದಕ್ಕೆ ಬದಲಾಗಿ ಹದಿನೈದು ಸಾವಿರ ಬಾವಿಗಳು ಇಂಡಿ, ಸಿಂದಗಿಯಲ್ಲಿ ಇವೆ. ಕನಿಷ್ಟ ಪಕ್ಷ 8 ಸಾವಿರ ಭಾವಿಗಳಿಗಾದರೂ ಆಳ ತೆಗೆಸುವ ಒಂದು ವ್ಯವಸ್ಥೆ ಮಾಡಿಸಿ ಎಂದು ಮುಖ್ಯಮಂತ್ರಿಗಳು ಬಿಜಾಪುರಕ್ಕೆ ಬಂದಾಗ ಹೇಳಿದೆ. ಡಿ.ಸಿ.ಯವರು ಹೇಳಿದರು ರಿಪೋರ್ಟ್ ಬರಲಿಲ್ಲ ಏನು ಆಯಿತೋ! ಅದರ ಸಲುವಾಗಿ ಒಂದು ಕಾರ್ಯಕ್ರಮವನ್ನು ಸ್ಪಷ್ಟವಾದ ರೀತಿಯಲ್ಲಿ ಹಾಕಿ 63 ಕೋಟಿ ಏನು ಖರ್ಚು ಮಾಡಿದಿರಿ ಅದರಲ್ಲಿ 10 ಕೋಟಿ ಸಿಂದಗಿ ಇಂಡಿಗೆ ಅಲಾಟ್ ಮಾಡಿ ಕೊಡಿರಿ. ಇತ್ತೀಚಿನ ಧೋರಣೆಗಳಿಂದ ಏನ್ನು ಗೊತಾಗುತ್ತದೆಂದರೆ ವಿನೋಭಾ ಭಾವೆಯಂಥವರು ಸತ್ಯಾಗ್ರಹ ಮಾಡಬೇಕು, ನಮ್ಮಂಥವರು ಮಾಡುವುದು ಯೋಗ್ಯವಲ್ಲವೆಂಬ ಪ್ರಾಮಾಣಿಕ ಅಭಿಪ್ರಾಯವಿದೆ. ಸರ್ಕಾರದವರ ಈಗಿನ ಧೋರಣೆಯನ್ನು ನೋಡಿದರೆ ನಾವು ಸತ್ಯಾಗ್ರಹ ಮಾಡಬೇಕಾಗುತ್ತದೆಂದು ಹೇಳುತ್ತೇನೆ. ಹಾಗೂ ಸರ್ಕಾರಕ್ಕೆ ಈ ರೀತಿಯ ಅನಿವಾರ್ಯವಾದಂಥ ಪರಿಸ್ಥಿತಿಯನ್ನು ಒದಗಿಸಿಕೊಡಬೇಕಾಗುತ್ತದೆ. ಲೆವಿ ಬಗ್ಗೆ ಒಂದು ಮಾತನ್ನು ಹೇಳುತ್ತೇನೆ. ನೀವು ರೈತರಿಂದ ಜೋಳ ತೆಗೆದುಕೊಳ್ಳುತ್ತೀರಿ. ಭತ್ತ ತೆಗೆದುಕೊಳ್ಳುತ್ತೀರಿ ಅವರಿಗೆ ಸರಿಯಾದ ಧಾರಣೆ ಕೊಡಿ ಮತ್ತು ಅವರಿಗೆ ಗೊಬ್ಬರವನ್ನು ಸಹ ಸರಿಯಾಗಿ ಒದಗಿಸುವ ಏರ್ಪಾಡು ಮಾಡಿ. ರೈತರು ಸೊಸೈಟಿಗಳಲ್ಲಿ ಸಾಲ ಮಾಡಿಕೊಂಡಿರುತ್ತಾರೆ ಅವರು ಆ ಸಾಲದ ಹೊರೆಯಿಂದ ವಿಮುಕ್ತವಾಗಬೇಕಾದರೆ ನೀವು ಅವರಿಗೆ ಹೆಚ್ಚಿನ ಧಾರಣೆ ಕೊಡಿ ಬಡ ರೈತರು ತೃಪ್ತಿ ಆಗಬೇಕಾದರೆ ಸಬ್‌ಸಿಡಿ ಹೆಚ್ಚು ಮಾಡಿ, ಬಡರೈತನಿಗೆ ಹೆಚ್ಚು ತೊಂದರೆ ಕೊಡಬಾರದು.

ಇನ್ನು ಶಿಕ್ಷಣ ಕ್ಷೇತ್ರ ಕುರಿತು ಒಂದು ವಿಷಯ ಮಾತನಾಡುತ್ತೇನೆ. ಈವೊತ್ತಿನ ದಿವಸ ಶಿಕ್ಷಣ ಕ್ಷೇತ್ರದಲ್ಲಿ ಎಲ್ಲರೂ ಅಂಜತಕ್ಕೆ ಕಾಲ ಬಂದಿದೆ. ಆದರೆ ಹೈಸ್ಕೂಲ ವಿಚಾರ ನನಗೆ ಚೆನ್ನಾಗಿ ಗೊತ್ತಿಲ್ಲ. ಪ್ರಾಥಮಿಕ ಶಿಕ್ಷಣದ ಬಗ್ಗೆ ಹೇಳುವುದಾದರೆ 5–5 ಮಂದಿ ಹುಡಗರಿಗೆ 7–7 ಮಂದಿ ಮಾಸ್ಟರ್ಸ್ ಇದ್ದಾರೆ. ಅಲ್ಲದೆ ಈ ಶಿಕ್ಷಣ ಕ್ಷೇತ್ರಕ್ಕೆ ಸಾಲ ತಂದು ಖರ್ಚು ಮಾಡುವ ಬದಲು ಅವನಿಗೆ ಜೀವನೋಪಾಯಕ್ಕೆ ಆಗುವಂಥ ವಿದ್ಯಾಭ್ಯಾಸ ಮಾಡಿಕೊಡಬೇಕು. ನಾವು ಎಂ.ಎಲ.ಎ. ಗಳು ಇರಬಹುದು, ಮಂತ್ರಿಗಳಾಗಿ ಇರಬಹುದು, ಅದನ್ನು ಕೇಳುವವರು ಯಾರು? ಈವೊತ್ತು ವಿದ್ಯಾರ್ಥಿಗಳು ಏನು ಕೇಳುತ್ತಾರೆ ಎಂದರೆ ನೀವು ಒಂದು ಸಾವಿರ ರೂಪಾಯಿ ತೆಗೆದುಕೊಳ್ಳಿರಿ ನಮಗೆ ಜೀವನಕ್ಕೆ ಒಂದು ಹಾದಿ ತೋರಿಸಿಕೊಡಿರಿ ಎಂದು ಕೇಳುತ್ತಾರೆ ಆದುದರಿಂದ ನನ್ನ ಅಭಿಪ್ರಾಯ ಏನೆಂದರೆ ಈವೊತ್ತಿನ ದಿವಸ ಶಿಕ್ಷಣ ಕ್ಷೇತ್ರದಲ್ಲಿರತಕ್ಕಂಥ ಮೂಲ ಪದ್ಧತಿಯೇ ಬದಲಾಣೆಯಾಗಬೇಕು ಎಂದು ಹೇಳುತ್ತೇನೆ.

ಇನ್ನು ಮಾನ್ಯ ಸಿದ್ಧವೀರಪ್ಪನವರಿಗೆ ಒಂದು ಮಾತನ್ನು ಹೇಳುತ್ತೇನೆ. ಅವರು ತಮ್ಮ ಕ್ಯಾಬಿನೆಟ್ ಕೆಲಸ ಕಾರ್ಯಗಳ ಕಡೆಗೆ ಗಮನ ಕೊಡುವ ಬದಲು ನಮ್ಮ ದೇಶದ ಅನಾಥ ಬಾಲಕರ ಕಡೆ ಗಮನಕೊಡಬೇಕು ಎಂದು ಹೇಳುತ್ತೇನೆ. ನಮ್ಮ ರಾಜ್ಯದಲ್ಲಿರತಕ್ಕಂಥ ೮ ಕೋಟಿ ಜನರಲ್ಲಿ ಕೆಲವರು ವ್ಯವಸಾಯವನ್ನು ಅವಲಂಬಿಸಿದ್ದಾರೆ. ಕೆಲವರು ಕೈಗಾರಿಕೆಯನ್ನು ಅವಲಂಬಿಸಿದ್ದಾರೆ. ಇವರುಗಳ ಬಗ್ಗೆ ತಾವು ಏನೇನು ಕಾರ್ಯಕ್ರಮಗಳನ್ನು ತಗೆದುಕೊಂಡಿದ್ದೀರಿ ಎನ್ನುವುದನ್ನು ಹೇಳಿರಿ. ಮಾನ್ಯ ಸಿದ್ಧವೀರಪ್ಪ ನವರು ಈ ವಿಷಯದತ್ತ ಗಮನ ಕೊಡದೆ ನಿನ್ನೆ ಏನು ಹೇಳಿದರು ಎಂದರೆ ಯು.ಪಿ. ಯಲ್ಲಿ ಚುನಾವಣೆ ಆಗಿರುವುದನ್ನು ನೋಡಿರಿ, ಒರಿಸ್ಸಾದಲ್ಲಿ ಚುನಾವಣೆ ಆಗಿರುವುದನ್ನು ನೋಡಿರಿ, ಇನ್ನಾದರೂ ನಮ್ಮ ನಮ್ಮ ಭಿನ್ನಾಭಿಪ್ರಾಯಗಳನ್ನು ಮರೆತು ಒಂದಾಗಲೂ ಬನ್ನಿರಿ ಎಂದು, ಆದರೆ ಹೇಳುವುದು ಏನೆಂದರೆ ನಾವು (ಆರ್) ಕಾಂಗ್ರೆಸ್ ನಲ್ಲೇ ಇರಲಿ, ಅಥವಾ ಕಾಂಗ್ರೆಸ್ ನಲ್ಲೇ ಇರಲಿ ಅಥವಾ ಸಮ್ಮಿಶ್ರ ಸರ್ಕಾರದಲ್ಲೇ ಇರಲಿ, ಮಂಡಲದ ಹೊರಗಿನ ಭಾವವಾಗಲಿ ಅಥವಾ ಒಳಗಿನ ಭಾವವಾಗಲಿ ಯೋಗ ಮಾಡುವ ಬದಲು ಜೀವಂತವಾಗಿರುವವರ ಬಗ್ಗೆ ಯೋಚನೆ ಮಾಡಬೇಕೇ ಹೊರತು ಎಲೆಕ್ಷನ್ ಸುದ್ದಿ ಏತಕ್ಕೆ ಹೇಳುತ್ತೀರಾ? ಎಂ.ಎಲ.ಎ. ಗಳ ಬಗ್ಗೆ ಯೋಚನೆ ಮಾಡುವ ಬದಲು ಬಡವನು ಬದುಕುವ ಕಡೆ ಅವನನ್ನು ಉದ್ಧಾರ ಮಾಡುವ ಯೋಚನೆ ಮಾಡಿರಿ ಎಂದು ಹೇಳುತ್ತೇನೆ. ಈ ವಿಚಾರವನ್ನು ನಾನು ಹಾಸ್ಯಾಸ್ಪದವಾಗಿ ಹೇಳುತ್ತೇನೆ ಎಂದು ತಿಳಿದುಕೊಳ್ಳಬೇಡಿರಿ. ಇಲ್ಲಿ ಕೂತುಕೊಂಡು ಸುಳ್ಳು ಹೇಳಬೇಡಿರಿ. ಆ ಬಡವರನ್ನು ಉದ್ಧಾರ ಮಾಡುವ ಕಡೆ ಯೋಚನೆ ಮಾಡಿ ಇಲ್ಲದೇ ಹೋದರೆ ಮುಂದೆ ಏನು ಪರಿಸ್ಥಿತಿ ಬರುತ್ತದೆ ಎಂದು ನೋಡಿರಿ ನಾನು ಹೀಗೆ ಹೇಳುತ್ತಿದ್ದೇನೆಂದು ದಯವಿಟ್ಟು ತಪ್ಪು ತಿಳಿದುಕೊಳ್ಳಬೇಡಿರಿ. ಅವರ ಕಡೆ ಗಮನ ಕೊಡದೇ ಹೋದರೆ ಚರ್ಮ ಕೈಕಾಲಗಳು ಹುಳಿತುಕೊಂಡು ರೋಗಿಗಳು ಏನು ಇರುತ್ತಾರೋ, ಅದಕ್ಕಿಂತಲೂ ಮಹಾರೋಗಿಗಳಾಗಿ ಆಗುತ್ತೀರಿ ಎಂದು ಹೇಳುತ್ತೇನೆ.

ಇನ್ನು ಹರಿಜನರ ಬಗ್ಗೆ ಒಂದು ವಿಷಯ ಹೇಳುತ್ತೇನೆ ಗ್ರಾಮಾಂತರ ಪ್ರದೇಶದಲ್ಲಿ ಎಲ್ಲೆಲ್ಲಿ ಹರಿಜನರು ಇರುತ್ತಾರೋ ಅಲ್ಲಿ ಅವರವರಲ್ಲೇ ಅವಹೇಳನ ಅವಮಾನವಾಗುತ್ತಿದೆ. ಅವರವರಲ್ಲೇ ಜಗಳವಾಗುತ್ತಿದೆ. ಏಕಮತ ಇಲ್ಲ. ಶ್ರೀ ಎಂ.ಹೆಚ್. ಜಯಪ್ರಕಾಶ ನಾರಾಯಣ ಅವರು ಯಾವಾಗಲೂ ಈ ಬಗ್ಗೆ ಹೇಳುತ್ತಿದ್ದಾರೆ. ಈವೊತ್ತಿನ ದಿವಸ ಅವರವರಲ್ಲೇ ಎಡಗೈ, ಬಲಗೈ ಎಂದುಕೊಂಡು ತ್ರಾಸ ಕೊಡುತ್ತಿದ್ದಾರೆ. ಆದುದರಿಂದ ಇದೇನು ಇದೆ, ಹಿಂದೂಗಳು ಮಾಡಿದ ಪಾಪವೇನು? ಎಂದು ನಾನು ಕೇಳುತ್ತೇನೆ. ಉದಾಹರಣೆಗೆ ಬಾಗೇಬಾಡಿ ತಾಲ್ಲೂಕಿನಲ್ಲಿ ಮಾರ್ಕಭಿನಹಳ್ಳಿ ಅಂತ ಒಂದು ಊರು ಇದೆ. ಅಲ್ಲಿ ಮಾದಿಗರು ಒಂದು ಬಾವಿ ಮಾಡಿಕೊಂಡಿದ್ದಾರೆ. ಅದಕ್ಕೆ ಎಡಗೈನವರು ಮಣ್ಣು ತೆಗೆದುಕೊಂಡು ಬಂದು ಮುಚ್ಚುತ್ತಾ ಇದ್ದಾರೆ. ಮಾಹಾತ್ಮಾ ಗಾಂಧಿಯವರು ಹರಿಜನರ ಬಗ್ಗೆ ಏನು ಕೆಲಸ ಮಾಡುತ್ತಾ ಇದ್ದರು ಎನ್ನುವುದು ನನಗೆ ಗೊತ್ತಿದೆ. ಈ ತರಹದ ಪರಿಸ್ಥಿತಿ ಅಲ್ಲಿರುವುದರಿಂದ ಏನು ಮಾಡಬೇಕು ಹೇಳಿ. ಇನ್ನು ಆ ಬಗ್ಗೆ ನಾನು ಹೆಚ್ಚು ಹೇಳುವುದಿಲ್ಲ.

ಇನ್ನು ನಮ್ಮ ರಾಜ್ಯದ ಇರಿಗೇಷನ್‌ಗಾಗಿ ವರ್ಲ್ಡ್ ಬ್ಯಾಂಕ್ ನಿಂದ ಸಾಕಷ್ಟು ಹಣವನ್ನು ತರುತ್ತೇವೆ ಎಂದು ಮಾನ್ಯ ಮುಖ್ಯಮಂತ್ರಿಗಳು ಹೇಳಿದ್ದಾರೆ. ಈ ಮೈನರ್ ಇರಿಗೇಶನ್ ಬಗ್ಗೆ ನಮ್ಮ ಜಿಲ್ಲೆಯ ಸಿಂದಗಿ ಮತ್ತು ಇಂಡಿ ತಾಲ್ಲೂಕಿನ ಪರಿಸ್ಥಿತಿ ಬಗ್ಗೆ ಹೇಳುವುದಾದರೆ ನಮ್ಮ ತಾಲ್ಲೂಕಿನಲ್ಲಿ ಮೈನರ್ ಇರಿಗೇಷನ್ ಮಾಡಲು ಸಾಕಷ್ಟು ಸ್ಕೋಪ್ ಇಲ್ಲ. ಅದುದರಿಂದ ಅಲ್ಲಿ ಅಪ್ಪರ್ ಕೃಷ್ಣಾ ಪ್ರಾಜೆಕ್ಟ್ ಕೆಲಸ ತೆಗೆದುಕೊ0ಡು ಮಾಡಿಂ. ಇದಕ್ಕೆ ನಮಗೆ ರಾಧಾಕೃಷ್ಣ ಅಂಥ ಮಹಾನಭಾವರ ರೆಕಮೆಂಡೇಷನ್ ಬೇಡ. ನೀವು ಇದಕ್ಕಾಗಿ ಕೇಂದ್ರ ಸರಕಾರದಲ್ಲಿ ಸಾಲವನ್ನಾದರೂ ತೆಗೆದುಕೊಳ್ಳಿರಿ. ಗ್ರಾಂಟನ್ನಾದರೂ ತೆಗೆದುಕೊಳ್ಳಿರಿ. ಹಿಂದೆ ನಮ್ಮ ಮುಖ್ಯ ಮಂತ್ರಿಗಳು ಈ ಅಪ್ಪರ್ ಕೃಷ್ಣಾ ಪ್ರಾಜೆಕ್ಟ್ ಕೆಲಸವನ್ನು ಆದಷ್ಟು ಜಾಗ್ರತೆ ಮುಗಿಸುತ್ತೇವೆಂದು ಭರವಸೆ ಕೊಟ್ಟಿದ್ದಾರೆ. ಅಲ್ಲಿ ಈಗ ಆಗುತ್ತಾ ಇರತಕ್ಕಂಥ ಕೆಲಸ ನೋಡಿದರೆ ಬಹಳ ನಿಧಾನವಾಗಿ ಆಗುತ್ತಾ ಇದೆ. ಇದರಿಂದ ಮನಸ್ಸಿಗೆ ಬಹಳ ಅಸಂತೋಷವಾಗಿದೆ. ಆದುದರಿಂದ ನಾನು ಹೇಳುವುದು ಏನೆಂದರೆ ನಮ್ಮ ಕಡೆ ಎಲ್ಲರಿಗೂ ಒಂದೊಂದು ಬಾವಿ ಮಾಡಿಸಿಕೊಡಿರಿ ಎಂದು ಹೇಳುತ್ತೇನೆ. ಇದಕ್ಕಾಗಿ ನೀವು 10 ಕೋಟಿ ರೂಪಾಯಿಯನ್ನಾದರೂ ಹೊರಗಡೆಯಿಂದ ಸಾಲವನ್ನು ತೆಗೆದುಕೊಂಡು ಬನ್ನಿರಿ. ನಾವು ಬೇಡವೆನ್ನುವುದಿಲ್ಲ. ನೀವು ಆ ರೈತರಿಗೆ ಒಂದು ಒಂದು ಸ್ಪೇಷಲ್ ಲೋನ್ ಆದರೂ ಕೊಟ್ಟು ನೀರಾವರಿ ಬಾವಿಗಳನ್ನು ಇಂಪ್ರೂ ಮಾಡುವುದಕ್ಕೆ ಸಹಾಯ ಮಾಡಿರಿ. ಆದರೆ ಆ ಸಾಲವನ್ನು ಜನತೆಯ ಕೈಗೆ ಕೊಡಬೇಡಿರಿ ಆಫೀಸರ ಕೈಯಲ್ಲಿ ಕೊಟ್ಟು ಕೆಲಸ ಮಾಡಿಸಿರಿ ಅವರಿಗೆಲ್ಲಾ ನೀರು ಕೊಡಿಸಿರಿ ಎಂದು ಇಷ್ಟು ಮಾತ್ರ ಹೇಳುತ್ತೇನೆ.

ಇನ್ನು ರೋಡ್ ವಿಷಯ ಹೇಳುವುದಾದರೆ ಬಂಡಿಗ್ ಕೆಲಸ ಮತ್ತು ಬಾವಿ ಕೆಲಸಕ್ಕೆ ಸರ್ಕಾರ ಕೊಟ್ಟ ಹಣವನ್ನು ಫ್ರೀ ಅಂಥ ಮಾಡಿರಿ ಸ್ಕೇರ್ಸಿಟಿ ಒಸಗಿರುವ 63 ಕೋಟಿ ರೂಪಾಯಿ ಹಣದಲ್ಲಿ ಏನು ಖರ್ಚು ಮಾಡಿದರೂ ಕೂಡ ಸ್ಕೇರ್ಸಿಟಿ ಏನೂ ಕಡಿಮೆ ಆಗಲಿಲ್ಲ. ಟಿ.ಡಿ.ಬಿ. ರೋಡ್ಸ್‌ಗಳಿಗಾಗಲಿ ಅಥವಾ ಪಿ.ಡಬ್ಲ್ಯೂ.ಡಿ ರೋಡ್ಸ್‌ಗಳಿಗಾಗಲೀ ಈವಾಗ ಏನು ಹಣ ಖರ್ಚು

ಮಾಡಿದ್ದೀರಿ ಅದನ್ನು ಸ್ಪೇರ್ಸಿಟಿ ಹಣದಲ್ಲಿ ಮಾಡಿಸಿದೀರಿ. ಅದಕ್ಕೆ ಖರ್ಚು ಮಾಡಿದ ಹಣವನ್ನು ಬೇವರ್ಸಿ ಹಣ ಎಂದು ಹೇಳುವ ಬದಲು ಸಾರ್ವಜನಿಕರ ಹಣ ಅಥವಾ ಇಂಥಾ ಹಣ ಎಂದು ಏತಕ್ಕೆ ಹೇಳಬಾರದು? ಮಾನ್ಯ ದಯಾನಂದ ಸಾಗರ್ ರವರು ಒಂದು ಮಾತು ಹೇಳಿದರು. ಅದು ಏನೆಂದರೆ ವಿಶ್ವಾಮಿತ್ರ ತಪಸ್ಸು ಮಾಡುತ್ತಿದ್ದ, ಮೇನಕೆ ಬಂದಳು, ಶಕುಂತಲೆ ಹುಟ್ಟಿದಳು. ಕಾವೆಲ್ಲ ಅರಿದ ಮೇಲೆ ವಿಶ್ವಾಮಿತ್ರ ಶಕುಂತಲೆ ತನ್ನ ಮಗಳಲ್ಲ ಅಂದ ಎಂದು. ಆ ರೀತಿ ವಿಶ್ವಾಮಿತ್ರ ಶಕುಂತಲೆ ಸಂಬಂಧದಂತೆ ನಿಮ್ಮ ವರ್ತನೆ ನೋಡಿ. ಆದುದರಿಂದ ನೀವು ಖರ್ಚು ಮಾಡುವ ಹಣ ಬೇವರ್ಸಿ ಹಣ ಎಂದು ಹೇಳಬೇಡಿ. ಯಾವ ಸರ್ಕಾರ ಬಂದರೂ ಕೂಡ ಟ್ಯಾಕ್ಸ್ ಹಾಕದೆ ಹೋದರೆ ಸರ್ಕಾರಿ ಕೆಲಸ ಹೇಗೆ ನಡೆಯುತ್ತದೆ. ಯೋಗ್ಯ ಕೆಲಸಕ್ಕೆ ಟ್ಯಾಕ್ಸ್ ಹಾಕಿ, ಯೋಗ್ಯ ಕೆಲಸಕ್ಕೆ ಉಪಯೋಗಿಸಿ ಬೇಡ ಅನ್ನುವುದಿಲ್ಲ. ಈಗ ಹೆಚ್ಚು ಸಂಖ್ಯೆಯಲ್ಲಿ ಮಂತ್ರಿಗಳಾಗಿದ್ದೀರಿ. ಆದ್ದರಿಂದ ಖರ್ಚು ಹೆಚ್ಚಾಗುತ್ತಾ ಇದೆ, ಅದನ್ನು ಕಡಿಮೆ ಮಾಡಿರಿ ಎಂದು ಹೇಳುತ್ತೇನೆ.

ಇನ್ನು ನಮ್ಮ ಸಿಂದಗಿ ಮತ್ತು ಇಂಡಿ ತಾಲ್ಲೂಕಿನ ಜನರ ವಿಚಾರ ಹೇಳುವುದಾದರೆ, ಅವರು ಯಾವ ಕೆಲಸಕ್ಕೇ ಆಗಲಿ ನಿಮ್ಮನ್ನು ಕೇಳಲು ಬರುವುದಿಲ್ಲ. ಏತಕ್ಕೆಂದರೆ ನಿಮ್ಮನ್ನು ನಾವು ಆರಿಸಿ ಕಳುಹಿಸಿದ್ದೇವೆ ಕ್ಷೇತ್ರದ ಕೆಲಸ ಮಾಡಿಕೊಡು ಎಂದು. ನಮ್ಮ ಹತ್ತಿರ ಬಂದು ಹೇಳುತ್ತಾರೆ. ನಮ್ಮ ಪರಿಸ್ಥಿತಿ ಹೀಗಿರುವುದರಿಂದ ನಾವು ನಿಮಗೆ ಈ ಮಾತುಗಳನ್ನು ಹೇಳಬೇಕಾಗಿದೆ.

ಇನ್ನು ಮನೆಯಿಲ್ಲದೇ ಇರುವವರಿಗೆ ನಿವೇಶನವನ್ನು ಕೊಡುತ್ತೇವೆ ಎಂದು ಹೇಳುತ್ತೀರಿ ಆದರೆ ಆ ನಿವೇಶನಗಳು ಯಾರಿಗೆ ಸಿಕ್ಕುತ್ತದೆ ಎಂದರೆ ಅದು ಅನುಕೂಲಸ್ಥರಿಗೆ ಸಿಕ್ಕುತ್ತದೇ ವಿನಾ ನಿಜವಾಗಿ ಬಡವರಿಗೆ ಸಿಕ್ಕುವುದಿಲ್ಲ. ಇನ್ನು ನಮ್ಮವರು ಗೋವಾಕ್ಕೆ ಮತ್ತು ಅಕ್ಕಪಕ್ಕದ ಸ್ಥಳಗಳಿಗೆ ಹೋದವರು ಅಲ್ಲೇ ಇದ್ದಾರೆ. ಎಷ್ಟು ಜನ ಇಲ್ಲಿಗೆ ಬಂದಿದ್ದಾರೆ ಹೇಳಿ, ಅವರು ಯಾರೂ ಇಲ್ಲಿ ಬರುತ್ತಾ ಇಲ್ಲ. ಏತಕ್ಕೆಂದರೆ ಎಲ್ಲಾ ಅನುಕೂಲತೆಗಳೂ ಅಲ್ಲೇ ಇರುವುದರಿಂದ ಅಲ್ಲೇ ಇದ್ದು ಬಿಟ್ಟಿದ್ದಾರೆ. ನೀವು ಅವರಿಗೆ ಇಲ್ಲೇ ಸರಿಯಾದ ಅನುಕೂಲತೆಗಳನ್ನು ಮಾಡಿಕೊಟ್ಟರೆ ಅವರು ಏತಕ್ಕೆ ಅಲ್ಲಿಗೆ ಹೋಗುತ್ತಾರೆ?

ಇನ್ನೊಂದು ವಿಷಯ ಮಾತ್ರ ಹೇಳಿ ನನ್ನ ಮಾತನ್ನು ಮುಗಿಸುತ್ತೇನೆ. ಶ್ರೀಮಾನ್ ಚನ್ನಬಸಪ್ಪನವರು ಹೊಸದಾಗಿ ಮಿನಿಸ್ಟರ್ ಆಗುವ ಕಾಲದಲ್ಲಿ ಶ್ರೀಮಾನ್ ನಿಜಲಿಂಗಪ್ಪನವರ ಹತ್ತಿರ ಬಂದಿದ್ದರು. ಅವಾಗ ನಮ್ಮ ಕಡೆಯಲ್ಲಿ ಒಂದು ಚಾಂದಕವಟೆ ಬ್ರಿಡ್ಜನ್ನು ಮಾಡಿಸಿಕೊಡಬೇಕು ಎಂದು ಹೇಳಿದ್ದೆ. ಆ ಕೆಲಸ ಈವೊತ್ತಿನವರೆಗೂ ಅವರ ಕೈಯಲ್ಲಿ ಆಗಲಿಲ್ಲ. ಅಲ್ಲಿ ಕಲ್ಲು ಹೊಡಿತಾರೆಂದು ನಾನು ಆ ಜಾಗಕ್ಕೇ ಹೋಗಿಲ್ಲ. ಆದುದರಿಂದ ಸರ್ಕಾರದವರು ಆ ಚಾಂದಕವಟೆ ಬ್ರಿಡ್ಜನ್ನು ಕೂಡಲೆ ಮಾಡಿಸಿಕೊಡಬೇಕೆಂದು ಒತ್ತಾಯ ಮಾಡುತ್ತೇನೆ.

ಇನ್ನು ಕಡೆಯದಾಗಿ ಒಂದು ಮಾತು: ರಾಜ್ಯದಲ್ಲಿರತಕ್ಕ ದೇವಸ್ಥಾನಗಳ ಬಗ್ಗೆ ಒಂದು ಸರ್ವೆ ಮಾಡಿಸಬೇಕಾಗಿದೆ. ನಮ್ಮಲ್ಲಿ ಹಿಪ್ಪರಿಗಿ ಅನ್ನ ತಕ್ಕ ದೇವಸ್ಥಾನಕ್ಕೆ ವರ್ಷಕ್ಕೆ ಹತ್ತು ಸಾವಿರ ರೂಪಾಯಿಗಳ ಮೇಲೆ ವರಮಾನವಿದೆ. ಆ ದೇವಸ್ಥಾನವನ್ನು ಹಿಂದಿದ್ದ ಮಾನ್ಯ ಮಂತ್ರಿಗಳಾದ

ಅಜೀಜ್ ಸೇಟರವರು ಒಂದು ಪಿಲಿಗ್ರಿಂ ಸೆಂಟರನ್ನಾಗಿ ಮಾಡುವುದಾಗಿ ಹೇಳಿದ್ದರು. ಆದರೆ ಅದೇನು ಕಾರಣವೋ ಅದರ ಬಗ್ಗೆ ಅವರು ಕಾರ್ಯಕ್ರಮಗಳನ್ನು ಕೈಗೊಳ್ಳಲಿಲ್ಲ. ಆ ದೇವಸ್ಥಾನಕ್ಕೆ ಅನುಕೂಲಗಳನ್ನು ಹೆಚ್ಚಿಸಿಕೊಡಬೇಕೆಂದು ಒತ್ತಾಯ ಮಾಡುತ್ತೇನೆ.

ಆದರೆ ಆ ಸಿಂದಗಿ ಮತ್ತು ಇಂಡಿ ತಾಲ್ಲೂಕಾಗಳಿಗೆ ಇರಿಗೇಷನ್‌ಗಳ ಅನುಕೂಲ ಕಲ್ಪಿಸಿಕೊಡದಿದ್ದರೆ ಮುಂದೇನಾಗುತ್ತದೆಂಬುದನ್ನು ನಾನು ಈಗ ಹೇಳಲಾರೆ. ಅದಕ್ಕೆ ಅವಕಾಶ ಕೊಡದಂತೆ, ಕಾರ್ಯಕ್ರಮಗಳನ್ನು ಕೈಗೊಳ್ಳಬೇಕೆಂದು ಒತ್ತಾಯಪಡಿಸಿ ನನ್ನ ಮಾತುಗಳನ್ನು ಮುಗಿಸುತ್ತೇನೆ.

## ಅಶಕ್ತರನ್ನು ಮುಂದೆ ತರಬೇಕು

7ನೇ ಏಪ್ರಿಲ್ 1974

ಶ್ರೀ ಎಸ್.ವೈ. ಪಾಟೀಲ-ಮಾನ್ಯ ಅಧ್ಯಕ್ಷರೇ, ಮಾನ್ಯ ಸ್ನೇಹಿತರಾದ ಶ್ರೀಮಾನ್ ಕೆ.ಹೆಚ್. ಹನುಮೇಗೌಡರು ತಂದಿರತಕ್ಕಂಥ ಠರಾವನ್ನು ನಾನು ಅನುಮೋದಿಸಲು ಕೆಲವು ಮಾತುಗಳನ್ನು ಹೇಳಬಯಸುತ್ತೇನೆ. ನನಗಂತೂ ಮಾನ್ಯ ಕಾಗೋಡು ತಿಮ್ಮಪ್ಪ ಅವರ ಭಾಷಣವನ್ನು ಕೇಳಿದ ಬಳಿಕ ಒಂದು ವಿಷಯ ನನ್ನ ಮೇಲೆ ಪರಿಣಾಮವಾಗುತ್ತದೆ. ಈ ಸದಸ್ಯ ಬಲದ ಮೇಲಿಂದ ಒಂದು ಸಂಘಟನೆಯನ್ನು ಬಲ ಮಾಡುವುದಾಗಲಿ, ಅಥವಾ ನಮ್ಮ ಸಾಮೂಹಿಕ ತೊಂದರೆಯನ್ನು ಪರಿಹಾರ ಮಾಡಿಕೊಳ್ಳುವುದಕ್ಕೆ ಸಾಧ್ಯವಾಗುವುದಿಲ್ಲ. ಯಾವಾಗ ಎಲ್ಲಿ ಅಜ್ಞಾನ ಇರುತ್ತದೋ, ಎಲ್ಲಿ ಅಸಕ್ತರರು ಇದ್ದಾರೋ ಅವರನ್ನು ಜ್ಞಾನಿಗಳಾಗಿ ಸಶಕ್ತರನ್ನಾಗಿ ಮಾಡುವುದು ಗುಣಧರ್ಮ ಆದರೆ ಈವೊತ್ತು ದೇಶದಲ್ಲಿ ಏನಾಗಿದೆ ಎಂದರೆ ಯಾರಾದರೂ ಅನ್ಯಾಯ ಮಾಡುತ್ತಿದ್ದರೆ ಅನ್ಯಾಯವನ್ನು ಮಾಡಿಸಿಕೊಳ್ಳುವುದು ಮುಖ್ಯವೇ ಹೊರತು, ಅನ್ಯಾಯ ಮಾಡಬಾರದು ಎಂದು ರಿಟ್ ಹಾಕಿದರೂ ಅದು ಬಗೆಹರಿಯುವುದಿಲ್ಲ. ಈವೊತ್ತಿನ ದಿವಸ ಕಾಗೋಡು ತಿಮ್ಮಪ್ಪನವರು ಒಂದು ಕ್ಯಾಲಿಕ್ಯುಲೇಷನ್ ಮಾಡಿ, ದೇಶದಲ್ಲಿ 53 ಪರ್ಸೆಂಟ್ ಜನ ಇದ್ದಾರೆ ಅಂತ ಏನು ಹೇಳಿದರು ಅದಕ್ಕೆ ನಾನು ಹೇಳುತ್ತೇನೆ ಈವೊತ್ತಿನ ದಿವಸ ಲಿಂಗಾಯಿತರೇ ಆಗಲಿ, ಯಾರೇ ಆಗಲಿ, ಬ್ರಾಹ್ಮಣ ಸಮಾಜವೇ ಆಗಲಿ ಯಾರೇ ಆಗಲಿ ಮುಖ್ಯವಾಗಿ ಆಗಿರುವ ಅನ್ಯಾಯ, ಮಹಿಳಾ ವರ್ಗದ ಮೇಲೆ ಎಂದು ಸ್ಪಷ್ಟವಾಗಿ ಹೇಳುತ್ತೇನೆ. ಈವೊತ್ತಿನ ದಿವಸ ಹೆಣ್ಣುಮಕ್ಕಳು ಜಾಗೃತರಾದರೆ ಯಾವ ಪುರುಷರೂ ಅಸೆಂಬ್ಲಿಗೆ ಬರೋಕೆ ಸಾಧ್ಯವಿಲ್ಲ. ಅದನ್ನು ಸ್ಪಷ್ಟವಾಗಿ ತಿಳಿದುಕೊಳ್ಳಿ. ಈವೊತ್ತು ಭಾರತದೇಶದಲ್ಲಿ ಹೆಣ್ಣು ಮಕ್ಕಳು ಪ್ರಧಾನ ಮಂತ್ರಿ ಆಗಿರುವುದು ಇದೇ ಮೊದಲು. ಯಾವ ವ್ಯಕ್ತಿಯೇ ಇರಲಿ, ಅಂತವರ ಮೇಲೆ ಕ್ರಮ ತೆಗೆದುಕೊಳ್ಳಿ.

ದೇವರಾಜ ಅರಸ್‌ರವರು ಹೇಳುತ್ತಾರೆ ಸಣ್ಣ ಸಮಾಜವಾದಿಗಳು ಮುಂದೆ ಬರಬೇಕು ಎಂದು. ಯಾವ ಜಾತಿಯವರು ಬಂದರೂ ಕೂಡ, ಯಾವ ಕ್ಷೇತ್ರದವರು ಬಂದರೂ ಕೂಡ ಅಶಕ್ತರ ಮೇಲೆ ಆಕ್ರಮಣ ನಡೆಯುತ್ತಿದೆ. ಈವೊತ್ತು ಕಾಂಗ್ರೆಸ್ಸಿನ ಘೋಷಣೆ ಏನು ಇದೆ ನೋಡಿ.

ಕಾಗೋಡು ತಿಮ್ಮಪ್ಪನವರು ಈಡಿಗರಾದರೂ ಅವರು ಬ್ರಾಹ್ಮಣರ ಮಟ್ಟದಲ್ಲಿದ್ದಾರೆ. ಅವರು ತಾಲ್ಲೂಕಾ ಬೋರ್ಡ್ ಪ್ರೆಸಿಡೆಂಟರಾಗಿದ್ದಾರೆ, ಹಾಗೆಯೇ ಮಂಜುನಾಥ್‌ರವರು ತಾಲ್ಲೂಕಾ ಬೋರ್ಡ್ ಪ್ರೆಸಿಡೆಂಟರಾಗಿದ್ದಾರೆ. ಮತ್ತು ಈ ಸದನದಲ್ಲಿ ನಾಲ್ಕು ಜನ ಏಕೀಕರಣ ಸಮಿತಿಯವರು ಇದ್ದಾರೆ. ಹಾಗೆಯೇ ಹಿಂದೆ ಹನುಮಂತಯ್ಯನವರು ಮುಖ್ಯಮಂತ್ರಿಗಳಾಗಿದ್ದರು, ಶ್ರೀಮಾನ್ ವಿರೇಂದ್ರ ಪಾಟೀಲರು ಮುಖ್ಯಮಂತ್ರಿಗಳಾಗಿದ್ದರು. ಶ್ರೀಮಾನ್ ಕಡಿದಾಳ್ ಮಂಜಪ್ಪನವರು ರೆವಿನ್ಯೂ ಮಂತ್ರಿಗಳಾಗಿದ್ದರು. ಆದರೆ ಲಿಂಗಾಯತರೇ ಹೆಚ್ಚು ಬರುತ್ತಿದ್ದಾರೆ ಅನ್ನುವುದನ್ನು ನಾನು ಒಪ್ಪುವುದಿಲ್ಲ. ಯಾವ ಜಾತಿಯವರು ಮುಂದೆ ಬಂದರೂ ಕೂಡ, ಆ ಜಾತಿಯವರು ಮುಂದೆ ಬರುತ್ತಾರೆ, ಅನ್ನೋದನ್ನು ಒಪ್ಪುವುದಕ್ಕೆ ಸಾಧ್ಯವಿಲ್ಲ. ಉದಾಹರಣೆ ವಿಶ್ವೇಶ್ವರಯ್ಯನವರು ಬ್ರಾಹ್ಮಣರು, ಅವರು ಸಾಮಾನ್ಯ ಬಡ ಕುಟುಂಬದಲ್ಲಿ ಹುಟ್ಟಿದಂಥಾವರು. ಅವರ ಕಾಲದಲ್ಲಿ ನಮ್ಮ ಬಿಜಾಪುರಕ್ಕೆ ಒಂದು ವಾಟರ್ ಸಪ್ಲೈ ಸ್ಕೀಂ ಮಾಡಿದರು. ಇದರಲ್ಲಿ ಜಾತಿ ಪ್ರಶ್ನೆ ಬರುವುದಿಲ್ಲ.

ಎರಡು ಜಾತಿಗಳು ನಮ್ಮಲ್ಲಿ ಇವೆ. ಒಂದು, ದೇಶದಲ್ಲಿ ಅಶಕ್ತರನ್ನು ಕಲ್ಯಾಣ ಮಾಡತಕ್ಕದ್ದು. ಇನ್ನೊಂದು ಅಶಕ್ತರನ್ನು ತುಳಿಯುತಕ್ಕದ್ದು. ಜಗತ್ತಿನಲ್ಲಿ ಇದನ್ನು ಯಾರು ಮಾಡಿದರೂ ಅವರಿಗೆ ಶಾಸನ ಮಾಡ್ರಿ. ಲಿಂಗಾಯಿತರು ಮಾಡಿದ್ದರೆ ಅವರಿಗೂ ಶಾಸನ ಮಾಡ್ರಿ. ಮಾನ್ಯ ರಾಚಯ್ಯನವರು, ಬಸವಲಿಂಗಪ್ಪನವರು ಮುಂದೆ ಬಂದರೆ ಅವರ ಸಮಾಜವೇ ಮುಂದೆ ಬಂದ ಹಾಗಾಗುತ್ತದೆಯೇ? ಇವತ್ತು ಹರಿಜನರು ನಮ್ಮ ಊರಲ್ಲಿ ಬಚ್ಚಲ ಮೋರಿಯ ನೀರನ್ನು ಕುಡಿಯುತ್ತಿದ್ದಾರೆ. ಅವರು ಬಾವಿಯ ನೀರನ್ನು ಕುಡಿಯಲಿಕ್ಕೆ ಇವತ್ತಿನವರೆಗೂ ಶಕ್ಯ ಇಲ್ಲ. ನೀವು ಎಷ್ಟೇ ಜನ ಮಂತ್ರಿಗಳು ಬಂದರೂ ಇವರನ್ನು ಸುಧಾರಿಸಲಿಕ್ಕೆ ಆಗುವುದಿಲ್ಲ. ಆದ್ದರಿಂದ ತಾವು ಸ್ಪಷ್ಟವಾಗಿ ಎಷ್ಟು ಜನ ನಿಜವಾಗಿಯೂ ಹಿಂದುಳಿದಿದ್ದಾರೆ, ಎನ್ನುವುದರ ಬಗ್ಗೆ ಸೆನ್ಸಸ್ ತೆಗೆದುಕೊಂಡು ಅವರಿಗೆ ನ್ಯಾಯವಾಗಿರತಕ್ಕ, ಅವಶ್ಯಕತೆಗಳನ್ನು ಕೊಡುವುದಕ್ಕೆ ಪ್ರಯತ್ನ ಮಾಡಬೇಕು. ಮುಖ್ಯವಾಗಿ ಅವರೆಲ್ಲರಿಗೂ ವಿದ್ಯಾಭ್ಯಾಸವನ್ನು ಕೊಡಬೇಕು. ಮಾನ್ಯ ಹನುಮೇಗೌಡರು ಈ ಠರಾವನ್ನು ತಂದಿರುವುದಕ್ಕೆ ನನ್ನ ಅಡ್ಡಿಯಿಲ್ಲ. ಯಾವ ಜಾತಿಯವರೇ ಇರಲಿ ಈಡಿಗರೇ ಇರಲಿ, ಲಿಂಗಾಯತರೇ ಇರಲಿ, ಅವರಿಗೆ, ಅವರ ಮುಂದಾಳುಗಳಿಂದ ನೇರವಾಗಿ ಅನುಕೂಲ ಆಗಲಿಕ್ಕೆ ಸಾಧ್ಯವಿಲ್ಲ. ನಮ್ಮ ಹೈದರಾಬಾದ್ ನಿಜಾಮರು ಇದ್ದ ಕಾಲದಲ್ಲಿ ಎಷ್ಟೋ ಮಂದಿ ಹಿಂದುಳಿದವರು ಮುಂದುವರಿದಿದ್ದಾರೆ. ಆದ್ದರಿಂದ ಇದು ಜಾತಿಯ ಪ್ರಶ್ನೆಯಾಗಿ ಬರುವುದಿಲ್ಲ. ದೊಡ್ಡ ಮೀನು ಸಣ್ಣ ಮೀನನ್ನು, ನುಂಗುವ ಹಾಗೆ, ಒಂದು ಜಾತಿಯಲ್ಲಿ ದೊಡ್ಡವರು ಸಣ್ಣವರನ್ನು ಉಪಯೋಗಿಸಿಕೊಂಡು ಅಧಿಕಾರ ನಡೆಸುತ್ತಾರೆ. ಇನ್ನು ಮುಂದೆ ನಮ್ಮ ಹೆಂಗಸರು ಮುಂದೆ ಬರತಕ್ಕ ಕಾಲ ಬಂದಿದೆ. ಅವರು ಗಂಡಸರ ವಿರುದ್ಧ ನಿಲ್ಲುವ ಕಾಲ ಬಂದಿದೆ. ಹೆಂಗಸರು ಚುನಾವಣೆಗೆ ನಿಂತರೆ ಗಂಡಸರೊಬ್ಬರೂ ಕ್ಯಾಬಿನೆಟ್‌ನಲ್ಲಿ ಇರಲಿಕ್ಕಾಗುವುದಿಲ್ಲ. ಇಂಗ್ಲೆಂಡಿನಲ್ಲಿ ಮೊದಲು ಹುಟ್ಟಿದ ಮಗು ಹೆಣ್ಣಾಗಲಿ, ಗಂಡಾಗಲೀ, ಅದಕ್ಕೆ ಹೆಚ್ಚಿನ ಪ್ರಾತಿನಿಧ್ಯ ಕೊಡುತ್ತಾರೆ. ಅದೇ ರೀತಿಯಲ್ಲಿ ಅಲ್ಲಿ ಮೊದಲು ಹುಟ್ಟಿದ ರಾಜನ ಮಗಳು ರಾಣಿಯಾಗಿದ್ದಾಳೆ. ಒಟ್ಟಿನಲ್ಲಿ ಈ ದೇಶ ಅಭಿವೃದ್ಧಿಯಾಗಬೇಕು, ನೀವು ಏನು ಕೊಡ್ರಿ ಏನು ಬಿಡ್ರಿ, ಅನಕ್ಷರಸ್ಥರನ್ನು ಅಕ್ಷರಸ್ಥರನ್ನಾಗಿ

ಮಾಡಿದರೆ ಸಾಕು ಅವರ ಕಲ್ಯಾಣವಾಗುತ್ತದೆ. ಮತ್ತು ಸಮಾಜದ ಕಲ್ಯಾಣವೂ ಆಗುತ್ತದೆ. ಏಕದಂ ಇದನ್ನು ಮಾಡಲಿಕ್ಕಾಗುವುದಿಲ್ಲ. ಇದನ್ನು ತಮ್ಮ ದೃಷ್ಟಿಯಲ್ಲಿಟ್ಟುಕೊಂಡು, ಮಾನ್ಯ ಹನುಮೇಗೌಡರು ತಂದಿರತಕ್ಕ ನಿರ್ಣಯದ ಪ್ರಕಾರ, ತಾವು ನಮ್ಮ ಜನಗಳ ಸೆನ್ಸೆಸ್ ಮಾಡಬೇಕು. ಮಾಡಿದ ಮೇಲೆ ನಿಮ್ಮ ಲ್ಯಾಂಡ್ ರಿಫಾರಮ್ಸ್ ಪ್ರಕಾರ ಭೂಮಿ ಇಲ್ಲದವರಿಗೆ ಭೂಮಿ ಕೊಡಿ, ಇಂತಿಷ್ಟು ಜನಕ್ಕೆ ಉದ್ಯೋಗ ಕೊಡ್ರಿ, ಏನಾದರೂ ಕೆಲಸವನ್ನು ಕೊಟ್ಟು ದೇಶದ ಸಂಪತ್ತನ್ನು ಹೆಚ್ಚು ಮಾಡ್ರಿ ಎಂದು ಪ್ರಾರ್ಥನಾ ಮಾಡಿಕೊಳ್ಳುತ್ತೇನೆ. ಇದನ್ನು ತಾವು ಸಾಧನೆ ಮಾಡಬೇಕು. ಇದಕ್ಕೆ ಮುಖ್ಯವಾಗಿ ಮೀಡಿಯಂ ಆಫ್ ಎಜುಕೇಷನ್ ಬೇಕಾಗುತ್ತದೆ. ಒಂದೊಂದು ಜಿಲ್ಲೆಯ ಸೆನ್ಸಸ್ ತೆಗೆದುಕೊಂಡು, ಒಂದೊಂದು ಜಿಲ್ಲೆಯಲ್ಲಿಯೇ ಹಿಂದುಳಿದ ಜನರಿಗೆ ವಿದ್ಯಾಭ್ಯಾಸ ಕೊಟ್ಟು, ಅವರನ್ನು ಮುಂದುವರಿಯುವಂತೆ ಮಾಡಬೇಕು. ಇದನ್ನು ಮಾನ್ಯ ರಾಚಯ್ಯನವರು ಗಮನಿಸಬೇಕು. ಗಾಂಧೀಜಿಯವರು ಅವರಿಗೊಂದು ಹೆಸರನ್ನು ಕೊಟ್ಟರು. ಆದರೆ ಇವತ್ತಿನ ದಿವಸ ಅವರ ಪರಿಸ್ಥಿತಿ ಏನಾಗಿದೆ! ಅವರನ್ನು ಸಮಾಜದಲ್ಲಿ ತುಳಿಯುತ್ತಿದ್ದಾರೆ. ಇದನ್ನು ಮಾನ್ಯ ತಿಮ್ಮಪ್ಪನವರು ವಿಚಾರ ಮಾಡಬೇಕು. ಇವರಿಗೆ ಲಿಂಗಾಯತರು ಅನ್ಯಾಯ ಮಾಡಿದ್ದರೆ, ಅವರಿಗೆ ಶಾಸನ ಮಾಡ್ರಿ. ಯಾರೇ ಅನ್ಯಾಯ ಮಾಡಿದರೂ ಅವರಿಗೆ ಶಾಸನ ಮಾಡ್ರಿ. ಅದಕ್ಕೆ ನನ್ನ ಅಡ್ಡಿ ಇಲ್ಲ. ಇವತ್ತು ಶಿಕ್ಷಕರನ್ನು ನೇಮಿಸಬೇಕಾದರೆ, ಬುದ್ಧಿವಂತರನ್ನೇ ನೇಮಿಸಬೇಕಾಗುತ್ತದೆ ಎಂದು ನನ್ನ ಅಭಿಪ್ರಾಯ. ಇದಕ್ಕೆ ಬ್ರಾಹ್ಮಣರನ್ನೇ ನೇಮಿಸಬೇಕಾಗುತ್ತದೆ. ನನ್ನ ದೃಷ್ಟಿಯಲ್ಲಿ ಬ್ರಾಹ್ಮಣರು ನಮ್ಮ ಸೈಕಾಲಜಿ ಏನು ಇದೆ, ಅದನ್ನು ನಾವು ತಪ್ಪಿಸಬೇಕಾಗಿದೆ. ಆದ್ದರಿಂದ ನಾವು ದೇಶದಲ್ಲಿ ಸಂಸ್ಕೃತಿಯ ಕ್ರಾಂತಿಯನ್ನು ಮಾಡಬೇಕಾದರೆ, ಸಮಾಜದ ಒಂದು ಜಾತಿಯಲ್ಲಿ ಒಬ್ಬರು ಮುಂದೆ ಬಂದರೆ ಅದು ಸಾಧ್ಯವಿಲ್ಲ. ಅಥವಾ ಒಂದು ಜಾತಿಯಲ್ಲಿ ಅನೇಕ ವಿದ್ಯಾವಂತರಾದರೂ ಸಾಧ್ಯವಿಲ್ಲ, ಎಲ್ಲರಿಗೂ ಉತ್ತಮವಾದಂಥ ವಿದ್ಯೆಯನ್ನು ಕೊಟ್ಟರೆ ಮಾತ್ರ ಇದು ಸಾಧ್ಯ. ಬಸಲಿಂಗಪ್ಪನವರು, ದೇವೇಗೌಡರು ಮುಂದುವರಿದ್ದಾರೆಂದರೆ ಆ ಜಾತಿಯ ಎಲ್ಲರೂ ಮುಂದೆ ಬಂದಿದ್ದಾರೆಂದು ಅಲ್ಲ. ಆದ್ದರಿಂದ ನಾನು ಇಷ್ಟು ಹೇಳುತ್ತೇನೆ. ಹರಿಜನರಿಗೆ ಮತ್ತು ಗಿರಿಜನರಿಗೆ, ಅವರನ್ನು ಸಾಮಾಜಿಕವಾಗಿ, ಆರ್ಥಿಕವಾಗಿ ಮುಂದುವರಿಯಲು ಕೇವಲ ಅವರಿಗೆ ರಿಜರ್ವೇಶನ್ ಕೊಟ್ಟರೆ ಸಾಲದು. ಅವರಿಗೆ ಸಾಕಷ್ಟು ಉತ್ತಮವಾದಂಥ ವಿದ್ಯಾಭ್ಯಾಸವನ್ನು ಕೊಟ್ಟು ಅವರನ್ನು ಮುಂದುವರಿಯುವಂತೆ ಮಾಡಬೇಕಾದದ್ದು ಸರ್ಕಾರದ ಕರ್ತವ್ಯ ಎಂದು ನನ್ನ ಅಭಿಪ್ರಾಯ.

ಇವತ್ತು ಎಲ್ಲರಿಗೂ ಉತ್ತಮವಾದ ಶಿಕ್ಷಣ ಸಿಗಬೇಕು. ಆ ರೀತಿ ಸಿಕ್ಕಿದರೆ ಪ್ರತಿಯೊಬ್ಬರೂ ವಿದ್ಯಾವಂತರಾಗುತ್ತಾರೆ. ಸಂಬಳ ಪಡೆಯುವ ಅರ್ಹತೆ ಪಡೆಯುತ್ತಾರೆ. ಕುರುಬ ಜನಾಂಗಕ್ಕೆ ಸೇರಿದ ಶ್ರೀ ಟಿ. ಮರಿಯಪ್ಪನವರು ನಮ್ಮ ರಾಜ್ಯದಲ್ಲಿ ಅರ್ಥಸಚಿವರಾಗಿ ಬಹಳ ಕೆಲಸ ಮಾಡಲಿಲ್ಲವೇ? ಒಕ್ಕಲಿಗ ಜನಾಂಗಕ್ಕೆ ಸೇರಿದ ಶ್ರೀ ಕೆ. ಹನುಮಂತಯ್ಯ ಅವರು ವಿಧಾನಸೌಧದಂತಹ ದೊಡ್ಡ ಕಟ್ಟಡ ಕಟ್ಟಿಸಲಿಲ್ಲವೆ? ಪ್ರತಿಯೊಂದು ಜನಾಂಗದಲ್ಲೂ ಮೇಧಾವಿಗಳಾದವರು ಉನ್ನತ ಪದವಿಗಳನ್ನು ಪಡೆದು ರಾಜ್ಯಕ್ಕೆ ಸಹಾಯ ಮಾಡಿದ್ದಾರೆ. ಟಿಪ್ಪುಸುಲ್ತಾನ್ ಮುಸಲ್ಮಾನ್ ಆಗಿದ್ದರೂ ಅವನಿಂದ ದೇಶದ ಕಲ್ಯಾಣವಾಗಿದೆ. ಅದೇ ರೀತಿ

ವಿಶ್ವೇಶ್ವರಯ್ಯನವರು. ಅವರಿಂದ ದೇಶದ ಅಭಿವೃದ್ಧಿ ಆಗಿದೆ. ಕಾರಿಯಪ್ಪ ಮುಂತಾದವರು ಕೂರ್ಗ್‌ನಿಂದ ಬಂದವರು. ಅವರಿಗೆ ಯುದ್ಧ ಮಾಡುವ ಶಕ್ತಿ ಸಾಮರ್ಥ್ಯ ಇದೆ ಅವರನ್ನು ಸೈನ್ಯದ ಮುಖ್ಯಾಧಿಕಾರಿಗಳನ್ನಾಗಿ ಮಾಡಿದ್ದರು. ನಮ್ಮವರನ್ನು ಸೈನ್ಯದ ಮುಖ್ಯಾಧಿಕಾರಿಗಳನ್ನಾಗಿ ಮಾಡಬೇಕಾಗಿತ್ತು ಎಂದು ಹೇಳುವುದು ಸರಿಯಲ್ಲ. ದೇವರಾಜ ಅರಸ್ ರವರು ಮುಖ್ಯಮಂತ್ರಿಗಳಾಗಿದ್ದಾರೆಂದು ಹೊಟ್ಟೆ ಕಿಚ್ಚುಪಟ್ಟರೆ ಆಗುತ್ತದೆಯೇ? ಅವರಿಗೆ ಜನರನ್ನು ಸಂಘಟಿಸುವ ಶಕ್ತಿ ಇದೆ. ರಾಜಕೀಯ ಮುಂದಾಳುಗಳಾಗಿದ್ದಾರೆ. ಆದುದರಿಂದ ಅವರನ್ನು ಮುಖ್ಯಮಂತ್ರಿಗಳನ್ನಾಗಿ ಮಾಡಿದ್ದಾರೆ. ನಮ್ಮ ವಯಸ್ಸು 62. ನಾನು ಹೋದ ಸಲ ನಮ್ಮ ಕ್ಷೇತ್ರದಿಂದ ಅಸೆಂಬ್ಲಿಗೆ ನಿಂತಾಗ ಅಲ್ಲಿಂದ ಸಣ್ಣ ವಯಸ್ಸಿನವರು ಆರಿಸಿ ಬರಲು ಅವಕಾಶ ಕೊಡಬೇಕೆಂದು ಲಿಂಗಾಯ್ತರು ನಮ್ಮ ಪಕ್ಷದ ಮುಖಂಡರಿಗೆ ಡೆಪ್ಯೂಟೇಷನ್ ಹೋದರು. ಆದ್ದರಿಂದ ಎಸ್.ವೈ. ಪಾಟೀಲರವರೇ ಇರಲೆಂದು ಪಕ್ಷದ ಮುಖಂಡರು ಹೇಳಿದರು. ನಾನು 62 ನೇ ವಯಸ್ಸಿನಲ್ಲಿ ಬಿ.ಎ. ಪರೀಕ್ಷೆ ಪಾಸ್ ಮಾಡಿದ್ದೇನೆ. ನಾನಾದರೂ ಹೇಳುತ್ತೇನೆ. ಎಲ್ಲರಿಗೂ ಸರಿಯಾದ ಶಿಕ್ಷಣ ಕೊಡಬೇಕು. ಆಗ ಯಾವ ಜಾತಿಯೇ ಇರಲಿ ಅವರಲ್ಲಿ ಎಮಿನೆಂಟ್ ಡಾಕ್ಟರ್ಸ್, ಎಮಿನೆಂಟ್ ಲೀಡರ್ಸ್, ಎಮಿನೆಂಟ್ ಇಂಜಿನಿಯರ್ಸ್ ಆಗುತ್ತಾರೆ. ಶ್ರೀಮಾನ್ ಶ್ರೀ ಕೆ.ವಿ. ಪುಟ್ಟಪ್ಪನವರು ಶಿವಮೊಗ್ಗ ಜಿಲ್ಲೆಯಲ್ಲಿ ಹುಟ್ಟಿ ರಾಷ್ಟ್ರಕವಿಗಳಾದರು. ಹಾಗೆಯೇ ದ.ರಾ. ಬೇಂದ್ರೆಯವರು ಧಾರವಾಡದವರು. ಆದುದರಿಂದ ಈ ರೂಪ ಸೌಂದರ್ಯ, ಅಥವಾ ಶಕ್ತಿ ಸಾಮರ್ಥ್ಯಗಳು ಒಂದು ಭಾಗಕ್ಕೇ ಸೀಮಿತವಾಗಿರುವುದಿಲ್ಲ. ಅಥವಾ ಒಂದು ಜಾತಿಗೇ ಸೀಮಿತವಾಗಿರುವುದಿಲ್ಲ. ವೀರೇಂದ್ರ ಪಾಟೀಲರು ಮುಖ್ಯಮಂತ್ರಿಗಳಾಗಿದ್ದಾಗ ಅವರು ಲಿಂಗಾಯತ ಜನಾಂಗಕ್ಕೆ ಅನುಕೂಲ ಮಾಡಿದ್ದಕ್ಕಿಂತ, ಹೆಚ್ಚಿಗೆ ದೇವರಾಜ ಅರಸ್‌ರವರು ಅನುಕೂಲ ಮಾಡಿದ್ದಾರೆಂದು ಹೇಳಿದರೆ ತಪ್ಪಾಗಲಾರದು. ಆದುದರಿಂದ ಮಾನ್ಯ ಹನುಮೇಗೌಡರು ನಿರ್ಣಯದಲ್ಲಿ ಹೇಳಿದಂತೆ ಫ್ಯಾಕ್ಟ್ಸ್ ಅಂಡ್ ಫಿಗರ್ಸ್ ಸಂಗ್ರಹ ಮಾಡಿ ಯಾರಿಗೆ ಹೆಚ್ಚು ಅನುಕೂಲವಾಗಿದೆಯೋ ಅವರನ್ನು ಬಿಟ್ಟು, ಯಾರಿಗೆ ಕಡಿಮೆ ಅನುಕೂಲವಾಗಿದೆಯೋ ಅಂಥವರಿಗೆ ಹೆಚ್ಚಿಗೆ ಅನುಕೂಲ ಮಾಡಿಕೊಡಬೇಕೆಂದು ಹೇಳಿ ಈ ಠರಾವನ್ನು ಅನುಮೋದಿಸಿ ನನ್ನ ಮಾತನ್ನು ಮುಗಿಸುತ್ತೇನೆ.

## ಶಿಕ್ಷಣ ಇಲಾಖೆ

12ನೇ ಏಪ್ರಿಲ್ 1974

**ಶ್ರೀ ಎಸ್.ವೈ. ಪಾಟೀಲ** – ಮಾನ್ಯ ಸಭಾಪತಿಗಳೇ, ಕೇವಲ ಹತ್ತು ನಿಮಿಷಗಳಲ್ಲಿ ಈ ರಾಜ್ಯದ ಮಹತ್ವದ ಬೇಡಿಕೆಯ ಮೇಲೆ ಅಭಿಪ್ರಾಯ ವ್ಯಕ್ತ ಮಾಡುವುದು ಕಠಿಣವಾದರೂ ಅಷ್ಟೇ ಸಮಯದಲ್ಲಿ ಮುಗಿಸಲಿಕ್ಕೆ ಪ್ರಯತ್ನ ಮಾಡುತ್ತಿದ್ದೇನೆ. ಮುಖ್ಯವಾಗಿ ಪ್ರೀ ಪ್ರೈಮರಿ ಎಜುಕೇಷನ್ ಮತ್ತು ಶಿಕ್ಷಣದ ವಿವಿಧ ಭಾಗಗಳ ಬಗ್ಗೆ ಮಾತನಾಡುತ್ತೇನೆ. ಅನೇಕ ಸದಸ್ಯರು ಯೂನಿವರ್ಸಿಟಿ, ಹೈಸ್ಕೂಲು ಮೇಲೆ ಮಾತನಾಡಿದ್ದಾರೆ. ನಾನು ಹಳ್ಳಿಗಾಡಿನಿಂದ ಬಂದಂಥ ಮನುಷ್ಯ. ಶಿಕ್ಷಣಕ್ಕಾಗಿ ಸುಮಾರು 81 ಕೋಟಿ ರೂಪಾಯಿ ಹಣವನ್ನು ಖರ್ಚು ಮಾಡುತ್ತಿದ್ದಾರೆ. ಇವರಲ್ಲಿ ಹಳ್ಳಿಗರ

ಉದ್ಧಾರಕ್ಕೆ ಎಷ್ಟು ಸಹಾಯವಾಗುತ್ತದೆಂದು ವಿಚಾರ ಮಾಡಿದರೆ ಶಿಕ್ಷಕರಿಗೆ, ಸರ್ಕಾರಿ ನೌಕರರಿಗೆ ಪಗಾರ ಕೊಡುವ ಮಟ್ಟಿಗೆ ಸಹಾಯವಾಗಬಹುದೇ ಹೊರತು, ಯಾವನು ಹಳ್ಳಿಯವನ್ನಿದ್ದಾನೆ, ಅವನಿಗೆ ಹೆಚ್ಚು ಸಹಾಯವಾಗುವುದಿಲ್ಲ. ಮಾನ್ಯ ಕಾಗೋಡು ತಿಮ್ಮಪ್ಪನವರು ಹೇಳಿದ ಹಾಗೆ 90 ಪರ್ಸೆಂಟ್ ಹಳ್ಳಿಗರಿಗಿರುವ ಈ ರಾಜ್ಯದಲ್ಲಿ ಎಷ್ಟು ಕೋಟಿ ರೂಪಾಯಿಗಳನ್ನು ಅವರಿಗೆ ವಿದ್ಯಾಭ್ಯಾಸ ಕೊಡುವುದಕ್ಕೆ ಖರ್ಚು ಮಾಡಿದರೂ ಸಾಲದು. ಕನಿಷ್ಟ ಪಕ್ಷ ಎರಡು ಮೂರು ಕೋಟಿ ರೂಪಾಯಿಗಳನ್ನಾದರೂ ಖರ್ಚು ಮಾಡಿ ಹಳ್ಳಿಗಳಲ್ಲಿ ಬಾಲವಾಡಿಗಳನ್ನು ತೆರೆಯುವ ವ್ಯವಸ್ಥೆ ಮಾಡಬೇಕು. ಹಳ್ಳಿಯಲ್ಲಿರುವ ಕುಟುಂಬಗಳಲ್ಲಿ ಹತ್ತಿಪ್ಪತ್ತು ಕುಟುಂಬಗಳು ಉತ್ತಮ ಸ್ಥಿತಿಯಲ್ಲಿರಬಹುದು. ಹರಿಜನ ಗಿರಿಜನರು ಮತ್ತು ಬಡವರು ಒಂದೇ ಸ್ಥಿತಿಯಲ್ಲಿದ್ದು, ಯಾರಿಗೂ ಭೂಮಿ ಇಲ್ಲ. ಉದ್ಯೋಗ ವ್ಯವಸ್ಥೆ ಇಲ್ಲ. ಹರಿಜನ ಗಿರಿಜನರಿಗೂ ಇತರರಿಗೂ ಭೇದ ಮಾಡಲಾರದೆ ಪ್ರತಿಯೊಬ್ಬರಿಗೂ ಬಾಲವಾಡಿ ವ್ಯವಸ್ಥೆಯನ್ನು ಮಾಡಲೇಬೇಕು. ಬಾಲಕರಿಗೆ ಶಾಲೆಗೆ ಕಳುಹಿಸುವುದಕ್ಕೆ ಸಾಧ್ಯವಿಲ್ಲ. ಅದಕ್ಕಾಗಿ ಒಂದು ಕಾಯಿದೆಯನ್ನು ಮಾಡಿ ಮಕ್ಕಳನ್ನು ಶಾಲೆಗೆ ಕಳುಹಿಸಬೇಕು. ಇಲ್ಲದೆ ಹೋದರೆ ಗುನ್ಹೆಯಾಗುತ್ತದೆ, ಎಂದು ತಿಳಿಯಪಡಿಸಬೇಕು. ರಾಜ್ಯದಲ್ಲಿ ಕಳ್ಳರಿದ್ದರೂ ಚಿಂತೆ ಇಲ್ಲ. ಸುಳ್ಳರಿದ್ದರೂ ಚಿಂತೆ ಇಲ್ಲ ಆದರೆ ಮಳ್ಳರು ಮಾತ್ರ ಉಳಿಯಬಾರದು ದೇಶಕ್ಕೆ ಬರುವಂಥ ತೊಂದರೆ ಕಳ್ಳರಿಂದಲ್ಲ ಕಳ್ಳರು ವಕೀಲರ ಸಹಾಯದಿಂದ ಉಳಿಯುತ್ತಾನೆ ಅಥವಾ ಜೈಲಿಗೆ ಹೋಗುತ್ತಾನೆ. ಸುಳ್ಳನು ಏನಾದರೂ ಯೋಚನೆಮಾಡಿ ಒಂದು ರೀತಿಯಲ್ಲಿ ಜೀವನ ಸಾಗಿಸುತ್ತಾನೆ. ಮಳ್ಳರು ಎಂದರೆ ಅಜ್ಞಾನಿಗಳ ಸಲುವಾಗಿ ಬಾಲವಾಡಿಗಳನ್ನು ಮಾಡಲೇಬೇಕು. ಎಲ್ಲ ಮಕ್ಕಳನ್ನೂ ಬಾಲವಾಡಿಗೆ ಕಡ್ಡಾಯವಾಗಿ ಕಳುಹಿಸಲೇಬೇಕು ಎನ್ನುವ ನಿರ್ಬಂಧವನ್ನು ಹಾಕಬೇಕು. ವಿದ್ಯಾ ಇಲಾಖೆಯಲ್ಲಿ ಏನಾದರೂ ಅನ್ಯಾಯವಾದರೆ ಅದಕ್ಕೆ ನಾವು ಮಂತ್ರಿಗಳನ್ನು ಹೇಗೆ ಜವಾಬ್ದಾರಿ ಹಿಡಿಯುತ್ತೇವೆಯೋ ಅದೇ ಪ್ರಕಾರವಾಗಿ ಪಂಚಾಯಿತಿ ಸದಸ್ಯರು ಪ್ರಮುಖರು ಯಾರಿದ್ದಾರೆ ಅವರನ್ನು ಆ ಊರಿನಲ್ಲಿರುವ ಮಕ್ಕಳನ್ನು ಶಾಲೆಗೆ ಮತ್ತು ಬಾಲವಾಡಿಗೆ ಕಳುಹಿಸದೆ ಇದ್ದರೆ ಜವಾಬ್ದಾರರನ್ನಾಗಿ ಮಾಡಿ ಗುನ್ಹೆ ಹಾಕಬೇಕು. ಇಂಥ ತಪ್ಪಿಗೆ ಇಡೀ ಊರೇ ಜವಾಬ್ದಾರಿ ಎಂದು ತಿಳಿದುಕೊಂಡು ಅವರ ಮೇಲೆ ಕೇಸನ್ನು ಹಾಕಲಿಕ್ಕೆ ಅವಕಾಶ ಮಾಡಬೇಕು. ಯಾವ ಪಕ್ಷದವರೆ ಮಾತನಾಡಲಿ ಮಹಾತ್ಮಗಾಂಧೀಜಿಯವರ ಹೆಸರು ಹೇಳದಿದ್ದರೂ ಪರ್ಯಾಯವಾಗಿ ಹೇಳಿಕೊಂಡೇ ಬರುತ್ತಾರೆ. ನಮ್ಮ ಮಾನ್ಯ ವಿದ್ಯಾಮಂತ್ರಿಗಳು ಶಿಕ್ಷಣ ತಜ್ಞರು ಮತ್ತು ರಾಜಕಾರಣಿಗಳು ಯಾವ ಯಾವ ಪ್ರಾಂತದಲ್ಲಿ ನರ್ಸರಿ ಶಿಕ್ಷಣದ ವ್ಯವಸ್ಥೆಯಲ್ಲಿ ಏನು ಸೂಚನೆ ಮಾಡಿದ್ದಾರೆ, ಶಿಕ್ಷಣದ ವ್ಯವಸ್ಥೆಯಲ್ಲಿ ಏನೇನು ಸೂಚನೆ ಮಾಡಿದ್ದಾರೆ ಮತ್ತು ತಮ್ಮ ಜವಾಬ್ದಾರಿಯನ್ನು ನೀಗಿಸಿಕೊಂಡು ಸ್ವಾವಲಂಬನೆಯ ದೃಷ್ಟಿಯಿಂದ ತಮ್ಮ ಉಪಜೀವನವನ್ನು ಹೇಗೆ ಸಾಗಿಸುತ್ತಾರೆ ಎನ್ನುವ ವಿಚಾರಗಳನ್ನು ಗಮನಕ್ಕೆ ತೆಗೆದುಕೊಂಡು ನಮ್ಮ ರಾಜ್ಯದಲ್ಲಿಯೂ ಅದರಂತೆ ವ್ಯವಸ್ಥೆ ಮಾಡಬೇಕು. ಕಲಿತವರ ಮೇಲೆ ಶೋಷಣೆ ಮಾಡುವುದಕ್ಕೆ ಸಾಧ್ಯವಿಲ್ಲ. ಅವರು ಏನಾದರೂ ಕ್ರಾಂತಿ ಮಾಡುತ್ತಾರೆ. ಶಿಕ್ಷಣ ಸಿಗಲಿ, ಚಲೋ ಶಿಕ್ಷಣ ಸಿಗಲಿ ಎನ್ನುವುದು ಎರಡನೆ ವಿಚಾರ. ಅದರ ಸಲುವಾಗಿ ಬಾಲವಾಡಿಗಳನ್ನು ಹಳ್ಳಿಗಳಲ್ಲಿ ಪ್ರಾರಂಭ ಮಾಡಬೇಕು.

ಇಂದು ಹಳ್ಳಿಗಳಲ್ಲಿ ಬರುವ ಲ್ಯಾಂಡ್ ರೆವೆನ್ಯೂ ಉತ್ಪನ್ನ ಇಲ್ಲಿರುವ ಪ್ರೈಮರಿ ಶಾಲೆಗಳಿಗೆ ಕೊಡಲು ಸಾಕಾಗುವುದಿಲ್ಲ. ಇದರಲ್ಲಿ ಪ್ರೈಮರಿ ಹಾಗೂ ಮಾಧ್ಯಮಿಕ ಶಾಲೆಗಳೂ ಬರುತ್ತವೆ. ಇದಲ್ಲದೆ ಇಂದು ಮಧ್ಯಮ ಶಾಲೆಗಳಲ್ಲಿ ಹಾಗೂ ಪ್ರೈಮರಿ ಶಾಲೆಗಳಲ್ಲಿ ಬರುತ್ತಿರುವ ಶಿಕ್ಷಕರಿಗೆ ಸರಿಯಾದ ತರಬೇತಿಯೇ ಇರುವುದಿಲ್ಲ. ಇದರಿಂದಾಗಿ ಮಕ್ಕಳಿಗೆ ವಿದ್ಯಾಭ್ಯಾಸವನ್ನು ಚೆನ್ನಾಗಿ ಕೊಡುವುದಾದರೂ ಹೇಗೆ? ಮುಖ್ಯವಾಗಿ ಶಿಕ್ಷಕರುಗಳಿಗೆ ಗ್ರಾಮರ್ ಎಂದರೆ ವ್ಯಾಕರಣದ ಜ್ಞಾನ ಚೆನ್ನಾಗಿರಬೇಕು. ಇಂದಿನ ಶಿಕ್ಷಣದಲ್ಲಿ ಇದು ಕಾಣುವುದೇ ಇಲ್ಲ. ಯಾವನಾದರೂ ಒಬ್ಬರು ಶಿಕ್ಷಕರನ್ನು ವ್ಯಾಕರಣದ ಬಗ್ಗೆ ಉದಾಹರಣೆಯಾಗಿ ಪ್ರಥಮ ಪುರುಷಕ್ಕೆ ಸರ್ವನಾಮ ಪದದ ಒಂದು ಧಾತು ಸೇರಿದರೆ ಕ್ರಿಯಾಪದವಾಗುತ್ತದೆ ಎಂದು ಒಂದು ಸೂತ್ರ ವ್ಯಾಕರಣದಲ್ಲಿದೆ. ಇದರ ಬಗ್ಗೆ ಯಾವ ಶಿಕ್ಷಕರನ್ನಾದರೂ ಕೇಳಿದರೆ ಅವರಿಗೇನೂ ಗೊತ್ತಿಲ್ಲ ಎನ್ನುತ್ತಾರೆ. ಇಂದು ದೇಶದಲ್ಲಿ ಉತ್ತಮ ರಾಜ್ಯದ ಆಡಳಿತ ಮಾಡಬೇಕೆಂದು ಅವರ ಮೇಲೆ ಇಲ್ಲದ ಕರಭಾರವನ್ನು ಹೇರಿ ಅಂತಹವರಿಂದ ಯದ್ವಾ ತದ್ವಾ ವೋಟುಗಳನ್ನು ಯದ್ವಾ ತದ್ವ ಸರಕಾರವನ್ನು ಮಾಡುವಂತಹ ಸರಕಾರವಾಗಿದೆ. ಈಗ ಇಂತಹ ವೇಳೆಯಲ್ಲಿ ಚುನಾವಣೆ ಮಾಡಿದರೆ ಇದಕ್ಕೇನು ಮಹತ್ವ ಸಿಗುತ್ತದೆ. ಇಂದು ನಮ್ಮ ಪೋಲೀಸು ಡಿಪಾರ್ಟುಮೆಂಟು ಸರಿಯಾಗಿ ಕೆಲಸ ಮಾಡುತ್ತಿಲ್ಲ ನಿಮ್ಮಲ್ಲಿರುವ ಪೋಲೀಸು ಅಧಿಕಾರಿಗಳಲ್ಲಿ ಕ್ರಿಮಿನಲ್ ಮೆಂಟಾಲಿಟಿ ಏಕೆ ಹೆಚ್ಚಾಗುತ್ತಿದೆ ಎನ್ನುವುದನ್ನು ಯಾರಾದರೂ ಪರಿಶೀಲಿಸಿದ್ದಾರೆಯೇ ಇತ್ತೀಚೆಗೆ ರತ್ನಗಿರಿ ಹಾಗೂ ಕಾರವಾರ ಸ್ಥಳಲ್ಲಿರುವ ಪೋಲೀಸರಿಂದ ಇಂತಹ ನಿದರ್ಶನಗಳು ನಡೆದಿರುವುದನ್ನು ನಾವು ನೋಡಿದ್ದೇವೆ. ಇದಕ್ಕಾಗಿ ಎಲ್ಲರಿಗೂ ಸರಿಯಾದ ವಿದ್ಯೆ ಕೊಡುವಂತಹ ಶಿಕ್ಷಕರು ನಮಗೆ ಇಂದು ಅವಶ್ಯವಾಗಿದೆ. ಇದಕ್ಕಾಗಿ ನಾನು ಹೇಳುವುದು ಇಂದು ಪಾಶ್ಚಿಮಾತ್ಯ ದೇಶಗಳಲ್ಲಿರುವಂತೆ ನಮ್ಮಲ್ಲೂ ಕೂಡ ಶಿಕ್ಷಣ ಕ್ಷೇತ್ರದಲ್ಲಿ ಆಮೂಲಾಗ್ರವಾಗಿ ಬದಲಾವಣೆ ಮಾಡಬೇಕು. ಕರ್ನಾಟಕ ದೇಶದಲ್ಲಿ ಸಮಾಜ ಯಾವ ರೀತಿ ಇದೆ ಎಂದರೆ, ಯಾರು ಸರಕಾರದ ನೌಕರುಗಳು ಇರುತ್ತಾರೋ ಇವರಿಗೆ ಯಾವ ಸಮಸ್ಯೆಗಳೂ ಇಲ್ಲ ಎಂದು ಒಂದು ರೀತಿಯಾದ ಮನೋಭಾವನೆ ಕಂಡು ಬರುತ್ತಿದೆ. ಇಂದು ಹಳ್ಳಿಗಾಡಿನ ಜನರ ಕಷ್ಟ ಸುಖಗಳೇನು ಎಂದು ಇಲ್ಲಿ ನಾವು ಅಸ್ಸೆಂಬಿಯಲ್ಲಿ ಹೇಳಬಹುದು. ಆದರೆ ಶಿಕ್ಷಕರಾಗಿ ಬರುವವರು ಸರಕಾರದಿಂದ ಪಗಾರ ಪಡೆಯುತ್ತಾರೆ ಮತ್ತು ಏನೋ ಒಂದು ರೀತಿಯಾದ ಶಿಕ್ಷಣ ಕೊಡಬೇಕೆಂದು ಕೊಡುತ್ತಾರೆ. ಇಂತಹ ಒಂದು ಮನೋಭಾವ ಶಿಕ್ಷಕರಲ್ಲಿರಬಾರದು. ಶಿಕ್ಷಕರಾದವರು ಶಿಕ್ಷಣದ ಮಹಿಮಾ ಏನು ಎಂದು ಅರಿತುಕೊಂಡು ಮಕ್ಕಳಿಗೆ ಸರಿಯಾದ ರೀತಿಯಲ್ಲಿ ಶಿಕ್ಷಣ ಕೊಡುವ ವ್ಯವಸ್ಥೆ ಮಾಡಬೇಕು. ಇದಕ್ಕಾಗಿ ನಾನು ಸಲಹೆ ಮಾಡುವುದು. ಇಂದು ಬಿ.ಎ. ಮಾಡಿರುವ ಗ್ರ್ಯಾಜುಯೇಟರುಗಳು ಕೆಲಸವಿಲ್ಲದೆ ಇದ್ದಾರೆ. ಇಂತಹವರಿಗೆ ಬಿಎಡ್ ಹಾಗೂ ಬಿ.ಟಿ. ಕೋರ್ಸುಗಳಲ್ಲಿ ತರಬೇತಿ ಕೊಡಿಸಿ ಇಂತಹವರನ್ನು ಮೊದಲಿಗೇ ಪ್ರೈಮರಿ ಶಾಲೆಗಳಿಗೆ ನೇಮಿಸಿದರೆ ಇವರಿಂದ ಮಕ್ಕಳಿಗೆ ಒಳ್ಳೆಯ ವಿದ್ಯೆ ಪಡೆಯಲು ಅವಕಾಶ ಸಿಗುತ್ತದೆ. ಪ್ರೈಮರಿ ಶಾಲೆಗಳಲ್ಲಿ ನಾನೂರು ಪಗಾರ ಕೊಡಲು ಸಾಧ್ಯವಾಗದಿರಬಹುದು. ಆಯಾ ಸ್ಥಳದಲ್ಲಿರುವ ಇಂತಹವರಿಗೆ ಅಲ್ಲಿನ ಪ್ರೈಮರಿ ಶಾಲೆಗಳಲ್ಲಿ ನೇಮಕ ಮಾಡಿ ನೂರು ರೂಪಾಯಿಗಳ ಪಗಾರ

ಕೊಟ್ಟರೆ ಇದರಿಂದ ಎಷ್ಟೋ ಅನುಕೂಲಗಳಾಗುತ್ತವೆ. ಇನ್ನು ಕೋ–ಎಜುಕೇಷನ್ ಬಗ್ಗೆ ಒಂದೇ ಒಂದು ಮಾತು ಇಲ್ಲಿ ಹೇಳಬೇಕಾಗಿದೆ. ಕಾಲೇಜುಗಳಲ್ಲಿ ಹೆಣ್ಣು ಮಕ್ಕಳೊಡನೆ ಗಂಡು ಮಕ್ಕಳಿಗೂ ಸೇರಿದಂತೆ ಶಿಕ್ಷಣ ಕೊಡುವುದು ಒಳ್ಳೆಯದಲ್ಲ ಎನ್ನುವುದು ನನ್ನ ಪ್ರಾಮಾಣಿಕವಾದ ಅಭಿಪ್ರಾಯ. ಇಂದು ಇಂಗ್ಲೆಂಡಿನಲ್ಲಿ ಇಂತಹ ಪದ್ಧತಿ ಇರಬಹುದು. ಅದನ್ನು ನಾವೇಕೆ ಇಲ್ಲಿ ಅನುಕರಣೆ ಮಾಡಬೇಕು? ನಮ್ಮ ದೇಶದಲ್ಲಿ ಕೋ ಎಜುಕೇಷನ್ ಇರಬಾರದು. ನಾನು ಈ ಅಸೆಂಬ್ಲಿಗೆ ಬಂದಾಗ ಕಾಲೇಜು ವಿದ್ಯಾರ್ಥಿಯಾಗಿದ್ದೆ. ಆದುದರಿಂದ ಕಾಲೇಜುಗಳಲ್ಲಿರುವ ಹುಡುಗರು ಏನು ಮಾಡುತ್ತಾರೆ ಎನ್ನುವುದನ್ನು ನಾನು ಅರಿತುಕೊಂಡೇ ಇದನ್ನು ಹೇಳುತ್ತಿರುವುದು. ಅಶ್ಲೀಲವಾದ ವಾತಾವರಣ ಇಲ್ಲಿದೆ ಎನ್ನುವುದು ನಮಗೆ ಗೊತ್ತಾಗುತ್ತದೆ. ಇದಕ್ಕಾಗಿ ನಾನು ನನ್ನ ಮಗಳನ್ನು ಎಂ.ಬಿ.ಬಿ.ಎಸ್. ವರ್ಗಕ್ಕೆ ಸೇರಿಸಬೇಕೋ ಬೇಡವೋ ಎಂದು ಅನುಮಾನಿಸುತ್ತಿದ್ದೆ.

ಶಿಕ್ಷಣ ಸಂಸ್ಥೆಗಳಲ್ಲಿ ವಿದ್ಯಾಭ್ಯಾಸದ ಪದ್ಧತಿಯನ್ನು ಬದಲಾವಣೆ ಮಾಡುವುದು ಬಹು ಮುಖ್ಯ. ಹಳ್ಳಿಗಾಡಿನ ಜನಕ್ಕೆ ಅನುಕೂಲವಾಗುವಂತೆ ವಿದ್ಯಾ ಇಲಾಖೆಯಲ್ಲಿ ಖರ್ಚು ಮಾಡಬೇಕು. ಇಲ್ಲಿರುವ ಅನಕ್ಷರಸ್ಥರನ್ನೆಲ್ಲಾ ಅಕ್ಷರಸ್ಥರಾಗಿ ಮಾಡುವಾಗ ಇದಕ್ಕೆ ಸ್ವಲ್ಪ ಹೆಚ್ಚು ಖರ್ಚಾದರೂ ಚಿಂತೆ ಇಲ್ಲ. ಇಂದು ಚುನಾವಣೆಗಳಿಗಾಗಿ ಬೇಕಾದ ಹಾಗೆ ಖರ್ಚು ಮಾಡುತ್ತಿದ್ದಾರೆ. ಲ್ಯಾಂಡ್ ರೆವಿನ್ಯೂ ಕೊಡುವ ರೈತ ಕೂಡ ಸರಕಾರಕ್ಕೆ ಇಂತಿಷ್ಟು ಹಣ ಎಂದು ಕೊಡುವಾಗ ಅವರು ಸರಕಾರದಿಂದ ಸಾಕಷ್ಟು ಸಹಾಯವನ್ನು ಕೇಳುವುದು ಸಹಜವಾಗಿಯೇ ಇರುತ್ತದೆ. ರೈತರಿಗೆ ಅನ್ಯಾಯಗಳಾಗದಂತೆ ಕೆಲಸಗಳನ್ನು ಮಾಡುವುದು ಅವಶ್ಯವಾಗಿದೆ. ಈ ದಿಶೆಯಲ್ಲಿ ಮಹಾರಾಷ್ಟ್ರದಲ್ಲಿ ಸರ್ವೆ ನಡೆಸಿದರು. ಪ್ರತಿಯೊಂದು ಹಳ್ಳಿಯಲ್ಲೂ ಎಷ್ಟು ಹೆಣ್ಣು ಮಕ್ಕಳು ವಿದ್ಯಾವಂತರಾಗಿದ್ದಾರೆ ಮತ್ತು ಎಷ್ಟು ಜನಕ್ಕೆ ವಿದ್ಯೆ ಸಿಗುತ್ತಿಲ್ಲ ಮತ್ತು ಪ್ರತಿಯೊಂದು ಹಳ್ಳಿಯಲ್ಲೂ ಎಷ್ಟು ಜನರಿಗೆ ಉದ್ಯೋಗಗಳನ್ನು ಮಾಡಲಿಕ್ಕೆ ಅವಕಾಶ ಇದೆ ಮತ್ತು ಪ್ರತಿಯೊಂದು ಹಳ್ಳಿಯಲ್ಲೂ ಎಷ್ಟು ಶಾಲೆಗಳಿಗೆ ಇವುಗಳ ಬಗ್ಗೆ ವಿವರಗಳಿರುವುದು ಅದಕ್ಕೆ ತಕ್ಕಂತ ಖರ್ಚನ್ನೂ ಅಳವಡಿಸಬೇಕೆಂದು ಒಂದು ಯೋಜನಾ ಮಾಡಿದ್ದರೆ ಎಂದು ಕೇಳಿದ್ದೇನೆ. ಇದರಂತೆ ನಮ್ಮ ರಾಜ್ಯದಲ್ಲೂ ಕೂಡ ಜವಾಬ್ದಾರಿಯುಳ್ಳ ನಿಮ್ಮ ಪಾರ್ಟಿಯವರು ಆಡಳಿತದಲ್ಲಿ ಇರುವಾಗ ಇಂತಹ ಒಂದು ಸರ್ವೆ ಮಾಡಿ ಎಲ್ಲರಿಗೂ ವಿದ್ಯಾಭ್ಯಾಸ ಕೊಡುವುದು ಸರಕಾರದ ನೈತಿಕ ಜವಾಬ್ದಾರಿ. ಇದರ ಮೇಲೆ ಟ್ಯಾಕ್ಸು ಹಾಕಿ ಎಂದು ಹೇಳಬಹುದು. ಆದರೆ ಇಂದು ಸೇಂದಿ ಅಂಗಡಿಗಳನ್ನು ತೆಗೆಯಲು ಅವಕಾಶ ಕೊಟ್ಟಿರುವುದರಿಂದ ಸರಕಾರಕ್ಕೆ ಹೆಚ್ಚು ಹಣ ಬರುತ್ತಿದೆ. ಇದರಿಂದ ಸ್ವಲ್ಪ ಹಣವನ್ನು ವಿದ್ಯಾ ಖಾತೆಗೆ ತೆಗೆದುಕೊಡಬಹುದು. ಇಂದು ಸೇಂದಿ ಅಂಗಡಿಗಳನ್ನು ತೆರೆಯಲು ಅವಕಾಶ ಕೊಟ್ಟಿರುವುದರಿಂದ ಏನಾಗಿದೆ ಎಂದರೆ ಇಲ್ಲಿ ಜನ ಏನು ತಪ್ಪು ಮಾಡಿದರೂ ಅವರಿಗೆ ಶಿಕ್ಷೆಯೇ ಆಗುವುದಿಲ್ಲ. ಮರ್ಡರುಗಳಾದರೂ ಫಾಸಿ ಶಿಕ್ಷೆ ಆಗುವುದಿಲ್ಲ. ಆದ್ದರಿಂದ ಸೇಂದಿ ಅಂಗಡಿಗಳನ್ನು ತೆರೆಯಲು ಅವಕಾಶ ಕೊಟ್ಟಿರುವುದು ತಪ್ಪು.

ಮುಂದೆ ಸರಕಾರಿ ಹೈಸ್ಕೂಲುಗಳನ್ನು ಹೊಸದಾಗಿ ಪ್ರಾರಂಭ ಮಾಡುವಾಗ ನಮ್ಮ ಭಾಗಗಳನ್ನೂ ಸಹ ಗಮನದಲ್ಲಿಟ್ಟುಕೊಂಡು ಅಲ್ಲಿ ಶಾಲೆಗಳಾಗಲು ಅವಕಾಶ ಮಾಡಿಕೊಡಿ ಎಂದು

ಕೇಳುತ್ತೇನೆ. ಇದುವರೆಗೆ ನಮ್ಮಲ್ಲಿದ್ದ ಖಾಸಗಿ ಶಾಲೆಗಳಿದ್ದವು. ಈಗ ಎಲ್ಲವನ್ನೂ ಸರಕಾರವೇ ತೆಗೆದುಕೊಳ್ಳುತ್ತದೆ ಎಂದು ಕೇಳಿದ್ದೇವೆ. ಉತ್ತರ ಕರ್ನಾಟಕದ ಜಿಲ್ಲೆಗಳಲ್ಲಿ ಹೈಸ್ಕೂಲಗಳು ಹೆಚ್ಚು ಇಲ್ಲ. ಇದರ ಕಡೆಗೆ ಲಕ್ಷ್ಯ ಕೊಡಬೇಕು ಮತ್ತು ಇಂದು ಇರುವ ಶಿಕ್ಷಣ ಪದ್ಧತಿಯನ್ನು ಪೂರ್ಣವಾಗಿ ಬದಲಾವಣೆ ಮಾಡುವುದು ಅವಶ್ಯ ಇದೆ. ಇದರ ಬಗ್ಗೆ ಸರಕಾರ ಲಕ್ಷ್ಯ ಕೊಡಬೇಕೆಂದು ಹೇಳಿ ನನ್ನ ಈ ಎರಡು ಮಾತುಗಳನ್ನು ಮುಗಿಸುತ್ತೇನೆ.

## ವಿಜಾಪೂರ ಜಿಲ್ಲೆಯ ಮಂತ್ರಿಗಳು ಮಾಡಿದ್ದೇನು?

3ನೇ ಮೇ 1974

ಮಾನ್ಯ ಸಭಾಪತಿಗಳೇ, ಮಾನ್ಯ ಕೈಗಾರಿಕಾ ಮಂತ್ರಿಗಳು ನಮಗೆ ಸಂಭಂದಿಕರಿರಬಹುದು, ಹಾಗೂ ನಮ್ಮ ಜಿಲ್ಲೆಯವರೇ ಆಗಿರತಕ್ಕ ಇಬ್ಬರು ಸ್ಟೇಟ್ ಮಿನಿಸ್ಟರ್‌ರವರೂ ಇದ್ದಾರೆ. ಅವರು ಯಾರೆಂದರೆ ಮಾನ್ಯ ನಾಗರಾಳ್‌ರವರು ಮತ್ತು ಕೆ.ಟಿ. ರಾಥೋಡ್‌ರವರು ಅವರು ನಮ್ಮವರು ಎಂಬ ಅಭಿಪ್ರಾಯದಿಂದ ಹೇಳುತ್ತಿಲ್ಲ. ಅವರು ಇಡೀ ರಾಜ್ಯದ ಮಂತ್ರಿಗಳು ಅವರು ಇಡೀ ರಾಜ್ಯದ ಕಲ್ಯಾಣವನ್ನು ನೋಡಬೇಕು. ಇವತ್ತು ನಮ್ಮಲ್ಲಿ ಸೋಪಿನ ಫ್ಯಾಕ್ಟರಿ ಆಗಬೇಕಾಗಿತ್ತು ಅದು ಆಗಲಿಲ್ಲ. ಏನೇನು ಅಭಿವೃದ್ಧಿ ಕೆಲಸಕಾರ್ಯಗಳನ್ನು ಕೈಕೊಂಡಿಲ್ಲ. ಮೊನ್ನೆ ಮೊರಾರಜೀ ದೇಸಾಯಿಯವರು ನಿಮ್ಮ ಊರಿಗೆ ಯಾವಾಗ ಬರಬೇಕೆಂದು ಪತ್ರ ಬರೆದಿದ್ದರು. ಏತಕ್ಕೆ ಎಂದು ಕೇಳಿದ್ದಕ್ಕೆ ಅಲ್ಲಿ ಶಾಲೆಯನ್ನು ಉದ್ಘಾಟನೆ ಮಾಡಲು ಎಂದು ತಿಳಿಸಿದರು. ಸ್ವಾಮಿ, ಇವತ್ತು ಅಲ್ಲಿಯ ಜನತೆ ಹೊಟ್ಟೆಗೆ ಅನ್ನವಿಲ್ಲ, ಬಟ್ಟೆ ಇಲ್ಲದ, ಮಾಡಲು ಕೆಲಸವಿಲ್ಲ, ಅಂಥದರಲ್ಲಿ ನೀವು ಅಲ್ಲಿ ಶಾಲೆಯನ್ನು ಪ್ರಾರಂಭ ಮಡುತ್ತೇವೆಂದು ಹೇಳಿದರೆ, ಹೇಗೆ ಮಕ್ಕಳನ್ನು ಓದಿಸುವುದು? ಅಲ್ಲಿ ಯಾವ ಒಂದು ಇಂಡಸ್ಟ್ರಿಯಾಗಲೀ ಇಲ್ಲ, ಸಕ್ಕರೆ ಕಾರ್ಖಾನೆಯಾಗಲೀ, ಕೋಲಾರದಲ್ಲಿರುವ ಹಾಗ ಚಿನ್ನದ ಗಣಿಯಾಗಲೀ ಯಾವ ಒಂದು ಫೆಸಿಲಿಟೀಸ್ ನಮ್ಮಲ್ಲಿ ಇಲ್ಲ.

ಇವತ್ತಿನ ದಿವಸ ಟ್ರಜರಿ ಬೆಂಚಿನ ಕಡೆಯವರು ಯಾವಾಗಲೂ ಮಾತನಾಡುವಾಗ ನಮ್ಮ ಸರ್ಕಾರ, ನಮ್ಮ ಸರ್ಕಾರದವರು ಎಂದು ಹೇಳುತ್ತಿರುತ್ತಾರೆ. ನಮ್ಮ ಸರ್ಕಾರ ಎಂದರೆ ಯಾರು? ಅವರು ಸಹ ಜನಗಳ ಪ್ರತಿನಿಧಿಗಳು ಅಲ್ಲವೇ? ನಮ್ಮ ಜಿಲ್ಲೆಯ ಇಬ್ಬರು ಸ್ಟೇಟ್ ಸಚಿವರು ಇದ್ದಾರೆ. ಯಾರೇ ಇರಲಿ ಅವರು ಇಡೀ ರಾಜ್ಯದ ಜನತೆಗೋಸ್ಕರ ಕೆಲಸಗಳನ್ನು ಮಾಡಬೇಕು. ಈಗ ನಮ್ಮ ಜಿಲ್ಲೆಗೆ ಆಗಿರುವ ಅನ್ಯಾಯವನ್ನು ಸರಿಪಡಿಸುತ್ತೇವೆಂದು ಹೇಳಬೇಕು. ನಮಗೆ ಆಗಿರತಕ್ಕ ನೋವನ್ನು ಅರಿತು ಸಮಾಧಾನ ಮಾಡಬೇಕು ಬಿಜಾಪುರ ಜಿಲ್ಲೆಗಿಂತ ಗುಲ್ಬರ್ಗದಲ್ಲಿ ಕಡಿಮೆ ಕೆಲಸಕಾರ್ಯಗಳು ಆಗಿದ್ದರೆ ಅಥವಾ ಅನ್ಯಾಯವಾಗಿದ್ದರೆ ಆ ಜಿಲ್ಲೆಯಲ್ಲಿ ಆಗಿರುವ ಅನ್ಯಾಯವನ್ನು ಸರಿಪಡಿಸಿ ಎಲ್ಲಿ ಅನ್ಯಾಯವಾಗಿದೆಯೋ ಅಲ್ಲಿ ಸರಿಪಡಿಸಿ, ಬೇಡವೆಂದು ಹೇಳುವುದಿಲ್ಲ. ಇವತ್ತು ನಮ್ಮಲ್ಲಿ ಜನರು ಹಸಿವಿನಿಂದ ಸಾಯುತ್ತಿರತಕ್ಕಂಥವರ ಅಂಕಿಸಂಖ್ಯೆಗಳನ್ನು ಕೊಡಲಿಕ್ಕೆ ಸಾಧ್ಯವಿಲ್ಲ. ಇವತ್ತು ಅವರು ಪೂರ್ಣ ಸಾಯುವ ಸ್ಥಿತಿಯಲ್ಲಿಯೂ ಇಲ್ಲ, ಬದುಕುವ

ಸ್ಥಿತಿಯಲ್ಲಿಯೂ ಇಲ್ಲ. ಈ ಪರಿಸ್ಥಿತಿಯನ್ನು ತಂದಿಟ್ಟಿದ್ದೀರಿ. ನೀವು ದುಷ್ಕಾಲದಲ್ಲಿ ಹಣವನ್ನು ಖರ್ಚು ಮಾಡಿದ್ದೀರಿ. ಅರಿವೆಯನ್ನು ಕೊಟ್ಟಿದ್ದೀರಿ. ಅದು ಎಂಥದ್ದು ಎಂದರೆ ಲಗ್ನದ ಸಮಾರಂಭದಲ್ಲಿ ಉಪಯೋಗಿಸುವಂಥ ಅರಿವೆಯಲ್ಲ, ಸತ್ತಾಗ ಹೊದೆಸುವಂಥ ಅರಿವೆಯನ್ನು ಅಲ್ಲಿಯ ಜನತೆಗೆ ಕೊಟ್ಟಿದ್ದೀರಿ. ಇವತ್ತು ನಮ್ಮ ರಾಜ್ಯದಲ್ಲಿ ಕಾಂಗ್ರೆಸ್ (ಆರ್)ನವರೇ ಆಗಲೀ, ಕಾಂಗ್ರೆಸ್ (ಒ) ನವರೇ ಇರಲಿ ಜನಸಂಘದವರೇ ಇರಲಿ ಇವತ್ತು ಯಾರಾದರೂ ಸತ್ತಿದ್ದಾರೆ ಎಂದು ಟೆಲಿಗ್ರಾಂ ಬಂದ ಕೂಡಲೇ ಯಾವ ರೀತಿ ಓಡಿಹೋಗುತ್ತೀವೆಯೋ ಹಾಗೆ ಅಲ್ಲಿಯ ಜನಗಳು ಸಾಯುವ ಪರಿಸ್ಥಿತಿಯಲ್ಲಿರುವಾಗ ನೀವು ಅಲ್ಲಿ ಯಾವ ಕೆಲಸಕಾರ್ಯಗಳನ್ನು ಮಾಡುತ್ತಿಲ್ಲ.

ಇವತ್ತು ನಾನು ನಿಮಗೆ ಪ್ರಾರ್ಥನೆ ಮಾಡಿ ಹೇಳುತ್ತಿದ್ದೇನೆ. ನಮ್ಮಲ್ಲಿ ಹೆಜಿಟೇಷನ್ ಆಗದೆ ಯಾವುದೇ ಕೆಲಸವಾಗುವುದಿಲ್ಲ ಎಂಬುದು ಅರ್ಥವಾಗುತ್ತಿದೆ. ಆ ಭಾವನೆ ಬರಲಿಕ್ಕೆ ಹತ್ತಿದೆ. ಆದರೆ ಬಿಜಾಪುರದ ಜನ 1930 ರಲ್ಲಿ ಮಾನ್ಯ ದಿವಂಗತ ಗಾಂಧೀಜಿಯವರು ಯಾವ ಮಾರ್ಗವನ್ನು ಹಾಕಿಕೊಟ್ಟರೋ ಆ ಮಾರ್ಗವನ್ನು ಅನುಸರಿಸಿಕೊಂಡು ಹೋಗುವಂಥ ಜನ ಇವತ್ತು ನೀವು ಖಾದಿ ಉದ್ಯೋಗವನ್ನು ಪ್ರಾರಂಭಮಾಡಬಹುದು. ಕುಸುಬಿ ಎಣ್ಣೆ, ಸೇಂಗಾ ಎಣ್ಣೆ ಫ್ಯಾಕ್ಟರಿ ಮಾಡಬಹುದು ಕಾಗದದ ಕಾರ್ಖಾನೆ ಮಾಡಬಹುದು, ಈ ಬೇವಿನ ಎಣ್ಣೆ ಏನು ಇದೆ ಆದರಿಂದ ಸೋಪಿನ ಫ್ಯಾಕ್ಟರಿ ಮಾಡುವುದಕ್ಕೆ ಬರುತ್ತದೆ. ಈ ರೀತಿ ಯಾವುದಾದರೂ ಫ್ಯಾಕ್ಟರಿಯನ್ನು ಮಾಡಬಹುದು. ಯಾವುದನ್ನೂ ಮಾಡದಿದ್ದರೆ ಕೊನೆಗೆ ಚಪ್ಪಲಿಯನ್ನಾದರೂ ತಯಾರಿಸಿದರೆ ನಾವು ಅಲ್ಲಿ ಹುಟ್ಟಿದ್ದಕ್ಕಾದರೂ ನಮ್ಮನ್ನು ಹೊಡೆದು ಕೊಳ್ಳುವುದಕ್ಕಾದರೂ ಬರುತ್ತದೆ. ನಮ್ಮ ದುರಾದೃಷ್ಟದ ಸಂಗತಿ ಏನೆಂದರೆ ನಾವು ಹಳೆಯ ಮೈಸೂರಿನಲ್ಲಿ ಹುಟ್ಟದೇ ಹೊಸ ಮೈಸೂರಿನ ಭಾಗದಲ್ಲಿ ಹುಟ್ಟಿರುವುದೇ ನಮ್ಮ ದುರ್ದೈವ.

ಮಾನ್ಯ ರಾಥೋಡ್ ರವರಲ್ಲಿ ಪ್ರಾರ್ಥನೆ ಮಾಡುತ್ತೇನೆ, ನೀವು ದುಷ್ಕಾಲದ ಸಲುವಾಗಿ ನಿಮ್ಮಲ್ಲಿ ಏನು ಒಂದು ಸ್ಕೀಂ ಮಾಡಿದ್ದೀರಿ. ಅದರ ಮುಖಾಂತರ ಲಕ್ಷಾಂತರ ರೂಪಾಯಿಗಳನ್ನೇನೂ ಖರ್ಚು ಮಾಡಿದ್ದೀರಿ. ಆದರೆ ನೀವು ಲಂಬಾಣಿ ಸಮಾಜದಿಂದ ಆರಿಸಿ ಬಂದಂಥವರು ಅವರ ಅಭಿವೃದ್ಧಿಗಾಗಿ ಯಾವ ಕೆಲಸವನ್ನೂ ಮಾಡಿಲ್ಲ. ಅವರು ಗೋಣಿಚೀಲವನ್ನು ಮಾಡುತ್ತಾರೆ ಅದನ್ನಾದರೂ ಅಭಿವೃದ್ಧಿಪಡಿಸಿ–ನಾರನ್ನು ತಯಾರಿಸುತ್ತಾರೆ ಅದರ ಡೆವಲಪ್‌ಮೆಂಟ್‌ನ್ನಾದರೂ ಮಾಡಿ, ಇನ್ನು ಜೇನುತುಪ್ಪ ತಯಾರು ಮಾಡುವುದು ಮಾಡಿರಿ, ಏನನ್ನಾದರೂ ಮಾಡ್ರಿ ಎಂದು ನಿಮ್ಮನ್ನು ಆ ಜನ ಕೇಳಿದ್ರೆ ನೀವು ಅವರಿಗೆ ಅಪ್ಲಿಕೇಷನ್ ಕೊಡಲು ಹೇಳುತ್ತೀರಿ. ಆದರೆ ಅವರು ಓದಿ ಬರೆದಿದ್ದರೆ ಅಲ್ಲವೇ ನಿಮಗೆ ಅವರು ಅಪ್ಲಿಕೇಷನ್ ಬರೆದುಕೊಡುವುದು, ನೀವು ಓದಿದ ಜನ ಏತಕ್ಕೆ ಇರುವುದು ಅವರ ಕಷ್ಟವನ್ನು ಅರಿತು ನೀವು ಆ ಕೆಲಸವನ್ನು ಮಾಡಬೇಕು ಏನಾದರೂ ಮಾಡ್ರಿ ಎಂದು ಹೇಳಿದರೆ ಹಣವಿಲ್ಲವೆಂದು ಹೇಳುತ್ತೀರಿ. ಟ್ಯಾಕ್ಸ್ ನ್ನು ಹಾಕಿರಿ. ನಮ್ಮ ಮೇಲೂ ಟ್ಯಾಕ್ಸ್ ಹಾಕಿರಿ, ಅದರ ಸಲುವಾಗಿ ಕೆಲಸ ಮಾಡದೇ ಇರಬೇಡಿ. ಇವತ್ತು ನೀವು ಮಂಡ್ಯದಲ್ಲಿ ಸಕ್ಕರೆ ಕಾರ್ಖಾನೆಯನ್ನು ಓಪನ್ ಮಾಡುತ್ತೀರಿ. ಹಂಪೆಯಲ್ಲಿ ಒಂದು ಸಕ್ಕರೆ ಕಾರ್ಖಾನೆ ಓಪನ್ ಮಾಡುತ್ತೀರಿ, ವಿಜಯನಗರದ ಉಕ್ಕಿನ ಕಾರ್ಖಾನೆ ಮಾಡುತ್ತೀರಿ, ಇನ್ನು ಸೊಂಡೂರಿನಲ್ಲಿ ಇನ್ನು

ಯಾವುದೋ ಒಂದು ಓಪನ್ ಮಾಡುತ್ತೀರಿ, ಮಾಡಿ, ಬೇಡವೆಂದು ಹೇಳುವುದಿಲ್ಲ. ಆದರೆ ನಮ್ಮ ಭಾಗದ ಕಡೆಗೂ ತಮ್ಮ ಗಮನವನ್ನು ಹರಿಸಬೇಕೆಂದು ಕೇಳಿಕೊಳ್ಳುತ್ತೇನೆ. ಇವತ್ತಿನ ದಿವಸ ಆ ಕೆಲಸಗಳನ್ನು ಮಾಡದೇ ಇದ್ದರೆ ಪರಿಸ್ಥಿತಿ ಬಹಳ ಕಠಿಣವಾಗುತ್ತದೆಂದು ನೊಂದು ಈ ಮಾತನ್ನು ಹೇಳುತ್ತಿದ್ದೇನೆ. ನೀವು ಇದನ್ನು ಲಘುವಾಗಿ ತೆಗೆದುಕೊಳ್ಳಬಾರದೆಂದು ಪ್ರಾರ್ಥನೆ ಮಾಡುತ್ತೇನೆ. ಅಲ್ಲಿರತಕ್ಕಂಥ ಪರಿಸ್ಥಿತಿ ಛೇಂಜ್ ಆಗಬೇಕೆಂದು ಹೇಳುತ್ತೇನೆ.

ಬಿಜಾಪುರ ಜಿಲ್ಲೆಯ ಭಾಗದಲ್ಲಿ ಹಲವಾರು ಕೈಗಾರಿಕೆಗಳನ್ನು ಆರಂಭಿಸುವುದಕ್ಕೆ ಸಾಧ್ಯವಿದೆ ಎಂದು ಏನೇನು ಸಲಹೆ ಕೊಟ್ಟಿದ್ದೇನೋ ಅದನ್ನೆಲ್ಲಾ ಅಲಕ್ಷ್ಯ ಮಾಡದೇ ಮಾಡಿ ಎಲ್ಲವೂ ನಿಮ್ಮ ಕೈಯಲ್ಲಿ ಇದೆ ನೀವು ಆ ಭಾಗದಲ್ಲಿ ಕೈಗಾರಿಕೆ ಮಾಡದೇ ಹೋದರೆ ಈ ಸ್ಥಾನದಲ್ಲಿ ಏತಕ್ಕೆ ಇರುತ್ತೀರಿ. ರಾಜೀನಾಮೆ ಕೊಡಿ ಎಂದು ಹೇಳುತ್ತೇನೆ. ನಿಮ್ಮ ಮೇಲೆ ನಾನು ಈ ಏನೇನು ಚಾರ್ಜಸ್ ಮಾಡಿದ್ದೇನೂ ಅದನ್ನೆಲ್ಲಾ ಕೇಳಿಕೊಂಡು ಸುಮ್ಮನಿರಬೇಡಿ. ನೀವು ಏನೇನು ಕೆಲಸಕಾರ್ಯಗಳನ್ನು ಮಾಡುತ್ತೀರೆಂದು ನಾವು ನೋಡಲು ಬಹಳ ಆತುರಾಗಿದ್ದೇನೆ. ನಾನು ಈ ರೀತಿ ಮಾತನಾಡುವ ಸ್ವಾಭಾವದವನು ಎಂದು ಶ್ರೀಮಾನ್ ಕೃಷ್ಣರವರಿಗೆ ಗೊತ್ತು, ಶ್ರೀಮಾನ್ ದೇವೇಗೌಡರವರಿಗೂ ಗೊತ್ತು. ಆದುದರಿಂದ ತಾವು ನಾನು ಹೇಳಿದ ಮಾತನ್ನು ಮೌನವಾಗಿ ಕೇಳಿಕೊಂಡು ಸುಮ್ಮನಿರದೆ ಆ ಭಾಗದಲ್ಲಿ ಏನೇನು ಕೈಗಾರಿಕೆಗಳನ್ನು ಮಾಡುವುದಕ್ಕೆ ಸಾಧ್ಯವಿದೆಯೋ ಅದನ್ನು ಪ್ರಾರಂಭಿಸಬೇಕೆಂದು ಮತ್ತೊಮ್ಮೆ ಹೇಳಿ ನನ್ನ ಮಾತನ್ನು ಮುಗಿಸುತ್ತೇನೆ.

## ವಿಜಾಪೂರ ಜಿಲ್ಲೆಯ ಬರಗಾಲದ ಚರ್ಚೆ

8ನೇ ಮೇ 1974

ನಾನು ಒಂದೆರಡು ವಿಷಯಗಳನ್ನು ತಿಳಿಸಬೇಕಾಗಿದೆ. ಬಿಜಾಪುರ ಜಿಲ್ಲೆಯಲ್ಲಿ ದುಷ್ಕಾಲಕ್ಕೆ ತುತ್ತಾಗಿರುವ ಭಾಗಗಳಿವೆ. ಇಂಡಿ, ಸಿಂದಗಿಗಳಲ್ಲಿ ದುಷ್ಕಾಲವಿದೆ ಎಂದರೆ ಅದನ್ನು ನಂಬಬೇಕು. ಅಲ್ಲಿ ಮೈನರ್ ಇರಿಗೇಷನ್ ಸ್ಕೀಂ ಮಾಡಲು ಅವಕಾಶವಿಲ್ಲ. ವೆಲ ಇರಿಗೇಷನ್, ಮೈನರ್ ಇರಿಗೇಷನ್ ಕೆಲಸದಲ್ಲಿ ಬರುವುದಿಲ್ಲ. ಇದಕ್ಕೆ ವರ್ಲ್ಡ ಬ್ಯಾಂಕಿನಿಂದ ಸಾಲ ತಂದರೂ ನಮಗೆ ಯಾವುದೂ ಸಿಕ್ಕಿಲ್ಲ.

ಸಿಂದಗಿ ನನ್ನ ಕ್ಷೇತ್ರ. ಅಲ್ಲಿ ಲಿಫ್ಟ್ ಇಂಗೇಷನ್‌ಗೆ ಆಗಲೀ, ಮೈನರ್ ಇಂಗೇಷನ್ನಿಗೆ ಆಗಲೀ ಅವಕಾಶವಿಲ್ಲ. ವೆಲ ಇರಿಗೇಷನ್ 6,500 ಬಾವಿಗಳು ಇವೆ ಅವುಗಳನ್ನು ಆಳಮಾಡಬೇಕಾಗಿದೆ. ಅದಕ್ಕಾಗಿ ನಮಗೆ ಎರಡು ಕೋಟಿ ರೂಪಾಯಿ ಲೋನ್ ಕೊಟ್ಟರೆ ನಮ್ಮ ಪ್ರಾಬ್ಲಮ್ ಶಾಶ್ವತವಾಗಿ ನಿಕಾಲಿಯಾಗುತ್ತದೆ. ಆದುದರಿಂದ ಇಲ್ಲಿ ಬಾವಿ ಇರಿಗೇಷನ್ ತೆಗೆದುಕೊಳ್ಳುವ ಬಗ್ಗೆ ಏನು ಹೇಳುತ್ತಾರೆ?

**ಶ್ರೀ ಕೆ.ಆರ್.ಎಸ್. ನಾಯ್ಡು** – ಅಧ್ಯಕ್ಷರೇ ತಮಗೆ ಗೊತ್ತಿರುವ ಹಾಗೆ, ಕೋಲಾರ, ತುಮಕೂರು, ಚಿತ್ರದುರ್ಗ, ಬಳ್ಳಾರಿ, ಜಿಲ್ಲೆಗಳಲ್ಲಿ ಸರಿಯಾಗಿ ಮಳೆ ಆಗುವುದಿಲ್ಲ. ಅದು ಡ್ರಾಟ್

ಎಫೆಕ್ಟೆಡ್ ಏರಿಯಾ ಅದಕ್ಕೆ ಯಾವ ಕಾರ್ಯಕ್ರಮ ತೆಗೆದುಕೊಂಡಿದ್ದಾರೆ. ಎಸ್ಟುವ ಬಗ್ಗೆ ಹೆಚ್ಚಿನ ಮಾಹಿತಿಕೊಡಬೇಕು ಎಂದು ಕೇಳಿಕೊಳ್ಳುತ್ತೇನೆ.

**ಶ್ರೀ ಎನ್. ಪುಟ್ಟಮಾಸ್ತಿಗೌಡ** – ಈ ರೀತಿ ಆದರೆ ಉತ್ತರ ಕೊಡುವುದು ಕಷ್ಟವಾಗುತ್ತದೆ. ಕಾಂಪ್ಲಿಕೇಷನ್ ಇದ್ದರೆ ಕೇಳಬೇಕು.

**ಶ್ರೀ ಎಸ್.ಬಿ ನಾಗರಾಳ** – ಈಗಾಗಲೇ ಡಿಸ್ಟ್ರಿಕ್ಟ್ ವೈಸ್ ಹಣ ಖರ್ಚಾಗಿರುವ ಬಗ್ಗೆ ಏನಿ ಹೇಳಿದ್ದೇನೆ ಚಿತ್ರದುರ್ಗದಲ್ಲಿ ಎರಡು ಕೋಟಿ 28 ಲಕ್ಷ ರೂಪಾಯಿ ಕೆಲಸ ಇದೆ, ಕೋಲಾರದಲ್ಲಿ ಒಂದು ಕೋಟಿ 86 ಲಕ್ಷ ರೂಪಾಯಿ ಕೆಲಸ ಇದೆ. ಇಂಡಿ ತಾಲ್ಲೂಕಿನಲ್ಲಿ ಲಿಫ್ಟ್ ಇರಿಗೇಷನ್ ಸ್ಕೀಮ್ ತೆಗೆದುಕೊಂಡಿದ್ದೇವೆ. ಸಿಂದಗಿ ತಾಲ್ಲೂಕಿನಲ್ಲಿ ಕೆರೆ ಕಟ್ಟುವುದಕ್ಕೆ ಅನುಕೂಲವಾಗಿರತಕ್ಕ ಸ್ಥಾನದ ಬಗ್ಗೆ ಇನ್ ವೆಸ್ಟಿಗೇಷನ್ ನಡೆಯುತ್ತಾ ಇದೆ. ಇನ್‌ವೆಸ್ಟಿಗೇಷನ್ ಮಾಡಿದಾಗ ಫೀಸಿಬಲ ಆಗಿ ಕಂಡುಬಂದರೆ ಸಿಂದಗಿ ತಾಲ್ಲೂಕಿಗೆ ಯಾವುದೇ ರೀತಿ ಅಲಕ್ಷ್ಯ ಮಾಡುವುದಿಲ್ಲ ಎಂದು ಅಭಯವಚನ ಕೊಡಲು ಬಯಸುತ್ತೇನೆ.

**ಶ್ರೀ ಎಸ್.ವೈ. ಪಾಟೀಲ** – ಇಲ್ಲಿ ಇರಿಗೇಷನ್ ವೆಲ್ಸ್ ಎಂದು ಹೇಳಿದರೆ ಹೊಸದಾಗಿ ಮಾಡಿ ತೋರುವುದಿಲ್ಲ, ಸಿಂದಗಿ ತಾಲ್ಲೂಕಿನಲ್ಲಿ ಹೊಸದಾಗಿ ಏತಕ್ಕೆ ಎನ್‌ಕ್ವಯರಿ ಮಾಡುತ್ತೀರಿ? ಹಿಂದೆ ಇನ್‌ವೆಸ್ಟಿಗೇಟ್ ಮಾಡಿ, ಅಲ್ಲಿ ಯಾವ ಒಂದು ಜಾಗ ಇಲ್ಲ ಎಂದು ತಜ್ಞರು ಹೇಳಿದ್ದಾರೆ. ಅಪ್ಪರ ಕೃಷ್ಣ ರಿವರ್ ಸ್ಕೀಮ್ ಏನು ಇದೆ ಅದು ತಕ್ಷಣಕ್ಕೆ ಆಗುವುದಿಲ್ಲ ಎಂದು ಸ್ಪಷ್ಟವಾಗಿ ಹೇಳುತ್ತೇನೆ.

**ಶ್ರೀ ಎಸ್.ಬಿ. ನಾಗರಾಳ** – ಸರ್ಕಾರ ಬೋರ್ ವೆಲ ವಿಷಯವಾಗಿ ಕಮಿಟಿ ನೇಮಕ ಮಾಡಿತ್ತು ರಿಪೋರ್ಟ್ ಇನ್ನು ಬಂದಿಲ್ಲ.

**ಶ್ರೀ ಹೆಚ್.ಡಿ ದೇವೇಗೌಡ** – ಇರಿಗೇಷನ್ ವೆಲ್ಸ್ ಗಾಗಿ ಎರಡು ಕೋಟಿ ರೂಪಾಯಿ ಹಣವನ್ನು ಲೋನ್ ಮುಖಾಂತರ ಕೊಡಿ ಅದನ್ನು ನಂತರ ವಾಪಸ್ಸು ಕೊಡುತ್ತೇವೆ ಎಂದು ಅವರು ಹೇಳುತ್ತಿದ್ದಾರೆ.

**ಶ್ರೀ ಎಸ್.ಬಿ. ನಾಗರಾಳ** – ಅವರ ಸಲಹೆಯನ್ನು ಗಮನದಲ್ಲಿಟ್ಟುಕೊಳ್ಳುತ್ತೇನೆ. ಇನ್ನು ಮೈನರ್ ಇರಿಗೇಷನ್ ಬಗ್ಗೆ ಏನು ತೊಂದರೆ ಇದೆ ಯಾವ ರೀತಿಯಿಂದ ರೈತರಿಗೆ ಒಳ್ಳೆಯದು ಮಾಡಬಹುದು ಎಂಬ ಬಗ್ಗೆ ಒಂದು ಕಮಿಟಿ ಅಪಾಯಿಂಟ್ ಮಾಡಿದ್ದಾರೆ. ಅವರು ಈಗಾಗಲೇ ತೀರ್ಮಾನಕ್ಕೆ ಬಂದಿದ್ದು ರಿಪೋರ್ಟ್ ತಯ್ಯಾರಾಗಿದೆ ಎಂದು ಕೇಳಿದ್ದೇನೆ. ಇನ್ನೂ ರಿಪೋರ್ಟ್ ಬಂದಿಲ್ಲ. ಬಂದನಂತರ ಇದರ ಬಗ್ಗೆ ಕೂಲಂಕುಷವಾಗಿ ಆಲೋಚನೆ ಮಾಡಿ ಯಾವ ರೀತಿಯಿಂದ ಎಲ್ಲೆಲ್ಲಿ ಬೋರ್‌ವೆಲ ತೆಗೆದುಕೊಳ್ಳಬಹುದು ಎಂದು ನೋಡಿ ಅದಕ್ಕೆ ಹಣದ ವ್ಯವಸ್ಥೆ ಮಾಡುತ್ತೇನೆ.

**ಶ್ರೀ ಎಸ್.ವೈ. ಪಾಟೀಲ** – ನಾನು ಕೇಳುವುದು ಬೋರ್‌ವೆಲ ವಿಚಾರ ಅಲ್ಲ. 6,500 ಬಾವಿಗಳಲ್ಲಿ ಸಾಕಷ್ಟು ನೀರು ಇದೆ. ಜಿಯಾಲಾಜಿಕಲ ಸರ್ವೆ ಮಾಡಿಸಿ ಡಾ. ರಾಧಾಕೃಷ್ಣ ಅವರ ಅಭಿಪ್ರಾಯ ತೆಗೆದುಕೊಂಡು ಗವರ್ನ್‌ಮೆಂಟ್ ಏಜೆನ್ಸಿ ಮೂಲಕ ಈ ಬಾವಿಗಳ ಕೆಲಸ ಮಾಡಿಸಿರಿ

ಎಂದು ಹೇಳುತ್ತೇನೆ. ಇದಕ್ಕೆ ಯಾರು ಸಂಬಂಧ ಇದ್ದಾರೋ ಅವರು ನನಗೆ ಸಮರ್ಪಕ ಉತ್ತರ ನಾಳೆ ಹೇಳಲಿ, ಅಥವಾ ಅಸೆಂಬ್ಲಿ ಮುಗಿಯುವುದರೊಳಗೆ ಹೇಳಲಿ, ನಾನು ಹೊಸ ಬಾವಿಗಳನ್ನು ಕೇಳುವುದಿಲ್ಲ ನಮಗೆ ಬೋರ್‌ವೆಲ ಬೇಕಾಗಿಲ್ಲ.

**ಶ್ರೀ ಎಸ್.ಬಿ. ನಾಗರಾಳ** – ಮಾನ್ಯ ಸದಸ್ಯರು ಕೇಳಿರತಕ್ಕ ಬೇಡಿಕೆಯನ್ನು ಸರಿಯಾದಂಥ ದೃಷ್ಟಿಯಿಂದ ಎಕ್ಸಾಮಿನ್ ಮಾಡಿಸುತ್ತೇನೆ ಎಂದು ಹೇಳಿದ್ದೇನೆ. ಈಗಲೂ ಹೇಳುತ್ತೇನೆ ಒಣ ಪ್ರದೇಶದಲ್ಲಿರತಕ್ಕ ಜಮೀನುಗಳನ್ನು ಹೇಗೆ ನೀರಾವರಿ ಮಾಡಬೇಕು. ಬೋರ್ ವೆಲ ಮಾಡಬೇಕೇ; ಅದಕ್ಕೆ ಬೇಕಾಗಿರತಕ್ಕ ಹಣ ಹೇಗೆ ಒದಗಿಸಬೇಕು ಎನ್ನುವ ಬಗ್ಗೆ ರಿಪೋರ್ಟಿನಲ್ಲಿ ವಿಶೇಷವಾಗಿ ಮಾಹಿತಿ ಕೊಟ್ಟಿದ್ದಾರೆ ಎಂದು ಕೇಳಿದ್ದೇನೆ. ರಿಪೋರ್ಟ ಬಂದನಂತರ ಸವಿಸ್ತಾರವಾಗಿ ಕೂಲಂಕಷವಾಗಿ ಪರಿಶೀಲಿಸಿ ಸರಿಯಾದಂಥ ದೃಷ್ಟಿಯಿಂದ ಸಣ್ಣ ನೀರಾವರಿಗೆ ಬೇಕಾಗುವ ಸೌಲಭ್ಯಗಳನ್ನು ಏರ್ಪಡಿಸುವ ಪ್ರಯತ್ನ ಮಾಡುತ್ತೇನೆ ಎಂದು ಇಷ್ಟು ಮಾತ್ರ ಹೇಳಬಯಸುತ್ತೇನೆ.

**ಶ್ರೀ ಎಸ್.ವೈ. ಪಾಟೀಲ** – ರೂಲ್ಸ್–ರೆಗ್ಯುಲೇಷನ್ಸ್ ಜನರ ಕಲ್ಯಾಣಕ್ಕೆ ಆಗದೇ ಇದ್ದರೆ ಏನು ಮಾಡಬೇಕು? ಸ್ಟೇರ್ ಸಿಟಿ ಪ್ರದೇಶದ ಎಂ.ಎಲ್.ಎ. ಗಳನ್ನು ಕರೆದುಕೊಂಡು ಹೋಗದೆ ಸಂಬಂಧ ಇಲ್ಲದ ಎಂ.ಎಲ.ಎ ಗಳನ್ನು ಕರೆದುಕೊಂಡು ಹೋಗಿ ರಿಪೋರ್ಟ ಮಾಡುತ್ತಾ ಇದ್ದಾರೆ.

**ಶ್ರೀ ಎಸ್.ಬಿ. ನಾಗರಾಳ್** – ಆ ಸಮಿತಿಗೆ ತಾಂತ್ರಿಕ ತಜ್ಞರನ್ನು ಸೆಕ್ರೆಟೇರಿಯೆಟ್ ಲೆವೆಲ ನಲ್ಲಿ ನೇಮಿಸಲಾಗಿದೆ.

**ಶ್ರೀ ಎಸ್.ವೈ. ಪಾಟೀಲ** – ನನ್ನನ್ನು ಸಿಂಧಿಗೆ ಕರೆದುಕೊಂಡು ಹೋಗಿ ನಾನು ತೋರಿಸಿ ಕೊಡುತ್ತೇನೆ.

**ಶ್ರೀ ಬಾಪುಗೌಡು** – ಅಲ್ಲಿ ಬೇರೆ ಯಾವ ನೀರಾವರಿ ಸೌಕರ್ಯವಿಲ್ಲ, ಕೆರೆಗಳು ಆಗುವುದಿಲ್ಲ, ಲಿಫ್ಟ್ ಇರಿಗೇಷನ್ ಕೂಡ ಆಗುವುದಿಲ್ಲ. ಕೇವಲ 6,500 ಹಳೆ ಬಾವಿಗಳು ಇವೆ. ಅಂಥ ಬಾವಿಗಳನ್ನು ಆಳ ಮಾಡಲು ಹಣ ಒದಗಿಸಿ ಎಂದು ಹೇಳುತ್ತಾರೆ. ಅದಕ್ಕೆ ನಿರ್ದಿಷ್ಟ ಉತ್ತರಬೇಕು.

**ಅಧ್ಯಕ್ಷರು** – ಕೋ ಅಪರೇಟಿವ್ ಡಿಮ್ಯಾಂಡ್ ದಿವಸ ಕೇಳಬೇಕಾಗಿತ್ತು. ಅವರಿಗೆ ಇದು ಸಂಬಂಧ ಇಲ್ಲ ಎಂದು ಹೇಳುತ್ತಾರೆ. ಲೋನ್ ಒದಗಿಸುವ ವಿಚಾರ ಪರೀಕ್ಷೆ ಮಾಡುತ್ತಾರೆ ಎಂದು ಹೇಳಿದ್ದಾರೆ.

**ಶ್ರೀ ಎಸ್.ವೈ. ಪಾಟೀಲ** – ಇದು ಜೀವನ ಮರಣದ ಪ್ರಶ್ನೆ, ಯಾವ ಮಿನಿಸ್ಟರಿಂದಲಾದರೂ ಇದಕ್ಕೆ ಉತ್ತರ ಕೊಡಿಸಿ.

**ಅಧ್ಯಕ್ಷರು** – ಇದಕ್ಕೆಲ್ಲಾ ಒಂದು ರೂಲ್ಸ ಇದೆ. ಹೀಗೆ ಮಾತನಾಡಿದರೆ ಹೇಗೆ?

**ಶ್ರೀ ಎಸ್.ವೈ. ಪಾಟೀಲ** – ಸಾಯುವ ಬಗ್ಗೆ ರೂಲ್ಸ ಏನು ಅಡ್ಡಿ ಇಲ್ಲ.

ಶ್ರೀ ಹೆಚ್. ಸಿದ್ದವೀರಪ್ಪ – ಸಾಯುವ ಬಗ್ಗೆ ರೂಲ್ಸ್ ಏತಕ್ಕೆ ಬೇಕು?

ಶ್ರೀ ಎಸ್.ವೈ. ಪಾಟೀಲ – ರೋಣ ತಾಲ್ಲೂಕಿನಲ್ಲಿ ಇದುವರೆಗೆ ಯಾವ ಬಾವಿಗಳ ಕೆಲಸಗಳು ಆಗಿಲ್ಲ. ಇಲ್ಲಿನ ಜನಕ್ಕೆ ನೀರೇ ಇಲ್ಲದೆ ಸಾಯುವ ಪ್ರಸಂಗ ಬಂದಿದೆ. ಇಲ್ಲಿನ ಬಾವಿಗಳ ದುರಸ್ತಿ ಬಗ್ಗೆ ಯಾರ ಕಡೆಯಿಂದ ಉತ್ತರ ಕೇಳಬೇಕು ನಮಗೆ ಗೊತ್ತಿಲ್ಲ. ಸರಕಾರದ ಕಡೆಯಿಂದ ತಾವು ಉತ್ತರ ತರಿಸಿ ಕೊಡಿ ಎಂದು ಪ್ರಾರ್ಥನೆ ಮಾಡುತ್ತೇನೆ.

ಅಧ್ಯಕ್ಷರು – ಇದು ಇಲ್ಲಿರುವ ಬೇಡಿಕೆಗಳಲ್ಲಿ ಬರುವುದಿಲ್ಲ ಎಂದು ಸರಕಾರದವರು ಹೇಳುತ್ತಿದ್ದಾರೆ. ಇದನ್ನು ಮಾನ್ಯ ಪಾಟೀಲ ರವರು ಒಪ್ಪಲಿಲ್ಲ ಎಂದರೆ ನಾವೇನು ಹೇಳುವುದು?

ಶ್ರೀ ಎಸ್.ವೈ. ಪಾಟೀಲ – ಸ್ಕೇರ್ಸಿಟಿ ಏರಿಯಾಗಳಲ್ಲಿ ನಮ್ಮ ಭಾಗದಲ್ಲಿ ಇಂಡಿ, ಸಿಂಧಗಿ ತಾಲ್ಲೂಕುಗಳಲ್ಲಿ ಕಳೆದ 20 ವರ್ಷಗಳಿಂದಲೂ ಬಾವಿಗಳ ಕೆಲಸವನ್ನೇ ಮಾಡಿಲ್ಲ ನಮ್ಮ ಜನಕ್ಕೆ ನಾವೇನು ಹೇಳುವುದು?

ಅಧ್ಯಕ್ಷರು – ಮಾನ್ಯ ಸದಸ್ಯರು ದಯಪಿಟ್ಟು ಕುಳಿತುಕೊಳ್ಳಬೇಕು. ಇಲ್ಲಿ ಮಾನ್ಯ ಮಂತ್ರಿಗಳು ಹೇಳುವ ಉತ್ತರವನ್ನು ಮೊದಲು ಸಮಾಧಾನವಾಗಿ ಕೇಳಬೇಕು. ಇದನ್ನು ಕೇಳಿಯಾದ ನಂತರ ಅವರಿಗೆ ತೋಚಿದ ಕ್ಲಾರಿಫಿಕೇಷನ್‌ಗಳನ್ನು ಕೇಳಲು ಅವಕಾಶವಿದೆ ಹಾಗೆ ಮಾಡದೆ ಈ ರೀತಿ ಮಧ್ಯೆ ಮಧ್ಯೆ ಪ್ರಶ್ನೆ ಕೇಳಿ ಅದಕ್ಕೆ ಉತ್ತರ ಕೊಡಬೇಕೆಂದು ಕೇಳಿದರೆ ಇವಕ್ಕೆಲ್ಲಾ ಕಾಲಾವಕಾಶ ಎಲ್ಲಿದೆ? ಉತ್ತರ ಹೇಳುವವರೆಗೆ ಸ್ವಲ್ಪ ನಿಧಾನವಾಗಿ, ಅವರು ಮೊದಲು ಹೇಳಲಿ ಆ ನಂತರ ಏನು ವಿವರ ಬೇಕೋ ಅದನ್ನು ಕೇಳಬಹುದು.

ಶ್ರೀ ಎಸ್.ವೈ. ಪಾಟೀಲ – ನಾನು ಸರಕಾರದಲ್ಲಿ ಕೇಳುತ್ತಿದ್ದೇನೆ. ನನ್ನ ಕ್ಷೇತ್ರದಲ್ಲಿರುವ ಬಾವಿಗಳ ದುರಸ್ತಿನ ಬಗ್ಗೆ ಯಾವ ಮಂತ್ರಿಗಳನ್ನು ಕೇಳಬೇಕು ಎನ್ನುವುದು ನನಗೆ ತಿಳಿಯದು. ಇದನ್ನು ಮೈನರ್ ಇರಿಗೇಷನ್ ಮಂತ್ರಿಗಳು ನೋಡುತ್ತಾರೆಂದು ಇದ್ದೆ. ಆದರೆ ಅವರು ಈ ಪ್ರಶ್ನೆ ತಮಗೆ ಸೇರಿಲ್ಲ ಎನ್ನುತ್ತಾರೆ. ಇದಕ್ಕಾಗಿ ಯಾವ ಮಂತ್ರಿಗಳು ಉತ್ತರ ಹೇಳುತ್ತಾರೋ ಅವರಿಗಾದರೂ ತಾವು ಸ್ವಲ್ಪ ಪರವಾನಗಿ ಕೊಡಿ.

ಅಧ್ಯಕ್ಷರು – ಶ್ರೀಮಾನ್ ಚನ್ನಬಸಪ್ಪನವರು ಇದರ ಬಗ್ಗೆ ಹೇಳುತ್ತೇವೆಂದು ಹೇಳುತ್ತಾರೆ.

ಶ್ರೀ ಎಸ್.ವೈ. ಪಾಟೀಲ – ಶ್ರೀಮಾನ್ ಚನ್ನಬಸಪ್ಪನವರೇ ಹೇಳಲಿ. ನಮ್ಮ ಸಿಂಧಗಿ ಹಾಗೂ ಇಂಡಿ ತಾಲ್ಲೂಕುಗಳಲ್ಲಿ ಮೇಜರ್ ಇರಿಗೇಷನ್ ಬಾಬಿನಲ್ಲಿ ಅಪ್ಪರು ಕೃಷ್ಣಾ ಯೋಜನೆ ಬರುತ್ತೆ ಎನ್ನುತ್ತಾರೆ. ಇದಕ್ಕಾಗಿ ಸೈಟುಗಳನ್ನು ಆರಿಸಿ ಏನೋ ಕೆಲಸಗಳನ್ನು ಮಾಡುತ್ತಿದ್ದಾರೆ. ನಾನು ಇಲ್ಲಿ ಕೇಳುವುದು ನಮ್ಮ ಕ್ಷೇತ್ರಗಳಲ್ಲಿ ಹೊಸ ಬಾವಿಗಳನ್ನು ತೋಡಿಸಿದರೂ ನೀರು ಬರುತ್ತೋ ಇಲ್ಲವ್ರೋ ಎನ್ನುವ ಒಂದು ಸಂಶಯ ನಮ್ಮನ್ನು ಕಾಡುತ್ತಿದೆ. ಸುಮಾರು 6500 ಬಾವಿಗಳನ್ನು ತೋಡಿಸಬೇಕೆಂದು ಇದ್ದುದರಲ್ಲಿ ನಮ್ಮ ಇಂಡಿ ಹಾಗೂ ಸಿಂದಗಿ ತಾಲ್ಲೂಕುಗಳಿಗೆ ಸುಮಾರು ಎರಡು ಕೋಟಿ ಖರ್ಚು ಮಾಡಿ ಬಾವಿಗಳನ್ನು ಆಳ ಮಾಡಿಸುತ್ತೇವೆಂದೂ ಹೇಳಿದ್ದರು. ಇದುವರೆಗೂ ಯಾವ ಬಾವಿಯ ಕೆಲಸಗಳನ್ನೂ ಇಲ್ಲಿ ಮಾಡಲಿಲ್ಲ ಮತ್ತು ಶೇಕಡಾ 14 ರಷ್ಟು ದುಡ್ಡನ್ನು ಇಲ್ಲಿಗೆ

ವೆಚ್ಚ ಮಾಡಬೇಕೆಂದು ಇದ್ದರೂ, ಕೇವಲ ನಾಲ್ಕರಷ್ಟು ಕೂಡ ಖರ್ಚು ಮಾಡಲಿಲ್ಲ ಮಾನ್ಯ ಚನ್ನಬಸಪ್ಪನವರಲ್ಲಿ ನಾನು ಕೈ ಮುಗಿದು ಕೇಳಿಕೊಳ್ಳುತ್ತೇನೆ. ನಮ್ಮ ಕಡೆ ಜನ ಅನ್ನವಿಲ್ಲದೆ ಸಾಯುವ ಸ್ಥಿತಿ ಬಂದಿದೆ. ಇದರ ಕಡೆಗೆ ತಾವಾದರೂ ಉತ್ತರ ಕೊಡಿ ಇಲ್ಲವೇ ಚೀಫ್ ಮಿನಿಸ್ಟರ್ ಕಡೆಯಿಂದಲಾದರೂ ಉತ್ತರವನ್ನು ಕೊಡಿಸಿ. ನಾನು ಇದರ ಬಗ್ಗೆ ಸುಮಾರು 50–60 ಸಾರಿ ಪದೇ ಪದೇ ಹೇಳುತ್ತಲೇ ಬರುತ್ತಿದ್ದೇನೆ. ಇದರ ಬಗ್ಗೆ ಇಲ್ಲಿ ಸ್ಟೇಟುಮೆಂಟು ಕೊಡುವಾಗ ಉತ್ತರ ಕೊಡುವುದನ್ನು ಕೈಬಿಟ್ಟಿದ್ದಾರೆ. ಇದು ಜನರ ಸಾಯುವ ಪ್ರಶ್ನೆ.

**ಅಧ್ಯಕ್ಷರು** – ಸಾಯುವವರನ್ನು ಯಾರು ಏನು ಮಾಡುವುದಕ್ಕಾಗುವುದಿಲ್ಲ. ಸಾಯುವವರು ಆಡಳಿತ ಪಕ್ಷದವರನ್ನೂ ಬಿಡುವುದಿಲ್ಲ. ಇವರು ವಿರೋಧ ಪಕ್ಷದವರು ಎಂದೂ ಬಿಡುವುದಿಲ್ಲ. ಸಾಯುವವರು ಎಂದಿದ್ದರೂ ಸಾಯುತ್ತಾರೆ. ಅದಕ್ಕೆ ನಾವೇನು ಇಲ್ಲಿ ಮಾಡಬಹುದು? ಮಾನ್ಯ ಸದಸ್ಯರು ಇಲ್ಲಿ ಈ ರೀತಿ ಹೇಳಿದರೆ ಹೇಗೆ? ಸರಕಾರದ ಪರವಾಗಿ ಮಂತ್ರಿಗಳು ಏನು ಉತ್ತರಗಳನ್ನು ಕೊಡಲು ಸಾಧ್ಯವೋ ಅದನ್ನು ಇಲ್ಲಿ ತಿಳಿಸಿದ್ದಾರೆ. ಆದ್ದರಿಂದ ಮಾನ್ಯ ಸದಸ್ಯರು ಸಮಾಧಾನವಾಗಿ ಕುಳಿತು ಅವರು ಹೇಳುವುದನ್ನು ಕೇಳಬೇಕು.

**ಶ್ರೀ ಎಸ್.ವೈ. ಪಾಟೀಲ** – ತಾವು ಯಾರ ಕಡೆಯಿಂದಲಾದರೂ ಸರಿ ಉತ್ತರವನ್ನು ನಮಗೆ ತರಿಸಿಕೊಡಿ ನಾನು ಕೂತುಕೊಳ್ಳುತ್ತೇನೆ.

**ಶ್ರೀ ಹೆಚ್.ಡಿ. ದೇವೇಗೌಡ** – ಶ್ರೀಮಾನ್ ಎಸ್.ವೈ. ಪಾಟೀಲರವರು ಇದನ್ನು ಇವೊತ್ತು ಹೇಳುತ್ತಿಲ್ಲ. ಅವರು ಸ್ವಲ್ಪ ಉದ್ರೇಕವಾಗಿ ಮಾತನಾಡುತ್ತಾರೆ. ಇದು ಅವರ ಸ್ವಭಾವ ಸ್ವಲ್ಪ ತಾವೂ ಇದರ ಬಗ್ಗೆ ಕೇಳಬೇಕು. ಕಳೆದ ಸಾರಿ ಕೂಡ ಸರಕಾರದವರ ಗಮನವನ್ನು ಇದರ ಬಗ್ಗೆ ಸೆಳೆದಾಗ ಒಂದು ರೀತಿಯಾದ ಉತ್ತರ ಕೊಟ್ಟರು ನಾವೆಲ್ಲ ಇದೇ ಸಭೆಯಲ್ಲಿ ಕೇಳಿದಂತೆ ಇಂಡಿ ತಾಲ್ಲೂಕಿನೊಳಗೆ ಇರುವ ಪರಿಸ್ಥಿತಿ ನೋಡಿ ಚೀಫ್ ಮಿನಿಸ್ಟರವರು ಲ್ಯಾಂಡ ಡೆವಲಪ್‌ಮೆಂಟು ಬ್ಯಾಂಕುಗಳ ಮೂಲಕ ಈಗ ಇರತಕ್ಕ ಬಾವಿಗಳನ್ನು ಆಳ ಮಾಡಿಸಲು ಹಣ ಕೊಡಿಸುವ ವಿಚಾರವಾಗಿ ನಾನು ಎಕ್ಸಾಮಿನ್ ಮಾಡುತ್ತೇನೆಂದು ಭರವಸೆ ಕೊಟ್ಟಿದ್ದರು. ಇದು ಸಭೆಯ ರಿಕಾರ್ಡಿನಲ್ಲಿ ಹಾಗೂ ಪ್ರೊಸೀಡಿಂಗ್ಸ್‌ನಲ್ಲೂ ಇದೆ. ಬೇಕಾದರೆ ತಾವು ತರಿಸಿ ನೋಡಬಹುದು. ಆದರೆ ಇವೊತ್ತಿನವರೆಗೂ ಇದರ ಬಗ್ಗೆ ಯಾವ ನಿರ್ಣಯವೂ ಆಗಲಿಲ್ಲ. ಮೈನರು ಇರಿಗೇಷನ್ ಮೂಲಕ ಇದನ್ನು ಮಾಡಲು ಬರುವುದಿಲ್ಲ. ಇದನ್ನು ನಾನೂ ಒಪ್ಪುತ್ತೇನೆ. ಡೆವಲಮೆಂಟು ಇಲಾಖೆ ಚರ್ಚೆಗೆ ಬಂದಾಗ ಸಂಬಂಧಪಟ್ಟ ಬೇಡಿಕೆಗಳ ಬಗ್ಗೆ ಮಾತನಾಡುವಾಗ ಇದರಲ್ಲಿ ಇರಿಗೇಷನ್ ವೆಲ್ಸಗಳೂ ಬರುತ್ತವೆ. ಡೆವಲಪಮೆಂಟು ಬರಬಹುದು. ಆಗ ಉತ್ತರವನ್ನು ಹೇಳಬಹುದು. ಡೆಲವಪ್‌ಮೆಂಟ್ ಲೋನುಗಳ ಮೂಲಕ ಇರುವ ಕಾಲಿ ಬಾವಿಗಳನ್ನು ಆಳ ಮಾಡಲು ಎಷ್ಟು ಹಣ ಕೊಡಲು ಸಾಧ್ಯವಾಯಿತು? ಸರಕಾರ ಇದರ ಬಗ್ಗೆ ಖರ್ಚು ಮಾಡಲು ಸಾಧ್ಯವಾಯಿತೇ ಇಲ್ಲವೇ ಅದನ್ನು ದಯಾಮಾಡಿ ತಿಳಿಸಿ.

**ಶ್ರೀ ಎಸ್.ವೈ. ಪಾಟೀಲ** (ಸಿಂಧಗಿ)– ಸಭಾಧ್ಯಕ್ಷಣಿಯವರೆ, ಕೋ–ಆಪರೇಟಿವ್ ಡಿಮ್ಯಾಂಡ್ ಚರ್ಚೆ ಇಲ್ಲದೆ ಪಾಸಾದುದರಿಂದ, ಇದಕ್ಕೆ ಸಂಬಂಧಪಟ್ಟಂತೆ ನಾಲ್ಕು ಮಾತುಗಳನ್ನು

ಹೇಳುತ್ತೇನೆ. ಮಾನ್ಯ ದೇವೇಗೌಡರು ಹೇಳಿದಂತೆ, ರೈತರ ಉದ್ಧಾರವಾಗಬೇಕು ಎಂದರೆ ಸಹಕಾರ ಸಂಸ್ಥೆಗಳಿಂದ ಎಂದು ಮಂತ್ರಿಗಳು ತಿಳಿದುಕೊಳ್ಳಬೇಕು. ಸಹಕಾರ ಸಂಸ್ಥೆ ಮುಖಾಂತರವಾಗಿ ಪ್ರತಿಯೊಬ್ಬರೂ ತಮ್ಮ ಕಲ್ಯಾಣ ಮಾಡಿಕೊಳ್ಳಬೇಕೇ ಹೊರತು ಅನ್ಯಥಾ ಬೇರೆ ಮಾರ್ಗವಿಲ್ಲ. ಅದರ ಸಲುವಾಗಿ, ನಾನು ಒಂದು ಮಾತನ್ನು ಮಾನ್ಯ ಅಧ್ಯಕ್ಷರ ಮುಖಾಂತರ ನಮ್ರತೆಯಿಂದ ಸೂಚಿಸಬಯಸುತ್ತೇನೆ. ರಾಜ್ಯದ ಮಂತ್ರಿ ಮಂಡಲ ಮತ್ತು ಅದರ ಆಡಳಿತ ಜನತೆಯ ಕಲ್ಯಾಣದ ಸಲುವಾಗಿ ಇರಬೇಕು. ಇರತಕ್ಕ ಸರಕಾರದ ರೂಲ್ಸ್ ಮತ್ತು ನಿಯಮಾವಳಿಗಳು. ತತ್ವ ಸಿದ್ಧಾಂತಗಳು ಇವುಗಳಿಂದ ಜನತೆಯ ಕಲ್ಯಾಣ ಸಾಧನೆಯಾಗದಿದ್ದರೆ, ಅವು ತತ್ವ ಸಿದ್ಧಾಂತಗಳಲ್ಲ, ಅವನ್ನು ಅಳವಡಿಸಿದ್ದು ಪ್ರಜಾ ಸರಕಾರವೂ ಅಲ್ಲ. ಈವೊತ್ತು ಅನೇಕ ಸಂಸ್ಥೆಗಳು ರೈತನ ಕಲ್ಯಾಣದ ಸಲುವಾಗಿ ಕೆಲಸ ಮಾಡುತ್ತಿವೆ ಆಡಳಿತ ಪಕ್ಷದವರು ಯಾವಾಗಲೂ ಬಡವರ ಕಡೆ ಎಂದು ಹೇಳುತ್ತೀರಿ. ಸಿಂದಗಿ ತಾಲ್ಲೂಕಿನ ಬಗ್ಗೆ ಕೋ ಆಪರೇಟಿವ್ ಡಿಪಾರ್ಟ್‌ಮೆಂಟ್ ಏನು ಕೆಲಸ ಮಾಡಿದೆ? ಕೆಲವು ಸಂಸ್ಥೆಗಳನ್ನು ರಿಜಿಸ್ಟರ್ ಮಾಡುವುದು, ಇನ್‌ಸ್ಪೆಕ್ಷನ್ ಮಾಡುವುದು ಅಷ್ಟೆ. ಅದು ಸಹಕಾರ ಸಚಿವರು ಮಾಡುವ ಕೆಲಸವಲ್ಲ. ಬಿಜಾಪುರಕ್ಕೆ ದುಷ್ಕಾಲ ಪೀಡಿತದ ಸಲುವಾಗಿ 63 ಕೋಟಿ ರೂಪಾಯಿ ಖರ್ಚಾಯಿತು, ನಮ್ಮ ರಾಜ್ಯ ದೊಕ್ಕಸ ಖಾಲಿಯಾಯಿತು. ನಮ್ಮ ಜೊತೆಗೆ ಇರುವ ಅವಶ್ಯಕತೆ ಇಲ್ಲ, ಸೆಪರೇಟ್ ಸ್ಟೇಟ್ ಮಾಡಿಕೊಳ್ಳಿ ಎಂದು ಹಳೆಯ ಮೈಸೂರಿನ ಅನೇಕರು ಚುಚ್ಚು ಮಾತಿನಿಂದ ಮಾತನಾಡುತ್ತಿದ್ದಾರೆ.

**ಶ್ರೀ ಎಂ.ವೈ. ಘೋರ್ಪಡೆ** – ಯಾರು ಹೇಳಿದರು?

**ಶ್ರೀ ವೈ.ಎಸ್. ಪಾಟೀಲ** – ಯಾರೇ ಹೇಳಲಿ. ಅವರಿಗೆ ನಾನು ಉತ್ತರ ಹೇಳುತ್ತೇನೆ ಏನೊಂದು ಕೆಲಸವಾಗದಿದ್ದರೂ ಅಡ್ಡಿ ಅಲ್ಲ ಇಲ್ಲ. 50 ವರ್ಷಗಳ ಮೇಲಾದರೂ ಕೆಲಸಗಳಾಗಲಿ ಅದಕ್ಕೂ ಅಡ್ಡಿ ಇಲ್ಲ. ಜನಸತ್ತರೂ ಅಡ್ಡಿಯಿಲ್ಲ, ನಮಗೆ ಕರ್ನಾಟಕದಲ್ಲಿ ಇರುವ ಅಪೇಕ್ಷೆ ಇದೆ. ಉಪವಾಸ ಇದ್ದರೂ ಅಡ್ಡಿಯಿಲ್ಲ ಸಿಂದಗಿ ತಾಲ್ಲೂಕಿನ ಉದ್ಧಾರವಾಗಬೇಕಾದರೆ, ಮಾನ್ಯ ಮಂತ್ರಿಗಳಲ್ಲಿ ಪ್ರಾರ್ಥನೆ ಮಾಡಿಕೊಂಡೆ, ರೋಡ್ಸ್ ಮಾಡಬೇಡಿ, ಮತ್ತೆ ಏನೂ ಮಾಡಬೇಡಿ ಅಪ್ಪರ್ ಕೃಷ್ಣ ಪ್ರಾಜೆಕ್ಟ್ ಪೂರ್ತಿ ಮಾಡಿದರೆ. ಶಾಶ್ವತ ಪರಿಹಾರ ಸಿಗುತ್ತದೆ. ಇದಕ್ಕೆ ಇರಿಗೇಷನ್ ವೆಲ್ಸ್ ಮಾಡಬೇಕು. ಜನರ ಕೈಯಲ್ಲಿ ದುಡ್ಡು ಕೊಡಬಾರದು.

**ಶ್ರೀ ಎಂ.ವೈ. ಘೋರ್ಪಡೆ** – ಮಾನ್ಯ ಸದಸ್ಯರು ಜನ ಸತ್ತರೂ ಅಡ್ಡಿ ಇಲ್ಲ ಎಂದು ಹೇಳಿದರು, ಅವರು ಆ ರೀತಿ ಹೇಳಬಹುದು, ಆದರೆ ಸರಕಾರ ಹಾಗೆ ಹೇಳುವುದಕ್ಕಾಗುವುದಿಲ್ಲ.

**ಶ್ರೀ ವೈ.ಎಸ್. ಪಾಟೀಲ** – ಜನರು ಜೀವಂತವಾಗಿರಬೇಕು, ಹೇಗಳ ರೀತಿಯಲ್ಲಿ ರಾಜ್ಯದ ಜನರು ಇರಬಾರದು. ಇರಬೇಕೆಂದರೆ, ಅನ್ನ ಊಟ ಮಾಡಿ, ನೀರು ಕುಡಿದು, ನಿಮ್ಮಂಥವರು ಬಂದಾಗ ಆಹಾರ ಕೊಡಲಿಕ್ಕೆ ಶಕ್ತಿ ಇರಬೇಕು. ಉಪವಾಸವಿರುವ ಜನರ ಕಷ್ಟ ಹಣಕಾಸಿನ ಮಂತ್ರಿಗಳಾಗಲೀ, ಸಹಕಾರ ಮಂತ್ರಿಗಳಾಗಲೀ. ಅವರಿಗೆ ತಿಳಿಯುವಷ್ಟು ಶಕ್ಯವಿಲ್ಲ. ಡಾಕ್ಟರ್ ಅಂಬೇಡ್ಕರ್‌ರವರು ಹರಿಜನರ ಬಗ್ಗೆ ನಮ್ಮ ಪರಿತಾಪವನ್ನು ಎಷ್ಟು ಆಕ್ರೋಶದಿಂದ ಹೇಳುತ್ತ ಇದ್ದರು ಎನ್ನುವುದು ನಮಗೆಲ್ಲಾ ಗೊತ್ತಿದೆ.

**ಶ್ರೀ ಎಂ.ವೈ. ಘೋರ್ಪಡೆ–** ಉತ್ತರ ಕರ್ನಾಟಕದ ಎಲ್ಲಾ ಜನರೂ ನಮ್ಮ ಬಗ್ಗೆ ಅರ್ಥ ಮಡಿ ಕೊಂಡಿದ್ದಾರೆ. ಮಾನ್ಯ ಸದಸ್ಯರು ಹೇಳುತ್ತಿರುವುದೂ ಜನರಿಗೆ ಅರ್ಥವಾಗುತ್ತದೆ.

**ಶ್ರೀ ಎಸ್.ವೈ. ಪಾಟೀಲ–** ಸಿಂದಗಿ ತಾಲ್ಲೂಕಿನಲ್ಲಿ ಜನ ಚುನಾವಣೆ ಮಾಡುವ ಕಾಲಕ್ಕೆ ತಿಳಿಸಿದ್ದಾರೆ. ಸಿಂದಗಿ ತಾಲ್ಲೂಕನ್ನು ಉತ್ತಮ ಮಟ್ಟದಲ್ಲಿ ಸರಿಪಡಿಸಬೇಕು ಎಂದು ಒತ್ತಾಯ ಮಾಡುವುದಿಲ್ಲ. ಪ್ರಾರ್ಥನೆ ಮಾಡಿಕೊಳ್ಳುತ್ತೇನೆ.

**ಶ್ರೀ ಎಂ.ವೈ. ಘೋರ್ಪಡೆ–**ಜನರು ಸ್ಪಷ್ಟವಾದಂಥ ಉತ್ತರ ಗುಲ್ಬರ್ಗ ಚುನಾವಣೆಯಲ್ಲಿ ಕೊಟ್ಟಿದ್ದಾರೆ.

**ಶ್ರೀ ಎಸ್.ವೈ. ಪಾಟೀಲ –** ಜನರು ಎಲ್ಲಿ ಬುದ್ಧಿವಂತರು ಇದ್ದಾರೆ, ಅಲ್ಲಿ ಮತದಾರರಿಗೆ ಮತದ ಬೆಲೆ ಗೊತ್ತಾಗುತ್ತದೆ ಅಂಥ ಕಡೆ ಅರಿಸಿಬಂದಾಗ ತಿಳಿಯುತ್ತದೆ. ಇನ್ನು ನಮ್ಮಲ್ಲಿ 6500 ಬಾವಿಗಳು ಇವೆ. ಜಿಯಾಲಿಜಿಕಲ ಡಾಕ್ಟರ ರಾಧಾಕೃಷ್ಣ ಅವರು ನಮ್ಮಲ್ಲಿ, ನೀರಿನ ಸಂಪತ್ತು ಇದೆ ಎಂದು ಹೇಳಿದ್ದಾರೆ. ಆದುದರಿಂದ ಅಲ್ಲಿ ಬಾವಿಗಳನ್ನು ತೆಗೆಸಿದರೆ ಸರ್ಕಾರದ ದುಡ್ಡು ಅಪವ್ಯಯವಾಗುವುದಿಲ್ಲ. ಅಲ್ಲಿ ಹಾಲಿ ಏನೇನು ಬಾವಿಗಳು ಇವೆ ಅವುಗಳನ್ನು ಡಿಸಿಲ್ಟಿಂಗ ಮಾಡಿಸಿ, ತೆಗೆದಂಥ ಮಣ್ಣು ಕಲ್ಲು ಮತ್ತೆ ಬಾವಿಯೊಳಗೆ ಬೀಳದಂತೆ ಸುತ್ತಲೂ ಗೋಡೆ ಕಟ್ಟುವುದು ಮತ್ತು ಲೆವಲ ಮಾಡಿಸುವುದು ಈ ಕೆಲಸ ಮಾಡಿಸಬೇಕು. ಅಲ್ಲಿ ಲಿಫ್ಟ್ ಇರಿಗೇಷನ್‌ಗೆ ಅವಕಾಶ ಇಲ್ಲ, ಮೈನರ್ ಇರಿಗೇಷನ್‌ಗೆ ಇಲ್ಲ. ಆದಕಾರಣ ಮೇಜರ ಇರಿಗೇಷನ್ ಕೆಲಸಗಳನ್ನು ಮಾತ್ರ ಮಾಡುತ್ತೇವೆ ಎಂದು ಮುಖ್ಯಮಂತ್ರಿಗಳು ಹೇಳುತ್ತಾ ಬಂದಿದ್ದಾರೆ. ಅದನ್ನು ಮಾಡಿದ ದಿವಸ ನಾನು ಅವರಿಗೆ ಹೂವಿನ ಹಾರ ಹಾಕುವ ಸಲುವಾಗಿ ಹೇಳಿ ಇಟ್ಟಿದ್ದೇನೆ. ಆದರೆ ಹೂವಿನ ಹಾರ ಹಾಕುವ ಪ್ರಸಂಗ ಬರುವುದಿಲ್ಲ ಎಂದು ಕಾಣುತ್ತದೆ. ಇಂಡಿ ತಾಲೂಕು ಸ್ಕೇರ್ ಸಿಟಿ ಏರಿಯಾ ಎನ್ನುವುದು ಮಂತ್ರಿಗಳಿಗೆ ಗೊತ್ತಿದೆ. ಆದಾಗ್ಗೂ ಅಲ್ಲಿ ಏನೊಂದೂ ಕಾರ್ಯಗಳನ್ನು ಮಾಡಿಲ್ಲ. ಆಗಿನ ಬ್ರಿಟಿಷ್ ಸರ್ಕಾರ ಸ್ಕೇರಸಿಟಿ ಸಲುವಾಗಿ ಎಷ್ಟು ಹಣ ಖರ್ಚು ಮಾಡಿದ್ದರು. ತಾವು ಮನಸ್ಸು ಮಾಡಿ 2 ಕೋಟಿ ರೂಪಾಯಿಗಳನ್ನು ಈ 6,500 ಹಳೇ ಬಾವಿಗಳನ್ನು ಡಿಸಿಲ್ಟ ಮಾಡುವುದಕ್ಕೆ ಸಾಲ ಕೊಡಿರಿ. ಡಾಕ್ಟರ್ ರಾಧಾಕೃಷ್ಣ ಅವರ ಅಭಿಪ್ರಾಯ ತೆಗೆದುಕೊಂಡು ಎಲ್ಲಿ ನೀರು ಬರುವುದಿಲ್ಲವೋ ಅಲ್ಲಿಗೆ ಬಿಟ್ಟು ಬಿಡಿ. ಲೆವಿ ರೂಪದಿಂದ ಧಾನ್ಯ ರೂಪದಿಂದ ಯಾರು ಸಾಲ ವಾಪಸ್ಸು ಕೊಡುತ್ತಾರೋ ಅವರಿಗೆ ಮೊದಲು ಸಾಲ ಕೊಡಿ. ಇವರಿಂದ ವಸೂಲು ಮಾಡಿ ಬಂದುದನ್ನು ಮುಂದಿನವರಿಗೆ ಕೊಡಿ. ರೂಲ್ಸ ನಲ್ಲಿ ಚೇಂಜ್ ಮಾಡಿ, ಯಾರು ಸಾಲ ವಾಪಸ್ಸು ಕೊಡುವುದಿಲ್ಲ, ಅವರ ಜಮೀನು ಬೇರೆಯವರಿಗೆ ಹರಾಜಿನ ಮೂಲಕ ಹೋದರೂ ಅಡ್ಡಿ ಇಲ್ಲ, ನೀರು ಇಲ್ಲದ ಬರದ ಭೂಮಿ ಇರಬಾರದು ಎಂದು ಪ್ರಾರ್ಥನೆ ಮಾಡಿಕೊಳ್ಳುತ್ತೇನೆ. ಇನ್ನು ಎಕ್ಸೈಜ್ ನಿಂದ 7ಕೋಟಿ ರೂಪಾಯಿ ಬಂತು ಎಂದು ಮಾನ್ಯ ಮಂತ್ರಿಗಳು ಹೇಳಿದಾಗ ಅವರಿಗೆ ಆನಂದ ಆಗಿರಬಹುದು. ಇನ್ನು ಹೆಲ್ತ್ ಮಿನಿಸ್ಟರು ಎಷ್ಟು ಹಾಸ್ಪಿಟಲ್‌ಗಳನ್ನು ಹೆಚ್ಚು ಮಾಡುತ್ತಾರೋ ರಾಜ್ಯದಲ್ಲಿ ಅಷ್ಟೇ ರೋಗಿಗಳ ಸಂಖ್ಯೆ ಕೂಡ ಅಷ್ಟೇ ಹೆಚ್ಚುತ್ತಿದೆ ಎಂದು ಅರ್ಥವಾಗುತ್ತದೆ. ಅದೇ ರೀತಿ ಎಕ್ಸೈಜಿನಿಂದ ಉತ್ಪತ್ತಿ ಎಷ್ಟರಮಟ್ಟಿಗೆ ಹೆಚ್ಚು ಆಯಿತು ಎಂದರೆ ಅಷ್ಟರಮಟ್ಟಿಗೆ ರಾಜ್ಯದಲ್ಲಿ ಕುಡುಕರ ಸಂಖ್ಯೆ ಜಾಸ್ತಿ ಆಯಿತು ಎಂದು

ಅರ್ಥವಾಗುತ್ತದೆ. ಮಹಾತ್ಮ ಗಾಂಧೀಯವರು ಜೀವಂತ ಇದ್ದಿದ್ದರೆ, ನೀವು ಮಾಡುವುದನ್ನು ನೋಡಿ ವ್ಯಸನ ಪಡುತ್ತಿದ್ದರು ರಾಮಕೃಷ್ಣ ಹೆಗಡೆ ಪಾನನಿರೋಧ ತೆಗೆದುಹಾಕಿದ್ದಾರೆ ಎಂದರೆ ಬಾಕಿಯವರು ಅದೇ ರೀತಿ ಮಾಡಬೇಕಾಗಿಲ್ಲ. ಗಾಂಧೀಜಿಯವರು ಏನು ಆದೇಶ ಕೊಟ್ಟರು ಅದರಂತೆ ಮಾಡಬೇಕು ಎಂದು ಪ್ರಾರ್ಥನೆ ಮಾಡುತ್ತೇನೆ. ಬಾವಿಗಳ ಬಗ್ಗೆ ಮಂತ್ರಿಗಳು ಹೇಳಿದ್ದಾರೆ. ಕೋ-ಆಪರೇಟೀವ್ ಮಿನಿಸ್ಟರ್, ಫೈನಾನ್ಸ್ ಮಿನಿಸ್ಟರು, ಚೀಫ್ ಮಿನಿಸ್ಟರು, ಡಾ. ರಾಧಾಕೃಷ್ಣ, ಡೆವಲಪ್‌ಮೆಂಟ್ ಬ್ಯಾಂಕ್ ಮ್ಯಾನೇಜಿಂಗ್ ಡೈರೆಕ್ಟರು ಮತ್ತು ಆ ಭಾಗದಲ್ಲಿ ಇರುವ ಅಸಿಸ್ಟೆಂಟ್ ಕಮಿಷನರ್ ಕೃಷ್ಣಕುಮಾರರಿಗೆ ಆ ಭಾಗದಲ್ಲಿ ಆಗಿದ್ದ ಪರಿಸ್ಥಿತಿ ಚೆನ್ನಾಗಿ ಗೊತ್ತಿದೆ. ಎಲ್ಲರೂ ಸೇರಿ ಬಾವಿಗಳಿಗೆ ಸಾಲ ಕೊಡುವ ವಿಷಯ ಆಲೋಚನೆ ಮಾಡಬೇಕು. ಖಾಸಗಿ ವ್ಯಕ್ತಿಗಳ ಕೈಯಲ್ಲಿ ಹಣ ಕೊಡಬೇಕು ಎಂದು ನಾನು ಹೇಳುವುದಿಲ್ಲ. ಹಣ ತೆಗೆದುಕೊಂಡವರು ಅನೇಕರು ಅದಕ್ಕಾಗಿ ಆ ಹಣವನ್ನು ಖರ್ಚು ಮಾಡುವುದಿಲ್ಲ. ತೆಗೆದುಕೊಳ್ಳುವುದು ಬಾವಿಗಾಗಿ ಎಂದು, ಖರ್ಚು ಮಾಡುವುದು ಬೇರೆ ಕೆಲಸಕ್ಕೆ, ಈ ಬಗ್ಗೆ ಸರ್ಕಾರ ಎರಡು ಲಕ್ಷ ರೂಪಾಯಿ ಮಂಜೂರು ಮಾಡಿದರೆ, ಸಿಂದಗಿಯಲ್ಲಿರುವ ರೈತರು ಸಾಲ ತೆಗೆದುಕೊಂಡು ಅಲ್ಲೇ ಕುಡಿದುಬಿಡುತ್ತಾರೆ. ಏತಕ್ಕೆ ಹೀಗೆ ಮಾಡುತ್ತೀರಿ ಎಂದು ಕೇಳಿದರೆ ಸರ್ಕಾರ ದುಡ್ಡು ಕೊಟ್ಟಿದೆ, ನಮ್ಮ ದುಡ್ಡು ಇದೆ ನಾವು ಖರ್ಚು ಮಾಡುತ್ತೇವೆ ಎಂದು ಹೇಳುತ್ತಾರೆ. ದುರ್ದೈವದಿಂದ ಮುಖ್ಯಮಂತ್ರಿಗಳಾದ ದೇವರಾಜ ಅರಸರು ಅಲ್ಲಿ ನಮ್ಮ ಕಡೆ ಹುಟ್ಟಲಿಲ್ಲ. ಅವರು ಆ ಭಾಗದಲ್ಲಿ ಹುಟ್ಟಿದ್ದರೆ ಅವರ ಸ್ವಂತ ಹಣದಿಂದ 10 ಬಾವಿಗಳನ್ನು ಆಳ ಮಾಡಿಸುತ್ತಿದ್ದರು. ಮಾನ್ಯ ಸಿದ್ಧವೀರಪ್ಪನವರು ತಮ್ಮ ಮನೆತನದ ಸಹಾಯದಿಂದ ವಿದ್ಯಾಭ್ಯಾಸ ಮಾಡಿದ್ದಾರೆ ಎಂದು ಹೇಳಿದರು. ನಾವು ಏತಕ್ಕೆ ಅಲ್ಲಿ ಹುಟ್ಟಿದೆವೋ ತಿಳಿಯದು, ಆದರೆ ಅದು ನಮ್ಮ ಹಣೆ ಬರಹ, ಸರ್ಕಾರದವರು ನಮ್ಮ ಭಾಗದಲ್ಲಿ ಒಂದು ಚಪ್ಪಲ ಇಂಡಸ್ಟ್ರಿಯನ್ನಾದರೂ ಮಾಡಿದ್ದರೆ ನಾವು ಅಲ್ಲಿ ಹುಟ್ಟಿದ ತಪ್ಪಿಗೆ ಅದರಿಂದ ಹೊಡಿಸಿಕೊಳ್ಳುವುದಕ್ಕಾದರೂ ಆಗುತ್ತಿತ್ತು. ಅದನ್ನೂ ಕೂಡ ಮಾಡಲಿಲ್ಲ. ನಮಗೆ ಅರಸುರವರು ಹೊಸದಾಗಿ ಆರಿಸಿಬಂದಾಗ ಭಾಷಣ ಮಾಡಿದ್ದು ಕೇಳಿ ಆನಂದವಾಯಿತು, ಸಿಂದಗಿ ತಾಲ್ಲೂಕಿನ ಜನರಿಗೆ ಅರಸುರವರ ಮಂತ್ರಿಮಂಡಲದಿಂದ ಪ್ರಯೋಜನವಾಗುತ್ತದೆ ಎಂದು ತಿಳಿದಿದ್ದೆವು. ನಾನು ಆದಿತ್ಯವಾರ ತಮ್ಮ ಕೂಡ ಬಾವಿ ಬಗ್ಗೆ ವಿಚಾರ ಮಾಡುತ್ತೇನೆ. ಈಗ ದುಡ್ಡು ಇಲ್ಲದೇ ಇದ್ದರೆ, ಮೂರು ತಿಂಗಳಿಗೆ ಮಾಡುತ್ತೇನೆ ಎಂದು ಹೇಳಿ, ಸರ್ಕಾರದಲ್ಲಿ ಹಣ ಇದೆ, ಆದರೆ ದೇವರಾಜ್ ಅರಸ್ ಎಸ್.ವೈ. ಪಾಟೀಲರಿಗೆ ಹಣ ತೆಗೆದುಕೊಂಡು ಹೋಗಿ ಎಂದು ಹೇಳುವುದಕ್ಕೆ ಬರುವುದಿಲ್ಲ. ರೂಲ್ಸ್ ಫಾಲೋ ಮಾಡಿ, ಮಾಡಲಿ ಫೈನಾನ್ಸ್ ಮಿನಿಸ್ಟರು ನಮಗೆ ಬೇಕಾದ್ದು ಮಾಡಿಕೊಡದೆ ಭಾಷಣ ಮಾಡುವುದು ಬೇಡ. ನಮ್ಮ ಸಮಸ್ಯೆ ಬಗ್ಗೆ ಹರಿಸುವುದು, ಮುಖ್ಯಮಂತ್ರಿಗಳು, ಅರ್ಥಮಂತ್ರಿಗಳು, ಕೋ-ಆಪರೇಟೀವ್ ಮಿನಿಸ್ಟರು ಡಾ. ರಾಧಾಕೃಷ್ಣ, ಡೆವಲಪ್‌ಮೆಂಟ್ ಮತ್ತು ಅಗ್ರಿಕಲ್ಚರ್ ಮಿನಿಸ್ಟರು ಇನ್ನು ಯಾರಾದರೂ ಕೂಡಿಕೊಂಡು ಆಲೋಚನೆ ಮಾಡಿ, ನಾಳೆ ಆದಿತ್ಯವಾರ ದಿವಸ ನಮ್ಮ ಸಮಸ್ಯೆ ಬಗೆಹರಿಸದೆ ಇದ್ದರೆ, ನಾನು ಧರಣೆ ಮಾಡಬೇಕಾಗುತ್ತದೆ ತಾವು ನಮಗೆ ಸಮಾಧಾನ ಮಾಡಿದರೆ ಸಾಕು, ತಾವು ಬಿಜಾಪೂರದಲ್ಲಿ ಸರ್ವೆ ಮಾಡಿಸುತ್ತೇವೆ

ಎಂದು ಅಪ್ಪಣೆ ಕೊಡಿಸಿದ್ದೀರಿ ಈವೊತ್ತಿನವರೆಗೆ ಆ ಸರ್ವೆ ಆಗಿಲ್ಲ, ನಾಳೆ ನಾನು ಊರಿಗೆ ಹೋಗುವುದಿಲ್ಲ. ನನಗೆ ಸಮಾಧಾನ ಮಾಡಿರಿ. ಸರ್ಕಾರದ ನಿರ್ಧಾರ ಹೇಳಿ. ಫಿಷರಿ ಮಿನಿಸ್ಟರ್ ಕೆ.ಟಿ. ರಾಥೋಡ್ ಇದ್ದಾರೆ ವೀರಶೈವರು ಶಾಕಾಹಾರಿಗಳು ಫಿಷ್ ತಿನ್ನುವುದಿಲ್ಲ. ಸತ್ತರು ಅಡ್ಡಿ ಇಲ್ಲ, ಫಿಷ್ ತಿನ್ನುವುದಿಲ್ಲ. ಲಂಚಗುಳಿತನ ಇದ್ದರೆ, ಅದನ್ನು ನಿರ್ಮೂಲ ಮಾಡಲು ಮೀನ್ ಕೋರ್ಟನ್ನು ತಿದ್ದಿರಿ. ನಮ್ಮ ಕ್ಷೇತ್ರದಲ್ಲಿ ವೆಲ್ ಇರಿಗೇಷನ್ ಪ್ರಾಬ್ಲಂ ಇದೆ. ಇಲ್ಲಿ ಹೊಸ ಬಾವಿಯನ್ನು ತೆಗೆಯುವುದಕ್ಕೆ ಅರ್ಧ ಖರ್ಚು ಮಾಡಿದ್ದಾರೆ. ಅದರಿಂದ ಅಷ್ಟು ಪ್ರಯೋಜನವಾಗುವುದಿಲ್ಲ. ಅದು ಬಿಟ್ಟು ಹಳೇ ಬಾವಿಗಳನ್ನು ರಿಪೇರಿ ಮಾಡಿದರೆ ಉತ್ತಮ ನೀರು ಬರುತ್ತದೆ. ಪ್ರತಿಯೊಂದು ಬಾವಿಯಿಂದ 5 ಎಕರೆ ಹೊಸ ವ್ಯವಸಾಯ ಮಾಡಿದರೆ ಜನರಿಗೆ ಆಹಾರಧಾನ್ಯ ಸಿಗುತ್ತದೆ. ಕೆಟ್ಟ ಬಾವಿಯನ್ನು ಮತ್ತೆ ಮಾಡುವುದು ಬೇಡ. ಬಾವಿಗಳ ಕೆಲಸವನ್ನು ಗವರ್ನ್‌ಮೆಂಟ್ ಏಜೆನ್ಸಿ ಮೂಲಕ ಮಾಡಿಸಬೇಕು. ಸಿಂದಗಿಯಲ್ಲಿ ಡೋಣಿ ರಿವರ್ ಸ್ಕೀಂ ಇದೆ. ಹಿಂದೆ ಚೀಫ್ ಇಂಜನಿಯರ್ ಆಗಿದ್ದ ಬಾಳೆಕುಂದ್ರಿಯವರಿಗೆ ಈ ವಿಷಯ ಗೊತ್ತಿತ್ತು. ಆ ಸ್ಕೀಮನ್ನು ಕಾರ್ಯಗತ ಮಾಡಿಸಿಕೊಡಬೇಕು. ಫೈನಾನ್ಸ್ ಮಿನಿಸ್ಟರ್ ವಿಶಾಲ ಹೃದಯವಾದಿ ಅದಕ್ಕೆ ಬೇಕಾದ ಹಣವನ್ನು ಒದಗಿಸಿಕೊಡಬೇಕು ನಮ್ಮ ಕ್ಷೇತ್ರಕ್ಕೆ ಸಹಾಯ ಮಾಡಬೇಕೆಂದು ಅವರನ್ನು ಕೇಳಿಕೊಂಡು ನನ್ನ ಮಾತನ್ನು ಮುಗಿಸುತ್ತೇನೆ.

## ಬಾವಿಗಳನ್ನು ನಿರ್ಮಿಸುತ್ತೀರಾ?

11ನೇ ಮೇ 1974

**ಶ್ರೀ ಎಸ್.ವೈ. ಪಾಟೀಲ** – ನನ್ನ ಪ್ರಶ್ನೆಯನ್ನು ಯಾವಾಗ ಬಿಡಿಸುತ್ತೇನೆಂದು ತಾವು ಹೇಳಲಿಲ್ಲ?

**ಶ್ರೀ ಡಿ. ದೇವರಾಜ ಅರಸ್** – ಈ ಬಗ್ಗೆ ಮಿಟಿಂಗಿನಲ್ಲಿ ಮಾತನಾಡೋಣ.

**ಶ್ರೀ ಎಸ್. ವೈ. ಪಾಟೀಲ** – ನಮ್ಮಲ್ಲಿ ಈಗ ಇರಿಗೇಷನ್ ವೆಲ್ಸ್ ಎನಿಸುವ ಅವುಗಳನ್ನು ಅಳವಡಿಸಿದರೆ ಹೆಚ್ಚು ಆಹಾರ ಬೆಳೆಯಲು ಅನುಕೂಲವಾಗುತ್ತದೆ. ಅದಕಾರಣ ಸರ್ಕಾರದ ಏಜೆನ್ಸಿ ಮೂಲಕವೇ ಆ ಕೆಲಸವನ್ನು ಮಾಡಿಸಬೇಕೆಂದು ಕೇಳಿಕೊಳ್ಳುತ್ತೇನೆ.

**ಶ್ರೀ ಡಿ. ದೇವರಾಜ್ ಅರಸ್** – ಈ ಹಿಂದೆ ಬಾವಿಗಳನ್ನು ಅಳವಡಿಸಲು ಸಾಲಕೊಡಲಾಗಿದೆ.

**ಶ್ರೀ ಎಸ್.ವೈ. ಪಾಟೀಲ** – ಆ ಹಣವನ್ನು ಬಡತನಕ್ಕಾಗಿ ಉಪಯೋಗ ಮಾಡಿಕೊಂಡು ಬಿಟ್ಟರು. ಅದಕಾರಣ ಸಾಯಿಲ ಕನ್‌ಸರ್‌ವೇಷನ್ ವರ್ಕ್ಸನ್ನು ಸರ್ಕಾರದವರು ಮಾಡಿಸುವ ರೀತಿಯಲ್ಲಿ ಈ ಕೆಲಸವನ್ನು ಸಹ ಸರ್ಕಾರದವರೇ ಮಾಡಿಸಬೇಕೆಂದು ಕೇಳಿಕೊಳ್ಳುತ್ತೇನೆ.

**ಶ್ರೀ ಡಿ. ದೇವರಾಜ ಅರಸ್** – ಸಾಲವಾಗಿ ಕೊಟ್ಟ ಹಣ ಯಾವ ರೀತಿ ವ್ಯರ್ಥವಾಯಿತು. ಎಂಬುದನ್ನು ನೋಡಬೇಕಾಗಿದೆ. ಆ ಬಗ್ಗೆ ಲೆಕ್ಕ ತರಿಸುತ್ತೇನೆ.

**ಶ್ರೀ ಎಸ್.ವೈ. ಪಾಟೀಲ** – ಮತ್ತೆ ಈ ಪ್ರಶ್ನೆಯನ್ನು ಯಾವ ರೀತಿ ಬಿಡಿಸುತ್ತೀರಿ?

**ಶ್ರೀ ಡಿ. ದೇವರಾಜ ಅರಸ್** – ತಾವು ಇದನ್ನು 5 ನೇ ಸಲ ಹೇಳುತ್ತಿದ್ದೀರಿ. ಹೋದ ಸಲ ತಾವು ಈ ವಿಚಾರವನ್ನು ಹೇಳಿದಾಗ ನಾನು ಶ್ರೀ ಡಿ.ಪಿ. ಧರ್ ಅವರ ಹತ್ತಿರ ಮಾತನಾಡಿ ಪ್ಲಾನಿಂಗ್ ಕಮಿಷನ್ ನಿಂದ 2 ಕೋಟಿ ರೂಪಾಯಿಗಳನ್ನು ಪಡೆದುಕೊಂಡು ಅದನ್ನು ಬಾವಿಗಳನ್ನು ಆಳಮಾಡಿಸುವುದಕ್ಕಾಗಿ ಇಯರ್ ಮಾರ್ಕ್ ಮಾಡಲಾಗಿತ್ತು. ಮತ್ತು ಹೆಚ್ಚಿನ ಹಣವನ್ನು ಈ ಭಾಗದಲ್ಲಿಯೇ ಖರ್ಚು ಮಾಡಲಾಗಿದೆ.

**ಶ್ರೀ ಹೆಚ್.ಡಿ. ದೇವೇಗೌಡ** – ಸರ್ಕಾರದವರೇ ಆ ಬಾವಿಗಳನ್ನು ಆಳಮಾಡಿಸಬೇಕೆಂದು ಮಾನ್ಯ ಸದಸ್ಯರು ಹೇಳುತ್ತಿದ್ದಾರೆ.

**ಶ್ರೀ ಡಿ. ದೇವರಾಜ ಅರಸ್** – ಸ್ವಂತ ಬಾವಿಗಳ ಕೆಲಸವನ್ನು ಕೈಗೆತ್ತಿಕೊಳ್ಳಲು ಹೇಗೆ ಸಾಧ್ಯ? ಒಂದೇ, ಎರಡೇ, ಮೂರೇ ಮಾಡಿಸುವುದಕ್ಕೆ, ಅಲ್ಲಿ ಸಾವಿರಾರು ಬಾವಿಗಳು ಇವೆ ಅವುಗಳನ್ನೆಲ್ಲಾ ಮಾಡಿಸುವುದು ಕಷ್ಟವಿದೆ ಇತ್ತು ಅದರ ಸೂಕ್ಷ್ಮತೆಯನ್ನು ನೋಡಬೇಕಾಗಿದೆ.

**ಶ್ರೀ ಎಸ್.ವೈ. ಪಾಟೀಲ** – ಮತ್ತೆ ಯಾವ ರೀತಿ ಮಾಡುವುದು?

**ಶ್ರೀ ಎಂ.ವೈ. ಘೋರ್ಪಡೆ** – ಮಾನ್ಯ ಅಧ್ಯಕ್ಷರೇ 5 ನಿಮಿಷಗಳಲ್ಲಿ ನಾನು ಉತ್ತರ ಹೇಳಬೇಕೆಂದು ಇದ್ದೆ. ಕರ್ನಾಟಕ ಸಂಪ್ರದಾಯದ ಪ್ರಕಾರ ಅಪ್ರೋಪ್ರಿಯೇಷನ್ ಬಿಲ ಈ ಸಭೆಯ ಮುಂದೆ ಬಂದಾಗ ಇದರ ಮೇಲೆ ದೀರ್ಘವಾದ ಚರ್ಚೆಯಾಗಿ ಅದಕ್ಕೆ ದೀರ್ಘವಾದ ಉತ್ತರ ಹೇಳುವ ಸಂಪ್ರದಾಯವಿಲ್ಲ ಆದರೂ ಕೂಡ ಬೇರೆ ಏನೇನೋ ಉದ್ದೇಶಗಳಿಂದ ವಿರೋಧ ಪಕ್ಷದ ನಾಯಕರು ಹಾಗೂ ಕೆಲವು ಮಾನ್ಯ ಸದಸ್ಯರು ಭಾಷಣ ಮಾಡಿದ್ದಾರೆ. ಮತ್ತೆ ಸಹಕಾರ ಇಲಾಖೆಯ ಬಗೆಗೆ ಚರ್ಚೆ ಆಗಿರಲಿಲ್ಲ ಎಂದು ಅದರ ಬಗ್ಗೆ ಚರ್ಚೆ ಮಾಡುವ ಉದ್ದೇಶದಿಂದ ಇಷ್ಟೊತ್ತು ಅವರು ಮಾತನಾಡಿದ್ದಾರೆ. ಆ ಚರ್ಚೆಗೆ ಸಂಬಂಧಪಟ್ಟ ಹಾಗೆ ಮಾನ್ಯ ಸಹಕಾರ ಮಂತ್ರಿಗಳು ಉತ್ತರವನ್ನು ಹೇಳಿದ್ದಾರೆ. ಇದೇ ಸಂದರ್ಭದಲ್ಲಿ ಮಾನ್ಯ ಮುಖ್ಯಮಂತ್ರಿಗಳು ರಾಜ್ಯಕ್ಕೆ ಸಂಬಂಧಪಟ್ಟ ಕೆಲವು ಮುಖ್ಯ ವಿಷಯಗಳಿಗೆ ಉತ್ತರ ಕೊಡುತ್ತಾ ಹೇಳಿ ವಿವರಗಳನ್ನು ಕೊಟ್ಟಿದ್ದಾರೆ. ಆದ್ದರಿಂದ ನಾನು ಬೇರೆ ಬೇರೆ ಇಲಾಖೆಗಳ ಬಗ್ಗೆ ಹೇಳಿರತಕ್ಕ ವಿಷಯಗಳ ಬಗ್ಗೆ ನಾನು ಉತ್ತರವನ್ನು ಹೇಳುವುದಕ್ಕೆ ಪ್ರಯತ್ನ ಮಾಡುವುದಿಲ್ಲ. ವಿರೋಧ ಪಕ್ಷದ ನಾಯಕರು ನಮ್ಮ ರಾಜ್ಯದ ಹಣಕಾಸಿನ ಪರಿಸ್ಥಿತಿಯ ಬಗ್ಗೆ ಪುನಃ ಕಳವಳವನ್ನು ವ್ಯಕ್ತಮಾಡಿದ್ದಾರೆ. ನಾನು ಸ್ಪಷ್ಟವಾಗಿ ಹೇಳುತ್ತೇನೆ ಅಪ್ರೋಪ್ರಿಯೇಷನ್ ಬಿಲ್ ಬಂದಾಗ ಇದರ ಬಗ್ಗೆ ಚರ್ಚೆ ಮಾಡುವುದಕ್ಕೆ ನ್ಯಾಯವಾಗಿ ಅವಕಾಶ ಇರುವುದಿಲ್ಲ. ಡಿಪಾರ್ಟ್‌ಮೆಂಟ್‌ಗಳ ಬೇಡಿಕೆಗಳು ಬಂದಾಗ ಸಾಕಷ್ಟು ಚರ್ಚೆ ಮಾಡುವುದಕ್ಕೆ ಅವಕಾಶ ಇರುತ್ತದೆ. ಆದರೂ ಕೂಡ ಹಣಕಾಸಿನ ಪರಿಸ್ಥಿತಿಯ ಬಗ್ಗೆ ನಾನು ಈ ಸಭೆಗೆ ಬಹಳ

ಸ್ಪಷ್ಟವಾಗಿ ಹೇಳುತ್ತೇನೆ. ಇದಕ್ಕಿಂತ ಮುಂಚೆ ಇವರ ಬಗ್ಗೆ ಸ್ಪಷ್ಟವಾದ ಒಂದು ಹೇಳಿಕೆಯನ್ನು ಕೊಟ್ಟಿದ್ದೇನೆ. ಇದರಲ್ಲಿ ಎಲ್ಲಾ ವಿವರಗಳನ್ನು ಕೊಟ್ಟಿದ್ದೇನೆ. ಇದರಲ್ಲಿ ಯಾವ ಮುಚ್ಚುಮರೆಯೂ ಇಲ್ಲ. ಆದಕಾರಣ ರಾಜ್ಯದ ಹಣಕಾಸಿನ ಪರಿಸ್ಥಿತಿಯ ಬಗ್ಗೆ ಯಾವ ಒಂದು ವಂಚನೆಯೂ ಕೂಡ ಸರ್ಕಾರದ ವತಿಯಿಂದ ಯಾರಿಗೂ ಮಾಡಿಲ್ಲ ಎಂದು ಹೇಳಬೇಕಾಗುತ್ತದೆ. ಮಾನ್ಯ ವಿರೋಧಪಕ್ಷದ ನಾಯಕರು ಮಾತನಾಡುತ್ತಾ ಏನೇನೋ ಮುಚ್ಚು ಮರೆಮಾಡಿದ್ದಾರೆ ಎಂದು ಹೇಳಿದ್ದಾರೆ.

## ದಯವಿಟ್ಟು ಬಂದು ನೋಡಿ

13ನೇ ಆಗಸ್ಟ್ 1974

**ಶ್ರೀ ಎಸ್.ವೈ. ಪಾಟೀಲ** – ಮಾನ್ಯ ಸಭಾಪತಿಯವರೇ, ಕೆಲವು ಕಡೆಗಳಲ್ಲಿ ಅತಿಯಾಗಿ ಮಳೆಯಾಗಿದ್ದರೆ, ನಮ್ಮ ಬಿಜಾಪುರ ಜಿಲ್ಲೆಯಲ್ಲಿ ಮಾತ್ರ ಸಾಕಷ್ಟು ಮಳೆಯಾಗದೆ ತೊಂದರೆಯಾಗಿದೆ. ನಮ್ಮ ಜಿಲ್ಲೆ ಯಾವಾಗಲೂ ಬರಗಾಲಕ್ಕೆ ತುತ್ತಾಗುತ್ತಿರುತ್ತದೆ. ಸಧ್ಯಕ್ಕೆ ಅಪ್ಪರ ಕೃಷ್ಣಾ ಯೋಜನೆ ಮುಗಿಯುವ ಸ್ಥಿತಿಯಲ್ಲಿ ಇಲ್ಲ. ಡೌನ್ ರಿವರ್ ಸ್ಕೀಮ್ ಬಗ್ಗೆ ಯಾದರೂ ಒಂದು ಸರ್ವೆ ನಡೆಸಿ ಎಂದು ಕೇಳಿಕೊಂಡರೂ ಸಹ ಅದರ ಬಗ್ಗೆ ಯಾವ ಕ್ರಮವನ್ನೂ ತೆಗೆದುಕೊಂಡಿಲ್ಲ. ನಮ್ಮ ಭಾಗದಲ್ಲಿ ಮೈನರ್ ಇರಿಗೇಷನ್ ಸ್ಕೀಮುಗಳನ್ನು ತೆಗೆದುಕೊಳ್ಳುವುದಕ್ಕೆ ಸೂಕ್ತವಾದ ಸೈಟುಗಳು ಇಲ್ಲ. ಏನಿದ್ದರೂ ನೀರಾವರಿ ಬಾವಿಗಳ ಮೂಲಕವೇ ವ್ಯವಸಾಯ ಮಾಡಬೇಕಾಗಿದೆ. ಬಿಜಾಪುರ ಜಿಲ್ಲೆಯ ಬಾಗಲಕೋಟೆಯಲ್ಲಿ ಸ್ಪಿನ್ನಿಂಗ್ ಮಿಲ ಗಳಿವೆ. ಮುದ್ದೇಬಿಹಾಳ್ ದಲ್ಲಿ ಸಿಮೆಂಟ್ ಕಾರ್ಖಾನೆ ಬರುವುದಿದೆ. ಆದರೆ ನಮ್ಮ ತಾಲ್ಲೂಕನಲ್ಲಿ ಯಾವ ಒಂದು ಅನುಕೂಲವೂ ಇಲ್ಲ.

**ಉಪಾಧ್ಯಕ್ಷರು** – ಈ ಸಲ ನಿಮ್ಮ ಕಡೆ ಚೆನ್ನಾಗಿ ಮಳೆಯಾಗಿದೆ ಅಲ್ಲವೇ?

**ಶ್ರೀ ಎಸ್.ವೈ. ಪಾಟೀಲ** – ಈ ಸಲ ಮಳೆಯಾಯಿತು. ಆದರೆ ಬಿತ್ತನೆ ಮಾಡಿದ ಮೇಲೆ ಸರಿಯಾಗಿ ಮಳೆ ಬರದ ಕಾರಣ ಬೆಳೆಗಳೆಲ್ಲಾ ಹಾಳಾಯಿತು. ಇದರಿಂದ ರೈತರಿಗೆ ಬಹಳಷ್ಟು ಲುಕ್ಸಾನಾಗಿದೆ. ಅದೇ ಮಂಗಳೂರು ಜಿಲ್ಲೆಯಲ್ಲಿ ನೆರೆಹಾವಳಿಯಿಂದ ಕೋಟ್ಯಾಂತರ ರೂಪಾಯಿಗಳಷ್ಟು ಹಣ ಲುಕ್ಸಾನಾಗಿದೆ ಎಂದು ಹೇಳುತ್ತಿದ್ದಾರೆ. ನನ್ನ ಅಭಿಪ್ರಾಯದಲ್ಲಿ ಈ ರೀತಿ ನೆರೆಹಾವಳಿ ಬಂದು ಮನುಷ್ಯ ಒಮ್ಮೆಗೆ ಸಾಯುವುದು ಸುರಕ್ಷಿತ ಎಂದು ಕಾಣುತ್ತದೆ. ಏಕೆಂದರೆ ನಮ್ಮ ಭಾಗದಲ್ಲಿ ಕಾಲಕ್ಕೆ ಸರಿಯಾಗಿ ಮಳೆಯಾಗದಿರುವ ಕಾರಣ ಮನುಷ್ಯರು ಟಿ.ಬಿ. ಪೇಷಂಟ್ ತರಹ ಇದ್ದಾರೆ. ಈ ರೀತಿ ಟಿ.ಬಿ. ಪೇಷಂಟ್ ತರಹ ಕೈ ಕಾಲು ಕಳೆದುಕೊಂಡು, ಕಣ್ಣು ಕಳೆದುಕೊಂಡು ಜೀವನ ಮಾಡುವುದು ಕಠಿಣ ಪರಿಸ್ಥಿತಿ ಇದೆ.

**ಉಪಾಧ್ಯಕ್ಷರು** – ಮಾನ್ಯ ಸದಸ್ಯರು ಅಷ್ಟು ಸಿಟ್ಟು ಮಾಡಬಾರದು

**ಶ್ರೀ ಎಸ್.ವೈ. ಪಾಟೀಲ** – ಅದು ದುಃಖದ ಪ್ರತಿಕ್ರಿಯೆ. ನಮ್ಮ ಇಂಡಿ ಮತ್ತು ಸಿಂದಗಿಯಲ್ಲಿರುವ ಪರಿಸ್ಥಿತಿಯನ್ನು ಅರಿತುಕೊಳ್ಳಬೇಕಾದರೆ ಕ್ಯಾಬಿನೆಟ್ ದರ್ಜೆಯ

ಮಂತ್ರಿಗಳೊಬ್ಬರು ಅಲ್ಲಿಗೆ ಬಂದು ಎರಡು ದಿವಸ ಕ್ಯಾಂಪ್ ಮಾಡಿದರೆ ಒಳ್ಳೆಯದು. ಆ ರೀತಿ ಮಾಡದೆ ಕೇವಲ ಒಂದೆರಡು ಗಂಟೆಗಳ ಭೇಟಿಕೊಟ್ಟರೆ ಅಲ್ಲಿನ ಪರಿಸ್ಥಿತಿ ಸಂಪೂರ್ಣವಾಗಿ ಅರಿವಾಗುವುದಿಲ್ಲ. ಬೇಕಾದರೆ ಮುಖ್ಯಮಂತ್ರಿಗಳು ಅಲ್ಲಿಯ ಪರಿಸ್ಥಿತಿ ತಿಳಿದುಕೊಳ್ಳಲು ಮುಗ್ಗಂ ಸಾಹೇಬರನ್ನು ಬೇಕಾದರೆ ಕಳಿಸಿಕೊಡಲಿ. ಆ ರೀತಿ ಮಾಡದೆ 4 ಕೋಟಿ ರೂಪಾಯಿಗಳ ಯೋಜನೆಯನ್ನು ಆ ಜಿಲ್ಲೆಯಲ್ಲಿ ತೆಗೆದುಕೊಂಡಿದ್ದೇವೆಂದು ಹೇಳುವುದಾದರೆ, ಅದರಿಂದ ನಮ್ಮ ಇಂಡಿ ಮತ್ತು ಸಿಂಧಗಿಗೆ ಒಂದು ಪೈಸೆಯಷ್ಟು ಸಹ ಉಪಯೋಗವಾಗುವುದಿಲ್ಲ. ಅಪ್ಪರ್ ಕೃಷ್ಣಾ ಪ್ರಾಜೆಕ್ಟ್ ಸಹ ಜಾಗ್ರತೆ ಆಗುವುದಿಲ್ಲ. ಅದಕ್ಕಾಗಿ ಆ ಜಿಲ್ಲೆಯಲ್ಲಿ ಹುಟ್ಟಿದ ತಪ್ಪಿಗಾಗಿ ಹೊಡೆದುಕೊಳ್ಳಲು ಒಂದು ಲೆದರ್ ಫ್ಯಾಕ್ಟರಿಯನ್ನಾದರೂ ತೆರೆಯಿರಿ ಎಂದು ನಾನು ಈ ಹಿಂದೆಯೇ ಹೇಳಿದ್ದೇನೆ. ಕಳೆದ ವರ್ಷ ನಮ್ಮ ಭಾಗದಲ್ಲಿ ದುಷ್ಕಾಲ ಪರಿಸ್ಥಿತಿ ಬಂದಾಗ ಸರ್ಕಾರದವರು ಒಂದು ಕೋಟಿ ರೂಪಾಯಿಗಳನ್ನು ಖರ್ಚು ಮಾಡಿ ಪರಿಹಾರ ಕಾಮಗಾರಿ ಕೆಲಸವನ್ನು ತೆಗೆದುಕೊಂಡರು. ಆದರೆ ಅದರಿಂದ ಜನರಿಗೆ ಶಾಶ್ವತವಾದಂಥ ಪರಿಹಾರ ಸಿಗಲಿಲ್ಲ. ಆ ಭಾಗದ ಜನರು ಕಳೆದ 800 ವರ್ಷಗಳಿಂದಲೂ ಸಹ ಬರಗಾಲದಿಂದ ನರಳುತ್ತಿದ್ದಾರೆ. ಶಾಶ್ವತವಾದ ಪರಿಹಾರವನ್ನು ಒದಗಿಸುವ ಸಲುವಾಗಿ ಸರ್ಕಾರದವರು ಯಾವ ಯೋಜನೆಗಳನ್ನು ಸಹ ಕೈಗೊಳ್ಳುತ್ತಿಲ್ಲ. ಶಾಶ್ವತವಾದ ಪರಿಹಾರವನ್ನು ಒದಗಿಸುವ ಬಗ್ಗೆ ಸೂಚನೆಗಳನ್ನು ಮಾಡುತ್ತಿದ್ದೇನೆ. ಆ ಭಾಗದಲ್ಲಿ ವೆಲ ಇರಿಗೇಷನ್ ಸ್ಕೀಮ್ ಬಗ್ಗೆ ಒಂದು ಸರ್ವೆಯನ್ನು ಮಾಡಿಸಬೇಕು. ಅದನ್ನು ಮಾಡಿಸುವುದಕ್ಕೆ ಸಾಧ್ಯವಾಗದಿದ್ದರೆ, ಪ್ರತಿ ರೈತರಿಗೆ ಬಾವಿ ಆಳವಡಿಸಿಲು 3 ಸಾವಿರ ರೂಪಾಯಿಗಳ ಸಾಲವನ್ನು ಮತ್ತು 5 ಸಾವಿರ ರೂಪಾಯಿಗಳ ಸಬ್ಸಿಡಿಯನ್ನು ಕೊಡಿ, ಸಾಲದ ಹಣವನ್ನು ಹಿಂದುಗಡೆಯಿಂದ ವಸೂಲಿ ಮಾಡಿ. ಅದೂ ಸಾಧ್ಯವಾಗದಿದ್ದರೆ ಸೇತುವೆಗಳನ್ನು ಕಟ್ಟಿಸುವ ಸಲುವಾಗಿ ಒಂದು ಕಾರ್ಪೋರೇಷನ್ ಮಾಡಿರುವಂತೆ ಈ ಕೆಲಸವನ್ನು ಮಾಡಿಸಲು ಒಂದು ಕಾರ್ಪೊರೇಷನ್ ರಚನೆ ಮಾಡಿ. ನಮ್ಮ ಜಿಲ್ಲೆಯ ಭೂಮಿ ಬಹಳ ಫಲವತ್ತಾಗಿದೆ. ಆದರೆ ನೀರಾವರಿ ಸೌಕರ್ಯವಿಲ್ಲ, ಮಾನ್ಯ ಮುಖ್ಯಮಂತ್ರಿಗಳು ಅಲ್ಲಿಗ ಬಂದು ಎರಡು ದಿವಸ ಮೊಕ್ಕಾಂ ಮಾಡಿದರೆ ಅಲ್ಲಿನ ಜನರ ಪರಿಸ್ಥಿತಿ ತಿಳಿಯುತ್ತದೆ. ಇಂಡಿ ಮತ್ತು ಸಿಂಧಗಿಯಲ್ಲಿ ಮೈನರ್ ಇರಿಗೇಷನ್ ಸ್ಕೀಮುಗಳನ್ನು ತೆಗೆದುಕೊಳ್ಳುವುದಕ್ಕೆ ಅವಕಾಶವಿಲ್ಲ. ಏನಿದ್ದರೂ ವೆಲ ಇರಿಗೇಷನ್ ಮೂಲಕವೇ ವ್ಯವಸಾಯ ಮಾಡಬೇಕಾಗಿದೆ. ನಮ್ಮಲ್ಲಿ ಸಾವಿರ ಬಾವಿಗಳಿವೆ. ಇವುಗಳನ್ನು ಸರಿಪಡಿಸಲು ಸರ್ಕಾರದ ಹತ್ತಿರ ಹಣ ಇಲ್ಲದಿದ್ದರೆ, ಆ ತಾಲ್ಲೂಕಿನ ಜನರ ಮೇಲೆ ಸ್ಪೆಷಲ ಟ್ಯಾಕ್ಸ್ ಹಾಕುವುದರ ಮೂಲಕವಾದರೂ ಹಣ ಸಂಗ್ರಹ ಮಾಡಿ ಈ ಕೆಲಸವನ್ನು ಮಾಡಿಸಬೇಕು, ಏಕೆಂದರೆ ಈ ಬಾಬಿಗೆ ವರ್ಲ್ಡ್ ಬ್ಯಾಂಕ್‌ನವರು ಸಹ ಸಹಾಯ ಮಾಡುವ ಸ್ಥಿತಿಯಲ್ಲಿ ಇಲ್ಲ. ಆದಕಾರಣ ಸರ್ಕಾರದವರೇ ಜಿಯಲಾಜಿಕಲ ಡಿಪಾರ್ಟ್‌ಮೆಂಟ್‌ನವರಿಂದ ಒಂದು ಸರ್ವೆ ರಿಪೋರ್ಟ್ ತರಿಸಿಕೊಂಡು ಆ ಕೆಲಸವನ್ನು ಮಾಡಿಸಬೇಕು ನಮ್ಮ ಭಾಗದಲ್ಲಿರುವ ರಸ್ತೆಗಳ ಪರಿಸ್ಥಿತಿಯೂ ಸಹ ಬಹಳ ಕೆಟ್ಟಿದೆ. ಅವುಗಳನ್ನು ರಿಪೇರಿ ಮಾಡಿಸಬೇಕೆಂದು ಹೇಳುತ್ತೇನೆ.

ಈಗ ನಮ್ಮ ಕಡೆ ಮುಂಗಾರು ಪೀಕು ಬರುವುದಿಲ್ಲ ನಿಧಾನವಾಗಿ ಮಳೆ ಬಿದ್ದುದರಿಂದ ನಮ್ಮ ಕಡೆ ಸರಿಯಾಗಿ ಬೆಳೆ ಆಗದಿದ್ದರೂ ಕುಡಿಯುವ ನೀರಿನ ಸಮಸ್ಯೆ ಈಗ ಸಧ್ಯಕ್ಕೆ ಇಲ್ಲ.

ಆದರೆ ಯಾವಾಗಲೂ ನಮ್ಮ ಜಿಲ್ಲೆಯ ಎರಡು ತಾಲ್ಲೂಕುಗಳಲ್ಲಿ ಸಿಂಧಗಿ ಮತ್ತು ಇಂಡಿಯಲ್ಲಿ ನೀರಿಗೆ ಅಭಾವ ಇರುವುದರಿಂದ ಯಾರಾದರೂ ಒಬ್ಬರನ್ನು ಜವಾಬ್ದಾರಿಯಾದ ಕ್ಯಾಬಿನೆಟ್ ದರ್ಜೆಯ ಮಂತ್ರಿಗಳನ್ನು ಹಾಕಿ ಅವರಿಗೆ ತಕ್ಕ ಸೌಕರ್ಯಗಳನ್ನು ಮಾಡಿಕೊಡಿ. ಇಲ್ಲವೇ ಹೋದರೆ ನಮಗೆ ಬೇರೆ ಉಪಾಯವಿಲ್ಲ ಉಪವಾಸ ಮಾಡಬೇಕಾಗುತ್ತದೆ. ಈ ಹಿಂದೆ ನಮ್ಮ ಸ್ನೇಹಿತರಾದ ಬಕ್ಕಾರಿಯವರೊಬ್ಬರು ಹೇಳಿದಂತೆ ಕಲ್ಲು ಹೊಡೆಯುವರನ್ನು ಕೇಳುತ್ತೀರಿ. ಇಲ್ಲದೇ ಇದ್ದವರನ್ನು ಅಲಕ್ಷ್ಯ ಮಾಡುತ್ತೀರಿ. ಇದಕ್ಕೆ ನನ್ನದು ಒಂದೇ ಸಲಹೆ. ಅದು ಏನೆಂದರೆ ವೆಲ್ ಇರ್ರಿಗೇಶನ್ ಮಾಡಿ ನಮ್ಮ ಈ ಎರಡು ತಾಲ್ಲೂಕಿಗೆ ಅನುಕೂಲ ಮಾಡಿಕೊಡಿ ನಮ್ಮಲ್ಲಿ ಫ್ಲೋನರ್ ಇರ್ರಿಗೇಷನ್ ಮಾಡುವುದಕ್ಕೆ ಸಾಧ್ಯವಾಗುವುದಿಲ್ಲ. ಈ ವೆಲ ಇರ್ರಿಗೇಷನ್ ಮಾಡುವುದಕ್ಕೆ ಸರ್ಕಾರದಿಂದ ಒಬ್ಬ ಜವಾಬ್ದಾರಿ ಅಧಿಕಾರಿಯನ್ನು ಹಾಕಿ ಇದಕ್ಕೆ ಏನಾದರೂ ಒಂದು ಸ್ಕೀಮ್ ಮಾಡಿ ಆ ರೈತರನ್ನು ಉದ್ಧಾರ ಮಾಡಿರಿ ಎಂದು ನಾನು ಅಧ್ಯಕ್ಷರ ಮುಖಾಂತರ ಶ್ರೀಮಾನ್ ಚೆನ್ನಪ್ಪನವರನ್ನು ಕೈಮುಗಿದು ಕೇಳಿಕೊಳ್ಳುತ್ತೇನೆ. ಈ ವಿಷಯವಾಗಿ ಇದೇ ನನ್ನ ಕೊನೆಯ ಭಾಷಣ, ದಯವಿಟ್ಟು ಮತ್ತೊಮ್ಮೆ ನಾನು ಮಾತನಾಡುವುದಕ್ಕೆ ಬರುವುದಿಲ್ಲ. ನಿಮ್ಮಲ್ಲಿ ದುಡ್ಡು ಇರದಿದ್ದರೆ ಬ್ಯಾಂಕಿನಲ್ಲಾಗಲಿ ಅಥವಾ ದುಡ್ಡು ಇದ್ದವರ ಕಡೆ 10 ವರ್ಷದವರೆಗೆ ಅವರು ಎಷ್ಟು ಕೊಡುತ್ತಾರೋ ಅದರ ಎರಡು ಪಟ್ಟುಕೊಡುತ್ತೇವೆ ಎಂದು ಹೇಳಿಯಾದರೂ ಅವರಲ್ಲಿ ದುಡ್ಡು ತೆಗೆದುಕೊಂಡು ನಮ್ಮ ತಾಲ್ಲೂಕಿನ ರೈತರುಗಳಿಗೆ ವೆಲ ಇರ್ರಿಗೇಷನ್ ಸೌಲಭ್ಯ ಮಾಡಿ ಕೊಡಿರಿ, ನಮ್ಮ ಬಿಜಾಪುರ ಜಿಲ್ಲೆಯನ್ನು ಅಲಕ್ಷ್ಯ ಮಾಡಬೇಡಿರಿ. ನಾನು ಇಲ್ಲಿಗೆ ಬೆಗ್ ಮಾಡುವುದಕ್ಕೆ ಬಂದಿಲ್ಲ. ದಯವಿಟ್ಟು ತಮ್ಮನ್ನು ಮತ್ತೊಮ್ಮೆ ಪ್ರಾರ್ಥಿಸಿಕೊಳ್ಳುತ್ತೇನೆ. ಅವರಿಗೆ ಇರುವ ಈ ಗುಂಡಾತರವನ್ನು ಸುಧಾರಿಸದೇ ಹೋದರೆ ನಮಗೂ ಗಂಡಾಂತರ ನನ್ನನ್ನು ವೃಥಾ ತೊಂದರೆಗೆ ಈಡು ಮಾಡಬೇಡಿ ಎಂದು ಪ್ರಾರ್ಥಿಸಿಕೊಂಡು ಮಾನ್ಯ ಉಪಾಧ್ಯಕ್ಷರು ನನಗೆ ಎರಡು ಮಾತುಗಳನ್ನಾಡಲು ಅವಕಾಶ ಕೊಟ್ಟಿದ್ದಕ್ಕಾಗಿ ಅವರಿಗೆ ವಂದಿಸಿ ನನ್ನ ಮಾತನ್ನು ಮುಗಿಸುತ್ತೇನೆ.

## ಕರ್ನಾಟಕ ರಾಜ್ಯದ ಅಭಿವೃದ್ಧಿ

2ನೇ ಆಗಸ್ಟ್ 1974

**ಶ್ರೀ ಎಸ್.ವೈ. ಪಾಟೀಲ–** ಮಾನ್ಯ ಸಭಾಧ್ಯಕ್ಷಿಣಿಯವರೇ, ಮಾನ್ಯ ದೇವೇಗೌಡರ ಭಾಷಣ ಮಾನ್ಯ ಕಾಗೋಡು ತಿಮ್ಮಪ್ಪನವರ ಭಾಷಣ ಮತ್ತು ಇತರ ಸ್ನೇಹಿತರ ಭಾಷಣಗಳನ್ನು ಬಹಳ ಲಕ್ಷ್ಯಪೂರ್ವಕವಾಗಿ ಕೇಳಿದ್ದೇನೆ. ಈ ವಿಷಯದಲ್ಲಿ ಮಾತನಾಡುವಾಗ ಸಹಜ ದೃಷ್ಟಿಯಿಂದ ನೋಡಿದರೆ ತಿಳಿಯತಕ್ಕದ್ದಲ್ಲ ಇದು ಬಹಳ ಗಂಭೀರವಾದ ವಿಷಯ, ಶ್ರೀ ದೇವೇಗೌಡರು ಎಲ್ಲ ವಿಷಯಗಳನ್ನೂ ವಿವೇಚನೆ ಮಾಡಿದ್ದಾರೆ. ಮಾನ್ಯ ಕಾಗೋಡು ತಿಮ್ಮಪ್ಪನವರು ಮಾತನಾಡಿದ ಮೇಲೆ ಕಾನ್‌ಸ್ಟಿಟ್ಯೂಷನ್ ಡೆಡ್‌ಲಾಕ್ ಬರುವಂತೆ ಮಾಡಬೇಕು ಎಂದು ಹೇಳಿದರು. ಈ ಹೊತ್ತು ಮಾನಸಿಕ ಪರಿಸ್ಥಿತಿಯನ್ನು ಪರಿವರ್ತನೆ ಮಾಡಬೇಕೇ ಹೊರತು ಸರ್ಕಾರಕ್ಕೆ

ಕಾನ್‌ಸ್ಟಿಟ್ಯೂಷನ್ ಡೆಡ್‌ಲಾಕ್ ಮಾಡಲಿಕ್ಕೆ ಬರುವುದಿಲ್ಲ. ಮಾನ್ಯ ದೇವೇಗೌಡರು ಹೇಳಿದ ಹಾಗೆ ಆ ಪಕ್ಷ ಈ ಪಕ್ಷ ಎನ್ನುವ ಭಾವನೆಯಿಂದ ನೋಡದೆ ಯಾವ ರೀತಿಯಾಗಿ ಈ ಪ್ರಶ್ನೆಯನ್ನು ಬಿಡಿಸಬಹುದು ಎಂದು ನೋಡಬೇಕು. ಅದಕ್ಕೆ ಇರುವ ಕಾನೂನು ತಿದ್ದುಪಡಿ ಮಾಡದೆ ಹೊರತು ಬೇರೆ ಯಾವ ರೀತಿಯಿಂದಲೂ ಸಾಧ್ಯವಿಲ್ಲ. ಈ ಹೊತ್ತು ನಮಗೆ ಏನು ಅನ್ಯಾಯವಾಗಿದೆ ಎನ್ನುವುದು ಸರ್ವ ಸಾಮಾನ್ಯ ಮನುಷ್ಯನಿಗೂ ತಿಳಿಯುತಕ್ಕದಾಗಿದೆ. ಕರ್ನಾಟಕದಲ್ಲಿ ಎಷ್ಟು ಪ್ರದೇಶವಿದೆ, ದುಷ್ಕಾಲ ಬರುವಂಥ ಪ್ರದೇಶ ಎಷ್ಟಿದೆ, ಜನಸಂಖ್ಯೆ ಆ ಪ್ರದೇಶದಲ್ಲಿ ಎಷ್ಟಿದೆ, ಎನ್ನುವ ವಿಚಾರಗಳನ್ನು ಮಾನವೀಯತೆಯ ದೃಷ್ಟಿಯಿಂದ ನೋಡಿದರೆ ಯಾರಾದರೂ ಕರ್ನಾಟಕಕ್ಕೆ ನ್ಯಾಯವನ್ನು ದೊರಕಿಸಿಕೊಡಬೇಕಾಗಿತ್ತು. ಯಾರನ್ನಾದರೂ ದೂಷಿಸುವುದರಿಂದ ಅಥವಾ ಹೊಗಳುವುದರಿಂದ ಏನೂ ಕೆಲಸವಾಗುವುದಿಲ್ಲ. ಈ ಹೊತ್ತಿನ ಪರಿಸ್ಥಿತಿಯಲ್ಲಿ ಮಾನ್ಯ ಮುಖ್ಯಮಂತ್ರಿಗಳು ಭಾರತದ ಪ್ರಧಾನ ಮಂತ್ರಿಯವರಾದ ಇಂದಿರಾಗಾಂಧಿಯವರ ಹತ್ತಿರ ಹೋಗಿ ಸಮರ್ಥ ರೀತಿಯಿಂದ ಅವರಿಗೆ ಮನದಟ್ಟುವಂತೆ ವಿಷಯಗಳನ್ನು ತಿಳಿಸಬೇಕು ಕಾನ್‌ಸ್ಟಿಟ್ಯೂಷನಲ ಡೆಡ್‌ಲಾಕ್ ಮಾಡದೆ ಇದ್ದರೂ ಕೂಡ ಕರ್ನಾಟಕದ ಜನರು ನಮ್ಮ ಭಾಗಕ್ಕೆ ನ್ಯಾಯ ಸಿಕ್ಕದೆ ಇದ್ದರೆ, ಧಾರಾಳವಾಗಿ ಬೇಕಾದ ನೀರೂ ಸಿಕ್ಕದೆ ಇದ್ದರೆ ಏನು ಮಾಡಬೇಕು? ಅನ್ನ ನೀರು ಬಿಟ್ಟು ವಿಧಾನ ಸೌಧವನ್ನು ಕಟ್ಟಿಕೊಂಡು ಏನು ಮಾಡಬೇಕು? ನೀರ ಇಲ್ಲದೆ ಏನು ಮಾಡುವುದಕ್ಕೆ ಸಾಧ್ಯ. ಬಿಜಾಪುರ ಜಿಲ್ಲೆಯ ಬಗ್ಗೆ ನಾನು ಸ್ವಾರ್ಥ ದೃಷ್ಟಿಯಿಂದ ಹೇಳತಕ್ಕದ್ದಲ್ಲ ಇಡೀ ಕನ್ನಡ ನಾಡಿನ ಭವಿಷ್ಯವೇ ನೀರಿಲ್ಲದೆ ಇದ್ದರೆ ಹಾಳಾಗುತ್ತದೆ ನೀರೇ ಇಲ್ಲದಿರುವಾಗ ಪ್ರಾಜೆಕ್ಟ್‌ಗಳನ್ನು ಕಟ್ಟುವ ಪ್ರಶ್ನೆ ಎಲ್ಲಿಂದ ಬರುತ್ತದೆ ಲಗ್ನವೇ ಆಗದೆ ಮಕ್ಕಳು ಎಲ್ಲಿಂದ ಹುಟ್ಟುತ್ತವೆ ಎನ್ನುವ ಪ್ರಶ್ನೆ ಬರುತ್ತದೆ ಮಾನ್ಯ ಮುಖ್ಯಮಂತ್ರಿಗಳು ಯಾವುದೇ ಪ್ರೊಸೀಜರ್ ಅನುಸರಿಸಲಿ ಅದಕ್ಕೆ ನಮ್ಮದು ತಕರಾರಿಲ್ಲ. ಅವರ ಕೈಯನ್ನು ನಾವು ಬಲಪಡಿಸುತ್ತಿದ್ದೇವೆ. ಅವರು ಒಂದು ಪಕ್ಷದ ನಾಯಕರಲ್ಲ. ಇಡೀ ಕರ್ನಾಟಕ ರಾಜ್ಯಕ್ಕೆ ಮುಖ್ಯಮಂತ್ರಿಗಳು ನಮಗೆ ನೀರೇ ಇಲ್ಲದೆ ಇದ್ದರೆ ರಾಜ್ಯದ ಹೆಸರು ಕರ್ನಾಟಕ ಎಂದು ಇಟ್ಟುಕೊಂಡು ಏನು ಮಾಡೋಣ. ನೀರು ಎನ್ನುವ ಆತ್ಮ ಹೋದ ಬಳಿಕ ಬರೀ ದೇಹದಿಂದ ಏನು ಪ್ರಯೋಜನ? ಹಿಂದಿನ ಲೋಕಸಭೆಯ ಚುನಾವಣೆಗಳಲ್ಲಿ ರಾಜ್ಯದಿಂದ 27ಕ್ಕೆ 27 ಜನರನ್ನೂ ಆರಿಸಿ ಕಳುಹಿಸಲಾಗಿದೆ. ಸಂಖ್ಯಾಬಲದಿಂದ ನಮ್ಮ ರಾಜ್ಯದ ಸಂಸತ್ ಸದಸ್ಯರ ಸಂಖ್ಯೆ ಕಡಮೆಯಾಗಿದ್ದರೂ ವಿಚಾರವಂತ ಜನರು ಪಾರ್ಲಿಮೆಂಟಿನಲ್ಲಿದ್ದಾರೆ. ಅವರು ಸಾಕಷ್ಟು ಸಂಖ್ಯೆಯಲ್ಲಿದ್ದಾರೆ. ನಮ್ಮ ಮೇಲೆ ಅನ್ಯಾಯವಾಗಿರುವುದನ್ನು ಪಾರ್ಲಿಮೆಂಟ್ ಸದಸ್ಯರಿಗೆ ಮನಗಾಣಿಸಿಕೊಡಬೇಕು, ಆಂಧ್ರದ ಪಕ್ಷಪಾತಿಗಳಾಗಿ ಶ್ರೀ ಕೆ.ಎಲ್. ರಾವ್ ಅವರು ಕೆಲಸ ಮಾಡಿದ್ದಾರೆನ್ನುವುದನ್ನು ಮನಗಾಣಿಸಿಕೊಡಬೇಕು. ಇದರಲ್ಲಿ ಶ್ರೀಮತಿ ಇಂದಿರಾಗಾಂಧಿಯವರು ತಪ್ಪು ಮಾಡಿದ್ದಾರೆಂದಲ್ಲ. ಅವರಿಗೆ ಬಹಳ ಕೆಲಸವಿದ್ದು ಅವರಿಗೆ ಈ ವಿಚಾರಗಳು ಗೊತ್ತಿರಲಾರದು. ಆದ್ದರಿಂದ ಎಲ್ಲ ಪಾರ್ಲಿಮೆಂಟ್ ಸದಸ್ಯರಿಗೂ ನಮಗೆ ಆಗಿರುವ ಅನ್ಯಾಯದ ಬಗ್ಗೆ ಮನವರಿಕೆ ಮಾಡಿಕೊಟ್ಟರೆ ಇಡೀ ಭಾರತದ ಜನತೆ ಅವರ ಗಮನವನ್ನು ಇತ್ತ ಕಡೆ ಹರಿಸಿಯಾರು, ಕರ್ನಾಟಕದ ಜನಸಂಖ್ಯೆ ಮತ್ತು ಇತರ ವಿಚಾರಗಳನ್ನು ಗಮನಕ್ಕೆ ತೆಗೆದುಕೊಂಡರೆ ಸಾಮಾನ್ಯವಾಗಿ ಯಾವ

ಪ್ರಕ್ರಿಯೆ ಆಗಲೀ ನಮ್ಮ ವಾದ ಸಮಂಜಸವಾಗಿದೆ, ನ್ಯಾಯ ಬದ್ಧವಾಗಿದೆ. ಎಂದು ಯಾರಾದರೂ ಹೇಳುತ್ತಾರೆ. ನಮಗೆ ಆಗುವ ಅನ್ಯಾಯವನ್ನು ಸರಿಪಡಿಸಬೇಕಾದರೆ ಈಗ ಇರುವಂಥ ಆಕ್ಟ್‌ಗೆ ತಿದ್ದು ಮಾಡಲೇಬೇಕು ಮತ್ತು ಆ ಬಗ್ಗೆ ನಾವು ಪ್ರಯತ್ನ ಮಾಡಬೇಕು. ಮಾನ್ಯ ಮುಖ್ಯಮಂತ್ರಿಗಳು ಮುಂದಾಳತ್ವವನ್ನು ತೆಗೆದುಕೊಂಡು ಆಕ್ಟ್ ತಿದ್ದುಪಡಿ ಮಾಡಬೇಕಾದುದರ ಬಗ್ಗೆ ಇಡೀ ಪಾರ್ಲಿಮೆಂಟ್ ಸದಸ್ಯರಿಗೆ ಮನವರಿಕೆಯಾಗುವಂತೆ ಮಾಡಿ, ಕರ್ನಾಟಕದ ಜನರ ಮನಸ್ಸಿನ ಭಾವನೆಯನ್ನು ಪ್ರಧಾನಿಯವರಿಗೆ ತಿಳಿಸಿ ಯಾವ ರೀತಿ ನಮಗೆ ನ್ಯಾಯ ದೊರಕಿಸಿಕೊಡುವುದು ಸೂಕ್ತವಿದೆಯೋ ಆ ಬಗ್ಗೆ ದೀರ್ಘ ಪ್ರಯತ್ನ ಮಾಡಬೇಕು ಮತ್ತು ಅದರಲ್ಲಿ ಯಶಸ್ವಿಯಾಗಬೇಕು. ಇಷ್ಟು ಮಾತ್ರ ಹೇಳಿ ಅಧ್ಯಕ್ಷರಿಗೆ ವಂದಿಸಿ ಮಾತನ್ನು ಮುಗಿಸುತ್ತೇನೆ.

## ಸಿಂದಗಿ ತಾಲೂಕಿನ ಅಭಿವೃದ್ಧಿ

18ನೇ ಏಪ್ರಿಲ್ 1975

**ಶ್ರೀ ಎಸ್.ವೈ. ಪಾಟೀಲ**–ಮಾನ್ಯ ಸಭಾಧ್ಯಕ್ಷಿಣಿಯವರೇ, ನಮ್ಮ ವಿರೋಧ ಪಕ್ಷದ ನಾಯಕರಾದ ಶ್ರೀ ದೇವೇಗೌಡರು ಇಡೀ ರಾಜ್ಯದ ದುಷ್ಕಾಳದ ಬಗ್ಗೆ ಮಾತನಾಡಿದ್ದಾರೆ. ನನಗೆ ಹೆಚ್ಚು ಸಮಯವಿಲ್ಲದ್ದರಿಂದ ನಮ್ಮ ಜಿಲ್ಲೆಯ ಬಗ್ಗೆ ಮುಖ್ಯವಾಗಿ ಸಿಂದಗಿ ತಾಲ್ಲೂಕಿನ ದುಷ್ಕಾಳದ ಭವಣೆಯ ಬಗ್ಗೆ ಮಾತಾಡಿ ನಂತರ ಇಂಡಿ ಮೊದಲಾದ ಎಲ್ಲಾ ತಾಲ್ಲೂಕಿನ ಬಗ್ಗೆ ಮಾತನಾಡುವೆ ನಾನು ಈಗ ಮಾತನಾಡುವುದು ಭಾಷಣವಲ್ಲ, ನನ್ನ ಜನತೆಯ ಗೋಳಿನ ಬಗ್ಗೆ ಇರುವ ದುಃಖದ ವರ್ಣನೆ.

ನಮ್ಮ ದುಷ್ಕಾಳದ ಪರಿಹಾರದ ಯೋಜನೆಯ ಬಗ್ಗೆ ನಾನು 3 ವರುಷದಿಂದ ಹೇಳುತ್ತಾ ಬಂದರೂ ನಮ್ಮ ಸಮಸ್ಯೆ ಪರಿಹಾರ ಆಗುವುದು ಒತ್ತಟ್ಟಿಗೆ ಇರಲಿ ಸರ್ಕಾರಕ್ಕೆ ನಮ್ಮ ಸಮಸ್ಯೆಯನ್ನು ತಿಳಿದುಕೊಳ್ಳಲು ಆಗಿಲ್ಲ.

ಸರ್ಕಾರ ಈ ಸಲ ದುಷ್ಕಾಳ ಬಿದ್ದಾಗ ಜನರಿಗೆ ಕೂಲಿ ಕೊಡಲು ರಸ್ತೆ ಮಾಡಿಸಲು ವಿಪರೀತ ಖರ್ಚು ಹಣ ಮಾಡಿದೆಯಂತೆ ಹೇಳುವುದರಲ್ಲಿ ಅರ್ಥವಿಲ್ಲ. ಸರ್ಕಾರವು ಯಾವ ಶಾಶ್ವತ ಕಾರ್ಯವನ್ನು ಮಾಡಿಲ್ಲ. ನಮ್ಮ ಭಾಗದ ಜನರ ಶೋಚನೀಯ ಸ್ಥಿತಿಯ ಕಲ್ಪನೆ ನಿಮಗಾರಿಗೂ ಬಾರದು. ಅನಾದಿಕಾಲದಿಂದ, ಆಹಾರದ ಕೊರತೆಯಿಂದ ಜನತೆ ಭೋಗಿಸುವ ಕಷ್ಟ ಕಲ್ಪನಾತೀತ.

ಮೊನ್ನೆ ಬಿದ್ದ ಈ ಸಲದ ದುಷ್ಕಾಳ ನಿಮಗೆ ಬಹಳ ದೊಡ್ಡದಾಗಿರಬಹುದು. ಹಿಂದೆ ನಮ್ಮಲ್ಲಿ ಡೋಗಿ ಬರ ಬಿದ್ದಾಗ ರಸ್ತೆಯಲ್ಲಿ ಉಪವಾಸದಿಂದ ಸತ್ತ ಹೆಣಗಳು ರಾಶಿ ರಾಶಿಯಾಗಿ ಬಿದ್ದಿದ್ದವು.

ಮನೆಯ ಹೊತ್ತಲಲ್ಲಿ ಹುಲ್ಲು ಎದ್ದಿದ್ದರೆ ಮನೆಯಲ್ಲಿ ಜನರಿದ್ದರೂ ಇಲ್ಲದಂತೆ ಎಂದು ಶರಣರು ಹೇಳುವಂತೆ, ಜನರ ಆಹಾರ ಸಮಸ್ಯೆ ಬಿಡಿಸದಿದ್ದರೆ ನಮ್ಮ ಪಾಲಿಗೆ ಸರ್ಕಾರ ಇದ್ದು

ಇಲ್ಲದಂತೆ ಸರಿ. ಮೊಲೆ ಕುಡಿಸದ ತಾಯಿನ್ನು ತಕ್ಕೊಂಡು ಏನು ಮಾಡಬೇಕು. ನನ್ನ ತಾಲ್ಲೂಕದ ಹರಿಜನ, ಲಮಾಣಿ ಮೊದಲಾದ ಬಡವರಲ್ಲಿ ಮಹಾರಾಷ್ಟ್ರ ರಾಜ್ಯದ ಸಾಂಗಲಿ, ಕೊಲ್ಲಾಪುರ, ಮಿರಜ್ ಇತ್ಯಾದಿ ಭಾಗದಲ್ಲಿಯೇ ಇರುತ್ತಾರೆ. ಅಲ್ಲಿ ಪ್ರತಿ ಗಂಡಸಿಗೆ 6 ರೂಪಾಯಿ ಹೆಂಗಸಿಗೆ 3 ರೂಪಾಯಿ ಕೂಲಿ ಸಿಗುತ್ತವೆ. ಇಲ್ಲಿ ಅವರಿಗೆ ಕೆಲಸವಿಲ್ಲದೆ ಯಾವಾಗಲೂ ಉಪವಾಸ ಸಾಯುತ್ತಾರೆ.

ಸಿಂದಗಿ ತಾಲ್ಲೂಕದ ಉದ್ಧಾರವಾಗಬೇಕೆಂದರೆ ಆಹಾರ ಸಮಸ್ಯೆ ಬಿಡಿಸಬೇಕಾದರೆ, ಆಲಮಟ್ಟಿ ಯೋಜನೆ ಆಗಬೇಕು. ಅದು ಆಗುವ ಲಕ್ಷಣಗಳೆಲ್ಲ ಒಂದು ವೇಳೆ ಆದರೆ ಅದು ನಮ್ಮ ಮೊಮ್ಮಕ್ಕಳ ಕಾಲದಲ್ಲಿ ಆಗಬೇಕು ನಮ್ಮ ಕಣ್ಣಿಂತ್ತು ಕಾಣಲಾರದು. ನಮ್ಮ ತಾಲ್ಲೂಕದ ಒಟ್ಟು ಸಾಗುವಳಿ ಕ್ಷೇತ್ರ 5 ಲಕ್ಷ 6 ಸಾವಿರ ಎಕರೆ ಆಲಮಟ್ಟಿ ಯೋಜನೆ ಪೂರ್ತಿ ಯಾದಾಗ ಎರಡು ಲಕ್ಷ ನೀರವರಿ ಆಗುವುದು. ಉಳಿದ ಮೂರು ಲಕ್ಷ ಎಕರೆ ಭೂಮಿಯ ಬಗ್ಗೆ ವಿಚಾರ ಮಾಡಿದಾಗ ಸಣ್ಣ ನೀರಾವರಿ ಆಗಲು ಸ್ಥಳಗಳಿಲ್ಲ. ಆಲಮಟ್ಟಿ ನೀರು ಇಲ್ಲಿಗೆ ಬರುವುದಿಲ್ಲ. ಇನ್ನು ಉಳಿದ ಮಾರ್ಗವೆಂದರೆ, ಸಾಧ್ಯವಿದ್ದಲ್ಲಿ ಹೊಸ ಬಾವಿಗಳನ್ನು ಹೊಡಿಸುವುದು. ಈಗಿದ್ದ 6 ಸಾವಿರ ಹಳೆ ಬಾವಿಗಳನ್ನು ಸುಧಾರಣೆ ಮಾಡುವುದು. ಸಾಮೂಹಿಕ ಬಾವಿಗಳನ್ನು (ಕಮ್ಯೂನಿಟಿ ವೆಲ್ಸ) ತೆಗೆಯುವುದು. ಮುಖ್ಯವಾಗಿ ಹಳೇ ಬಾವಿಯಲ್ಲಿ ಬಿದ್ದ ಗಾಳ ತೆಗೆಯಬೇಕು. ಗಾಳ ತೆಗೆದ ನಂತರ ಪುನಹ ಮಣ್ಣು ಬೀಳವಂತೆ ಬಾವಿಯ ಸುತ್ತಲು ಗೋಡೆ ಕಟ್ಟಿಸಬೇಕು. ಹಳೇ ಗೋಡೆಗಳಿದ್ದರೆ, ಬಿದ್ದಿದ್ದರೆ ದುರಸ್ತು ಮಾಡಬೇಕು. ಪ್ರತಿ ಬಾವಿಗೆ ಪಂಪು ಕೂಡಿಸಿ ವಿದ್ಯುತ್ ಪೂರೈಕೆ ಮಾಡಬೇಕು. ಈ ಪಂಪುಗಳಿಗೆ ಡಿಸೈಲ್ ಉಪಯೋಗ ಮಾಡುತ್ತಿದ್ದು ಬಹಳ ಖರ್ಚು ಬರುತ್ತದೆ. ಪ್ರತಿ ಬಾವಿಯ ಮೇಲೆ ನೀರು ನಿಲ್ಲುವಂತೆ ಸಾಧ್ಯವಿದ್ದಲ್ಲಿ ಒಂದು ಸಣ್ಣ ಕೆರೆಯನ್ನು ಕಟ್ಟಬೇಕು. ಒಂದು ಹನಿ ನೀರು ಹಾಳಾಗಬಾರದು.

ಸಿಂದಗಿ ತಾಲ್ಲೂಕಿನಲ್ಲಿ ಕೆಲವು ಸ್ಥಳಗಳಲ್ಲಿ ಅಪಾರ ಜಲ ಸಂಪತ್ತು. ಇದೆ. ಟೊಮ್ಮನ ಜೋಗಿ ಇತ್ಯಾದಿ ಕೆಲವು ಹಳ್ಳಿಗಳ ಎಲ್ಲಾ ಬಾವಿಗಳಲ್ಲಿ ಬೇಸಿಗೆಯಲ್ಲಿಯೂ ಸಾಕಷ್ಟು ನೀರು ಇರುತ್ತದೆ. ಇದನ್ನು ಭೂಗರ್ಭಶಾಸ್ತ್ರದ ಡೈರೆಕ್ಟರ್ ಡಾ. ರಾಧಾಕೃಷ್ಣರವರೆಗೆ ತೋರಿಸಿ ಕೊಟ್ಟಿದ್ದೇವೆ. ನದಿಗಳಿಗೆ ನೀರಾವರಿ ಯೋಜನೆ ಮಾಡಿ ನೀರು ಕೊಟ್ಟು ಜನರಿಂದ ಹಣ ವಸೂಲು ಮಾಡುವಂತೆ, ಜಲ ಸಂಪತ್ತಿನ ಸ್ಥಳಗಳನ್ನು ಶೋಧಿಸಿ 20 ಬಾವಿಗಳ ಆಳ, ಒಂದೊಂದು ಸಾಮೂಹಿಕ ಬಾವಿಯನ್ನು ಸರ್ಕಾರದವರು ತೆಗೆಯಿಸಿ ಜನರಿಗೆ ನೀರು ಕೊಟ್ಟು ನೀರಿನ ಬೀರಾಡು ವಸೂಲು ಮಾಡಬೇಕು. 1 ಬಾವಿಯಿಂದ ಮುಂಗಾರಿ 10 ಎಕರೆ ಹಿಂಗಾರಿ 10 ಎಕರೆ ಕೂಡಿ 50 ಎಕರೆ ನೀರಾವರಿ ಆಗುತ್ತದೆ. ನಾಲ್ಕು ಸಾವಿರ ಹಳೆ ಬಾವಿಗಳನ್ನು ಸುಧಾರಿಸಿದರೆ 80 ಸಾವಿರ ನೀರಾವರಿ ಆಗುವುದು. ಉಳಿದ ಎರಡು ಸಾವಿರ ಬಾವಿಗಳನ್ನು ಕನಿಷ್ಟ 20 ಎಕರೆ ನೀರಾವರಿ ಆಗಿ ಹಳೇ ಬಾವಿಗಳಿಂದ ಒಟ್ಟು 1 ಲಕ್ಷ ಎಕರೆ ನೀರಾವರಿ ಆಗುವುದು ಈ ಹಳೆ ಬಾವಿಗಳಿಂದ ಎಕರೆಗೆ 5 ಕ್ವಿಂಟಾಲದಂತೆ 5 ಕ್ವಿಂಟಾಲ ಧಾನ್ಯ ಉತ್ಪನ್ನವಾಗುವುದು.

ಒಂದು ಬಾವಿಯ ಕೆಲಸದ ಸಾಲಕ್ಕಾಗಿ, ರೈತನು ಡೆವಲಪ್‌ಮೆಂಟ್ ಬ್ಯಾಂಕಿನವರನ್ನು ಕಾಣಬೇಕು, ವಿದ್ಯುತ್ ಕೊಡುವವರು ಬೇರೆ, ಬಿಲ್ಲು ಪಾಸುಮಾಡುವವರು ಬೇರೆ, ಇವೆಲ್ಲ ಕೆಲಸ ಮಾಡಿಕೊಳ್ಳಲು ಸಾಮಾನ್ಯ ರೈತರಿಗೆ ಸಾಧ್ಯವಿಲ್ಲ ಸರ್ಕಾರದವರು ಇಲ್ಲಿಯವರೆಗೆ ಮಂಜೂರು ಮಾಡಿದ ಹಣ ಶ್ರೀಮಂತರಿಗೆ ಬುದ್ಧಿವಂತರಿಗೆ ನಮ್ಮಂತಹ ಮುಂದಾಳುಗಳಿಗೆ ಪ್ರಮುಖರ ಹಿಂಬಾಲಕರಿಗೆ ಉಪಯೋಗವಾಗಿರುವದು. ಬಡವರಿಗೆ ಬಹಳ ಉಪಯೋಗವಾಗಿಲ್ಲ. ಹರಿಜನರಿಗೆ, ಲಮಾಣಿ ಜನರಿಗೆ ಸಣ್ಣ ಸಣ್ಣ ಬಡರೈತರಿಗೆ ಸರ್ಕಾರದವರೇ ಸಾಮೂಹಿಕ ಬಾವಿ ಮಾಡಿ ನೀರು ಕೊಡಬೇಕು. ಜನರ ಕೈಯಲ್ಲಿ ಒಂದು ಪೈ ಹಣ ಕೊಡಬಾರದು. ನನ್ನ ವಿನಂತಿಯನ್ನು ಮಾನ್ಯ ಮಾಡಿ ಮುಖ್ಯಮಂತ್ರಿಗಳು ಎಷ್ಟೋ ಹಣ ಮಂಜೂರು ಮಾಡಿದರು. ಆ ಹಣದ ಉಪಯೋಗ ಭೂಸಾಧಾರಣೆಗೆ ಆಗಲಿಲ್ಲ. ಬಹು ಭಾಗ ಹಣವನ್ನು ಜನರು ಚೈನಿ ಮಾಡಿ ಸಿಂಧಿ ಕುಡಿದು ಹಾಳುಮಾಡಿದರು. ಆದ್ದರಿಂದ ಸರ್ಕಾರದವರು ಸಿಂಧಗಿ ತಾಲ್ಲೂಕಿನ ನೀರಾವರಿ ಭೂಮಿಗಳ ಸರ್ವೆ ಮಾಡಿ ಒಂದು ಯೋಜನೆಯನ್ನು ತಯಾರು ಮಾಡಿ ಈ ರಾಜ್ಯದ ಶ್ರೀ ಕೃಷ್ಣಕುಮಾರರಂತಹ ಅಧಿಕಾರಿಗಳಿಗೆ ಒಪ್ಪಿಸಬೇಕು.

ಅನ್ನ ಬೆಳೆಯಲಿಕ್ಕೆ ಸಹಾಯ ಮಾಡುವುದಿಲ್ಲ. ಕರ ಮಾತ್ರ ವಸೂಲು ಮಾಡಲಿಕ್ಕೆ ಬರುತ್ತೀರಿ. ಕರ ಬಲತ್ಕಾರದಿಂದ ವಸೂಲು ಮಾಡಲು ನಿಮಗೇನು ಹಕ್ಕಿದೆ? ಇದು ಬಂದಾಗಬೇಕು ಹತ್ತು, ಹದಿನೈದು ಚೀಲ ಇರುವ ಜನರಿಂದಲೂ ಅಧಿಕಾರಿಗಳು ಬಲತ್ಕಾರದಿಂದ ವಸೂಲು ಮಾಡುತ್ತಿದ್ದಾರೆ. ನಮಗೆ ಬಾವಿ ಸುಧಾರಣೆ ಹೊರತು ಯಾವ ಸುಧಾರಣೆಯೂ ಬೇಕಿಲ್ಲ ಸರ್ಕಾರಕ್ಕೆ ದುಡ್ಡು ಇರದಿದ್ದಾರೆ, ಹತ್ತು ವರುಷಗಳಲ್ಲಿ ತೆಗೆಕೊಂಡು ಹಣದ ಎರಡು ಪಟ್ಟು ಕೊಡುತ್ತೀರಿ ಎಂದರೆ, ಜನರಿಂದ ಸಾಕಷ್ಟು ಹಣ ಸಿಗುವುದು.

ಈ ಬಗ್ಗೆ ಪ್ರಧಾನಿ ಇಂದಿರಾಗಾಂಧಿಯವರಿಗೆ ಆಲಮಟ್ಟಿಯಲ್ಲಿ ಹೇಳಿದೆ. 27.01.1973 ದಿವಸ ಆಗಿನ ಪ್ಲಾನಿಂಗ್ ಕಮೀಷನ್ ಚೇರ್‌ಮನ್ ಮಾನ್ಯ ಡಿ.ಪಿ. ಧಾರ್‌ರವರಿಗೆ ಸಿಂಧಗಿ ತಾಲ್ಲೂಕಿನ ಬಾವಿಗಳನ್ನು ತೋರಿಸಿ ಇದರಿಂದ ಆಗುವ ಲಾಭವನ್ನು ಮನಗಾಣಿಸಿಕೊಟ್ಟಿದ್ದೇನೆ. 09.10.1973 ನೇ ದಿವಸ ಹಿಂದಿನ ಭಾರತ ಸರ್ಕಾರದ ಒಕ್ಕಲುತನ ಮಂತ್ರಿಗಳು ಮತ್ತು ಇಂದಿನ ಮಾನನೀಯ ರಾಷ್ಟ್ರಪತಿಗಳಾದ ಶ್ರೀ ಫಕ್ರುದ್ದೀನ್ ಅಲಿಯವರಿಗೂ ನಮ್ಮ ರಾಜ್ಯದ ಮುಖ್ಯಮಂತ್ರಿಯವರಿಗೆ ಈ ಬಗೆ ಬಹಳ ಸಲ ಹೇಳಿಕೊಂಡಿದ್ದೇನೆ. ನಾನು ಈ ಸಲ ಆರಿಸಿ ಬಂದಾಗಿನಿಂದ ಈ ಅಸೆಂಬ್ಲಿಯಲ್ಲಿ ಇದರ ಹೊರತಾಗಿ ಬೇರೆ ವಿಷಯವಾಗಿ ಮಾತನಾಡಿಲ್ಲ. ಬೆಂಗಳೂರಿನಲ್ಲಿ ನನಗೆ ಇಂಡಿ ಸಿಂದಗಿ ದುಷ್ಕಾಳ ಎಂ.ಎಲ್.ಎ ಎಂದು ಚಾಷ್ಟಿ ಮಾಡುವರು. ಅಸೆಂಬ್ಲಿಯಲ್ಲಿ ನಾನು ಮಾತನಾಡಲು ಎದ್ದು ಕೂಡಲೇ ಇಂಡಿ ಸಿಂದಗಿ ದುಷ್ಕಾಳ ವಿಷಯ ಪ್ರಾರಂಭವಾಯಿತು ಅಂತ ಎಲ್ಲರೂ ಅನ್ನುತ್ತಾರೆ.

03.01.1974 ರ ದಿವಸ ನಾನು ಮುಖ್ಯ ಮಂತ್ರಿಗಳಿಗೆ ಒಂದು ದೀರ್ಘವಾದ ಸವಿಸ್ತಾರ ಮನವಿಯನ್ನು ಅರ್ಪಿಸಿ ಉಪದ್ರವ ಕೊಟ್ಟಾಗ ಈ ವಿಷಯವನ್ನು ನಮ್ಮ ರಾಜ್ಯ ಇಂಜನಿಯರ್ ಶ್ರೀ ಮಗದುಮ್ ಸಾಹೇಬರವರಿಗೆ ಒಪ್ಪಿಸಿದರು. ಮಾನ್ಯ ಶ್ರೀ ನಾಗರಾಳ್‌ರವರಿಗೆ ಮಾನ್ಯ ಶ್ರೀ ರಾಥೋಡ್‌ರವರಿಗೆ ಉಳಿದ ಮಂತ್ರಿಗಳವರಿಗೆ ಹೇಳಿದ್ದೇನೆ ಶ್ರೀ ಮೊಗದುಮ್ ಸಾಹೇಬರು

ಮಾಡಿ ಕೊಡುತ್ತೇನೆ ಎಂದು ಅವರ ಕಡೆ ಡೆವಲಪ್‌ಮೆಂಟ್ ಕಮೀಷನರ್ ಛೇರ್‌ಮನ್ ಎಲೆಕ್ಟ್ರಿಕ್‌ಸಿಟಿ ಬೋರ್ಡ್, ರಿಜಿಸ್ಟರ್ ಕೋ–ಅಪರೇಟೀವ್ ಸೊಸೈಟಿ, ಚೀಫ್ ಇಂಜನೀಯರ್ ಇರಿಗೇಷನ್ ಲ್ಯಾಂಡ್ ಡೆವಲಪ್‌ಮೆಂಟ್ ಬ್ಯಾಂಕ್ ಮ್ಯಾನೇಜಿಂಗ್ ಡೈರೆಕ್ಟರ್ ಇತ್ಯಾದಿ ಅಧಿಕಾರಗಳ ಕಡೆ ಒಂದು ತಿಂಗಳವರೆಗೆ ಎಡತಾಗಿದೆ, ಕೇವಲ ಈ ಕೆಲಸಕ್ಕಾಗಿಯೇ ಅಸೆಂಬ್ಲಿ ಇಲ್ಲದಾಗ ಬೆಂಗಳೂರಿನಲ್ಲಿ 15 ದಿವಸ ಮುಕಾಂ ಮಾಡಿದೆ. 2 ತಿಂಗಳಾದ ಮೇಲೆ ಮೊಗ್‌ದಮ್ ಸಾಹೇಬರು ಈ ಕೆಲಸ ರೆವಿನ್ಯೂ ಖಾತೆಗೆ ಹೋಯಿತು. ನನ್ನಿಂದ ಕೆಲಸವಾಗುವುದಿಲ್ಲ ಅಂತ ಹೇಳಿದರು. ದುಃಖದಿಂದ ನಿರಾಶೆ ಹೊಂದಿದೆ ಭೂಗರ್ಭಶಾಸ್ತ್ರದ ಡೈರಕ್ಟರರು ಸಿಂದಗಿ ತಾಲ್ಲೂಕಿನಲ್ಲಿ ನೀರಿನ ಸಂಪತ್ತು ಅದೆ ಅಂತ ಸರ್ಕಾರಕ್ಕೆ ತಿಳಿಸಿದ್ದಾರೆ. ಆದ್ದರಿಂದ ಸರ್ಕಾರದವರು ಮನಸ್ಸು ಮಾಡಿ ತಜ್ಞರಿಂದ ಒಂದು ಯೋಜನೆ ಮಾಡಿಸಿ 5 ಕೋಟಿ ರೂಪಾಯಿ ಖರ್ಚು ಮಾಡಿದರೆ ಸಿಂದಗಿ ತಾಲ್ಲೂಕಿನ ಅರ್ಧ ಭಾಗದ ಜನರ ಆಹಾರ ಸಮಸ್ಯೆ ತಪ್ಪುವುದು.

## ದೋಣಿ ನದಿಯ ಯೋಜನೆ

18ನೇ ಏಪ್ರಿಲ್ 1975

ಈ ಯೋಜನೆಯಿಂದ ಸಿಂದಗಿ ತಾಲ್ಲೂಕಿನ 2 ಸಾವಿರ ಎಕರ ನೀರಾವರಿ ಆಗುವುದು. ಆದರೆ ದೋಣಿ ನದಿಯ ನೀರು ಉಪ್ಪು ಇದ್ದ ಕಾರಣ ನೀರಾವರಿಗೆ ಉಪಯೋಗವಿಲ್ಲ ಅಂತ ಕೆಲವರ ವಾದ. ಈಗಿನ ಕಾಲದಲ್ಲಿ ವಿಜ್ಞಾನದ ಸಹಾಯದಿಂದ ನೀರಲ್ಲಿಯ ಉಪ್ಪಿನ ಅಂಶವನ್ನು ಸುಲಭವಾಗಿ ಹೊರಗೆ ತೆಗೆಯಬಹುದು. ದೋಣಿ ನದಿಯ ನೀರಿನಿಂದ ಭೂಮಿ ಕೆಡುವುದಿಲ್ಲ. ಮತ್ತು ಉತ್ತಮ ಬೆಳೆ ಬರುತ್ತದೆ. ಎಂಬುದನ್ನು ದೋಣಿ ದಂಡೆ ಜನರು ಹೇಳುತ್ತಾರೆ. ದೋಣಿ ನದಿಯ ನೀರನ್ನು ಉಪಯೋಗ ಮಾಡಿದ ಅನುಭವ ನನಗೆ ಗೊತ್ತಿದೆ. ದೋಣಿ ನದಿಯ ನೀರು ಬೆಳೆಗೆ ಉಪಯೋಗ ಇದೆ ಅಥವಾ ಇಲ್ಲ ಎಂಬುದನ್ನು ಪರೀಕ್ಷೆಮಾಡಲು ನಿರ್ಣಯಿಸಿ ದುಡ್ಡಿನ ಅಡಚಣೆಯಿಂದ ಸರ್ಕಾರ ಕೈ ಬಿಟ್ಟಿತು. ಈ ಬಗ್ಗೆ ನಾನು 02.02.1973 ನೇ ದಿವಸ ಡಬ್ಲ್ಯು.ಆರ್.ಡಿ.ಓ. ಚೀಫ್ ಇಂಜಜನಿಯರಿಗೆ ಬರೆದ, ಅವರು 14.02.1973 ನೇ ದಿವಸ ಚೀಫ್ ಇಂಜನಿಯರ್ ಇರಿಗೇಷನ್ ನಾರ್ಥ ಇವರಿಗೆ ಪ್ರಯೋಗಮಾಡಲು ಬರೆದೆ, ಆದರೆ ಅವರು 18.07.1974 ದಿವಸ ಇದು ನಮಗೆ ಸಾಧ್ಯವಿಲ್ಲವೆಂದು ಉತ್ತರಿಸಿದರು. ಈ ಉತ್ತರ ಸಿಗಬೇಕಾದರೆ 1 ವರುಷ 6 ತಿಂಗಳು ಹಿಡಿಯಿತು. ಅನಂತರ 07.11.1974 ನೇ ದಿವಸ ನಾನು ಮುಖ್ಯಮಂತ್ರಿಗಳಿಗೆ ಬೆಳಗಾಂವಿಯಲ್ಲಿ ಹೇಳಿದೆ. ದೋಣಿ ನದಿಯ ನೀರು ಉಪಯೋಗ ಇದೆ? ಇಲ್ಲ? ಅತಿ ತೀವ್ರ ಪರೀಕ್ಷಿಸಿ ಉಪಯೋಗವಿದ್ದರೆ, ಈ ಯೋಜನೆ ತೆಗೆದುಕೊಳ್ಳಿ, ಇಲ್ಲವಾದರೆ ಬಿಡಿರಿ. ಸರ್ಕಾರದವರು ದುಷ್ಕಾಳ ರಸ್ತೆಗಳಿಂದ ಜನರ ಪ್ರವಾಸಕ್ಕೆ ತೊಂದರೆಯಾಗಿದೆ. ಕೊನೆಯದಾಗಿ ಇಂಡಿ ಸಿಂದಗಿ ತಾಲ್ಲೂಕಿನ ಹೊಸ ಬಾವಿಗಳನ್ನು ತೆಗೆದು ಪ್ರತಿ ತಾಲ್ಲೂಕಿಗ 5 ಕೋಟಿ ರೂಪಾಯಿ ಯೋಜನೆ ಮಾಡಿ ಇಂಡಿ ಮತ್ತು ಸಿಂದಗಿ ತಾಲ್ಲೂಕಿಗೆ ಜನರ ಆಹಾರ ಸಮಸ್ಯೆಯನ್ನು ಬಿಡಿಸಲು ಪ್ರಾರ್ಥಿಸುತ್ತೇನೆ. ಸಿಂದಗಿ ತಾಲ್ಲೂಕಿಗೆ ಅತ್ಯಂತ ಉಪಯುಕ್ತ ಇರುವ ದೋಣಿ ನದಿಯ ಯೋಜನೆಯನ್ನು ನೀರು ತಪಾಸು ಮಾಡಿದನಂತರ ಮಂಜೂರು ಮಾಡಬೇಕೆಂದು ಹೇಳಿ ಅಧ್ಯಕ್ಷರಿಗೆ ವಂದಿಸಿ ನನ್ನ ಮಾತನ್ನು ಮುಗಿಸುತ್ತೇನೆ.

# ನಮ್ಮ ಬಗ್ಗೆ ಕಳಕಳಿ ಇದೆಯಾ?

18ನೇ ಏಪ್ರಿಲ್ 1975

**ಶ್ರೀ ಎಸ್.ವೈ. ಪಾಟೀಲ** – ಮಾನ್ಯ ಸಭಾಧ್ಯಕ್ಷರೇ, ಮಾನ್ಯ ಮುಖ್ಯಮಂತ್ರಿಗಳು ನನ್ನ ಭಾಷಣವನ್ನು ಲಕ್ಷ್ಯಕೊಟ್ಟು ಕೇಳಬೇಕು. ನಮ್ಮನ್ನು ನೋಡುವುದು ಲಗ್ನ ಸಮಾರಂಭದಲ್ಲಿ. ನನಗೆ ಒಂದು ಮಾತು ಮುಖ್ಯವಾಗಿ, ಕಾಂಗ್ರೆಸ್ ಶಬ್ದದ ಬಗ್ಗೆ (ಒ) ಇರಲಿ (ಆರ್) ಇರಲಿ ಓ ಕಾಂಗ್ರೆಸ್ಸಿನಲ್ಲಿ ಶಬ್ದದ ಬೇನೆ ಆಗುವದಿಲ್ಲ. ಯಾರು ಗಾಂಧಿ ಕಾಲದಲ್ಲಿ ಈ ಸಂಸ್ಥೆಯಲ್ಲಿ ಬಂದಿದ್ದಾರೆ, ಈ ಶಬ್ದಕ್ಕೆ ಏನಾದರೂ ತುಚ್ಛೀಕರಣ ಮಾಡಿದರೆ ಬಹಳ ವೇದನೆಯಾಗುತ್ತದೆ. ಉಪಮೇ, ಉಪಮೇಯ ಕೊಡಬೇಕು. ಕಾಂಗ್ರೆಸ್ ಶಬ್ದದ ಮೇಲೆ ಉಪಮೇಯ ಉಪಮೇ ಕೊಡುವುದಕ್ಕೆ ಹೋಗಬೇಡಿ. ಮುಖ್ಯವಾಗಿ ಒಕ್ಕಲುತನ ಖಾತೆ ಮೇಲೆ ಸರ್ಕಾರಕ್ಕೆ ಕೆಲವು ಅಂಶಗಳನ್ನು ಕೊಡಬೇಕಾಗಿದೆ. ಒಕ್ಕಲುತನ ಮಂತ್ರಿಗಳನ್ನು ಅಭಿನಂದಿಸಬೇಕಾಗುತ್ತದೆ. ಅಭಿನಂದಿಸಬೇಕು ಎಂದರೆ, ಎಲ್ಲಾ ಕೆಲಸ ಒಳ್ಳೆಯದು ಮಾಡಿರಿ ಎಂದು ತಿಳಿದುಕೊಳ್ಳುವುದಕ್ಕೆ ಕಾರಣ ಇಲ್ಲ, ಟೆಂಪೊರರಿಯಾಗಿ ಸ್ವಲ್ಪ ಅಭಿನಂಧಿಸುತ್ತೇನೆ. ನಮ್ಮ ಉತ್ತರ ಕರ್ನಾಟಕದಲ್ಲಿ ಗುಲಬರ್ಗಾ ಮತ್ತು ಬೆಳಗಾಂವ ಎಂದು ಎರಡು ವಿಭಾಗ ಏನು ಇತ್ತು, ಅದನ್ನು ತಿಳಿದುಕೊಳ್ಳುವ ಸಲುವಾಗಿ ನಾಲ್ಕು ವಿಭಾಗಗಳನ್ನು ಮಾಡಿ ವರಲಕ್ಷ್ಮಿ ಬಗ್ಗೆ ಆಸ್ತೆ ವಹಿಸಿ ಪ್ರಯತ್ನ ಮಾಡಿದ್ದು. ಬಿಜಾಪುರ ಜಿಲ್ಲೆಯಲ್ಲಿ ಕಣಕಿ ಬಗ್ಗೆ ಅಗ್ರಿಕಲ್ಚರ್ ಮಿನಿಷ್ಟರ್‌ಗೆ ಹೇಳಿದ ಕೂಡಲೇ ವಿಚಾರ ಮಾಡಿ ಪ್ರಶ್ನೆ ಬಿಡಿಸಿದ್ದಾರೆ. ಸಹಾನುಭೂತಿಯಿಂದ ಹೇಳತಕ್ಕ ವಿಷಯವನ್ನು ಹೇಳುವುದರ ಕಡೆಗೆ ಹೋಗುತ್ತದೆ. ಮುಖ್ಯಮಂತ್ರಿಗಳು ಮತ್ತು ಸುಬ್ಬಯ್ಯ ಶೆಟ್ಟಿರೂ ಈ ಕಡೆ ಲಕ್ಷ್ಯ ಕೊಡಬೇಕು ನಾವು ಮಾತನಾಡಲಿಕ್ಕೆ ಒಂದು ಲಕ್ಷ ಜನರು ನಮ್ಮನ್ನು ಇಲ್ಲಿಗೆ ಕಳುಹಿಸಿದ್ದಾರೆ. ವಕೀಲರು ಕೋರ್ಟಿನಲ್ಲಿ ಆರ್ಗ್ಯುಮೆಂಟ್ ಮಾಡುವ ಕಾಲಕ್ಕೆ ಪ್ಲೀಡರ್ ಆರ್ಗುಮೆಂಟ್ ಮಾಡಿದರೆ ಬಿಜಾಪುರದಲ್ಲಿ ಉರ್ದು ಪೇಪರ್ ಓದುತ್ತಾರೆ.

ನಮ್ಮ ಭಾಷಣ ಹಾಗೆ ಆಗಬಾರದೆಂದು ಬಹಳ ಕಳಕಳಿಯಿಂದ ಹೇಳುತ್ತಿದ್ದೇನೆ. ಅಸೆಂಬ್ಲಿ ನಡೆಯುವಾಗ ನಾನು ಹೆಚ್ಚಿಗೆ ಮಾತನಾಡುತ್ತಾ ಇರುವುದಿಲ್ಲ. ಸರ್ಕಾರವನ್ನು ಟೀಕಿಸುವುದಕ್ಕೆ ಬರುವುದಿಲ್ಲ ಎಂದು ಅಲ್ಲ, ಲೈಸೆನ್ಸ್ ವಿಚಾರ ಇದೆ ಅದು ಗೊತ್ತಿದೆ ಸರ್ಕಾರ ಏನಾದರೂ ನಮಗೆ ಕಲ್ಯಾಣ ಮಾಡಬೇಕು ಅವರ ವಿರುದ್ಧ ಮಾತನಾಡಬಾರದು ಎಂದು ಇದ್ದೇವೆ. ರಾಥೋಡ್‌ರವರು ಲಕ್ಷ್ಯ ಕೊಟ್ಟು ಕೇಳಬೇಕು. ನಾವುಗಳು ಅಸೆಂಬ್ಲಿಗೆ ಬಂದು ಮೂರು ವರ್ಷ ಆಯಿತು, ಬಹಳ ಸಾರಿ ಮಾತನಾಡುತ್ತೇವೆ ಆದರಿಂದ ಪ್ರಯೋಜನವಾಗುವುದಿಲ್ಲ, ಮೂರು ವರ್ಷದಲ್ಲಿ ಒಕ್ಕಲುತನ ಸಲುವಾಗಿ ಏನು ಮಾಡಿದ್ದೀರಿ? ಅದನ್ನು ಸರ್ವೆ ಮಾಡಿ ಹೇಳಬೇಕು ಎಂದು ಅಪೇಕ್ಷೆಪಡುತ್ತೇನೆ. ಕೇವಲ ಒಕ್ಕಲುತನ ಮಂತ್ರಿಗಳನ್ನು ಟೀಕಿಸುವುದರಿಂದಾಗಲೇ ಸಣ್ಣ ಪುಟ್ಟ ಮಾತುಗಳನ್ನು ಹೇಳವುದರಿಂದ ಪ್ರಯೋಜನ ಆಗುವುದಿಲ್ಲ. ಇವತ್ತು ನಿಮ್ಮನ್ನು ಬಿಟ್ಟು ನಮಗೆ ಬೇರೆ ಸರ್ಕಾರ ಇಲ್ಲ ಅಸೆಂಬ್ಲಿ ಮುಗಿದು ಕೂಡಲೇ 9–10 ರೋಕಗೆ ಪ್ರೋಗ್ರಾಂ ಹಾಕಿಕೊಂಡು ಮುಖ್ಯಮಂತ್ರಿಗಳು, ಅಗ್ರಿಕಲ್ಚರ್ ಮಿನಿಸ್ಟರ್, ಡೆವಲಪ್‌ಮೆಂಟ್ ಮಿನಿಸ್ಟರ್ ಎರಡು ದಿವಸ

ಬಿಜಾಪುರ ಜಿಲ್ಲೆಯಲ್ಲಿ ಕಳೆಯಿರಿ. ಅಲ್ಲಿಯೂ ಬೇಕಾದಂಥ ಬಂಗಲೆಗಳು ಇವೆ. ಸರ್ಕಾರದ ಚೀಫ್ ಸೆಕ್ರೆಟರಿಯವರನ್ನು ಕರೆದುಕೊಂಡು ಬನ್ನಿ, ಎರಡು ದಿವಸ ಇದ್ದು ಸಮಸ್ಯೆಗಳನ್ನು ಚೆನ್ನಾಗಿ ತಿಳಿದುಕೊಂಡು ಬರಲಿ, ತಿಳಿದಿಲ್ಲ ಎಂದು ಚಾರ್ಜ ಇದೆ. ನಮ್ಮ ಮೇಲೆ ಸಾಕಷ್ಟು ಪ್ರೀತಿ ಇದ್ದರೂ ವಿಶ್ವಾಸದ ಮೇಲೆ, ಪ್ರೀತಿ ಇಲ್ಲ. ನಾನು ಆರ್ಗ್ಯುಮೆಂಟ್ ಮಾಡಿ ತಿಳಿಸುತ್ತೇನೆ. ನಮಗೆ ಏನು ಮಾಡಲಿಕ್ಕೆ ಸಾಧ್ಯವಿದೆ, ಅದನ್ನು ಮಾಡಿರಿ, ಹಣದ ಕೊರತೆ ಇದೆಯೇ ಅದನ್ನು ಹೇಳಿರಿ, ನಾನು ಅಪ್ಪರ್ ಕೃಷ್ಣ ಮೇಲೆ ಮಾತನಾಡುವುದಿಲ್ಲ, ಮಲಪ್ರಭಾ ನಡೆದಿದೆ, ತುಂಗಾ ಭದ್ರಾ ಇದೆ.

ಸರ್ಕಾರದವರು ಕೊಟ್ಟಿರುವ ವರದಿಯಲ್ಲಿ ಮುಂಗಾರು ಮಳೆ ಸಾಕಷ್ಟು ಬರದ ಕಾರಣ ಪೀಕು ಸರಿಯಾಗಿ ಬರಲಿಲ್ಲವೆಂದು ಹೇಳಿದ್ದಾರೆ. ಆದರೆ ದೈವೀ ಕೃಪೆಯಿಂದ ನಮ್ಮ ಭಾಗದಲ್ಲಿ ಸೆಪ್ಟೆಂಬರ್ ಮತ್ತು ಅಕ್ಟೋಬರ್ ತಿಂಗಳುಗಳಲ್ಲಿ ಮಳೆ ಸಾಕಷ್ಟು ಬಂದಿದ್ದರಿಂದ ಬಾವಿಗಳಲ್ಲಿ ನೀರು ಬಂದಿದೆ. ಆದರೆ ಹಿಂಗಾರು ಪೀಕು ಬಾರದ ಕಾರಣ ನಮ್ಮ ಭಾಗದಲ್ಲಿ ದುಷ್ಕಾಲ ಪರಿಸ್ಥಿತಿ ಬಂದಿದೆ. ಜೋಳ ನಮ್ಮಲ್ಲಿ ಸಿಗುತ್ತಿಲ್ಲ; ಈ ಕಾರಣದಿಂದ ನಾನು ಸರ್ಕಾರದಲ್ಲಿ ಪ್ರಾರ್ಥನೆ ಮಾಡುವುದೇನೆಂದರೆ, ನಮ್ಮ ಭಾಗದಲ್ಲಿರುವ ಬಾವಿಗಳನ್ನು ಸುಧಾರಣೆ ಮಾಡಿ ಅವುಗಳ ಮೂಲಕ ವ್ಯವಸಾಯಕ್ಕೆ ಅನುಕೂಲ ಮಾಡಿಕೊಂಡಬೇಕು. ವರ್ಲ್ಡ್ ಬ್ಯಾಂಕ್ ಸ್ಕೀಮ್‌ನಿಂದ ನಮ್ಮ ಸಿಂದಿಗಿಗೆ ಅನುಕೂಲವಾಗುವುದಿಲ್ಲ ಅಪ್ಪರ್ ಕೃಷ್ಣ ಯೋಜನ ಈಗಲೇ ಮುಗಿಯುವ ಸಂಭವವಿಲ್ಲ ಅದಕಾರಣ ಬಾವಿ ನೀರನ್ನೇ ನಾವು ಆಶ್ರಯ ಮಾಡಬೇಕಾಗಿದೆ. ಈಗ ನಮ್ಮಲ್ಲಿ ಯಾವ ಬೆಳೆಯನ್ನು ಬೆಳೆದಿಲ್ಲ ಈ ಕಾರಣದಿಂದ ಅಧಿಕಾರಿಗಳು ಬಂದು ಲೆವಿ ವಸೂಲಿ ಮಾಡುತ್ತಾರೆಂಬ ಭಯವೂ ಸಹ ನಮಗೆ ಇಲ್ಲ. ರೈತರು ತಕಾವಿ ಲೋನ್ ತೆಗೆದುಕೊಂಡಿದ್ದಾರೆ. ಆದರೆ ಅದನ್ನು ತೀರಿಸುವುದಕ್ಕೆ ಅವರಿಗೆ ಸಾಧ್ಯವಾಗಿಲ್ಲ; ಸರ್ಕಾರದವರು ಆ ಸಾಲವನ್ನು ಬಡ್ಡಿಯಿಲ್ಲದೆ ವಸೂಲಿ ಮಾಡಬೇಕು. ಆಗ ನಾನೇ ನಿಂತು ಆ ಸಾಲವನ್ನು ವಸೂಲಿ ಮಾಡುತ್ತೇನೆ. ಹೊಲ ಮಾರಿ ಆ ಸಾಲ ತೀರಿಸಿ ಸಾಲದಿಂದ ಋಣಮುಕ್ತರಾಗಿ ಎಂದು ನಾನು ರೈತರಿಗೆ ಹೇಳುತ್ತೇನೆ. ಅದಕಾರಣ ಇದರ ಬಗ್ಗೆ ಸರ್ಕಾರದವರು ವಿಚಾರ ಮಾಡಬೇಕು. ಮಾನ್ಯ ರೆವಿನ್ಯೂ ಮಂತ್ರಿಗಳು ಅದು ಸಾಧ್ಯವಿಲ್ಲವೆಂದು ಹೇಳುತ್ತಾರೆ. ಕೂಸಿಗೆ ಕುಡಿಯಲು ಹಾಲೇ ಇಲ್ಲ ಎಂದರೆ, ಅದು ಹಾಗೆಯೇ ಸಾಯಲಿ ಎಂದರೆ ಹೇಗೆ? ಕೊ-ಅಪರೇಟಿವ್ ಸೊಸೈಟಿಗಳಲ್ಲಿ ಸಾಲ ತೆಗೆದುಕೊಂಡರೆ 20 ರಿಂದ 24 ಪರ್ಸೆಂಟ್ ಬಡ್ಡಿ ಹಾಕುತ್ತಾರೆ; ಆದರೂ ಸಹ ಕೆಲವು ರೈತರು ವಿದ್ಯುಚ್ಛಕ್ತಿ ಬರುತ್ತದೆಂದು ಕಿರ್ಲೋಸ್ಕರ ಪಂಪ್‌ಸೆಟ್ಟುಗಳನ್ನು ಹಾಕಿಸಿದ್ದಾರೆ. ಅದಕಾರಣ ನಾನು ಮಾನ್ಯ ತ್ರೀಂಠಯ್ಯನವರಲ್ಲಿ ಪ್ರಾರ್ಥನೆ ಮಾಡಿಕೊಳ್ಳುವೇನೆಂದರೆ, ಆ ಭಾಗಕ್ಕೆ ಜಾಗ್ರತೆ ವಿದ್ಯುಚ್ಛಕ್ತಿ, ಒದಗಿಸಿ ರೈತರಿಗೆ ಅನುಕೂಲ ಮಾಡಿಕೊಡಬೇಕೆಂದು ಹೇಳುತ್ತೇನೆ. ಭೂಕಂದಾಯ ವಸೂಲ ಮಾಡಿ, ನಾನು ಬೇಡ ಎಂದು ಹೇಳುವುದಿಲ್ಲ ಅಧಿಕಾರಿಗಳಿಗೆ ಪಗಾರ ಕೊಡಬೇಕಾದರೆ ಸರ್ಕಾರಕ್ಕೆ ಹಣ ಬೇಕಾಗುತ್ತದೆ ಅದಕಾರಣ ಭೂಕಂದಾಯ ವಸೂಲಿ ಮಾಡಿ; ಆದರೆ ನಮ್ಮನ್ನು ಅನ್ನದ ತೊಂದರೆಯಿಂದ ಮಾತ್ರ ದೂರ ಮಾಡಿ. ಈ ಅಸೆಂಬ್ಲಿ ಮುಗಿದ ಮೇಲೆ 8 ಅಥವಾ 15 ದಿವಸಗಳು ಕಳೆದ ಮೇಲೆ ವ್ಯವಸಾಯ ಮಂತ್ರಿಗಳು, ಮಾನ್ಯ ಮುಖ್ಯಮಂತ್ರಿಗಳು, ಮತ್ತು ಒಕ್ಕಲುತನಕ್ಕೆ ಸಂಬಂಧ ಪಟ್ಟ ಇತರೇ ಮಂತ್ರಿಗಳು

ಮತ್ತು ಅಧಿಕಾರಿಗಳು ನಮ್ಮ ಭಾಗಕ್ಕೆ ಬಂದು ಎರಡು ದಿವಸಗಳ ಕಾಲ ಅಲ್ಲಿಯೇ ಇದ್ದು, ಬಾವಿ ನೀರನ್ನು ಯಾವ ರೀತಿ ಉಪಯೋಗಿಸಿಕೊಳ್ಳಬಹುದು, ವ್ಯವಸಾಯ ಕ್ಷೇತ್ರದಲ್ಲಿ ಯಾವ ರೀತಿ ಮುಂದೆ ಬರಬೇಕು ಎಂಬ ಬಗ್ಗೆ ಸಲಹೆಗಳು ಕೊಡಿ. ಎಂ.ಎಲ್.ಎ.ಗಳಿಗೆ ಬಸ್ ಪಾಸ್ ಇರುವುದರಿಂದ ಎಲ್ಲ ಪಾರ್ಟಿಯ ಮುಖಂಡರು ಮತ್ತು ನಮ್ಮ ವಿರೋಧಪಕ್ಷದ ನಾಯಕರೂ ಸಹ ಆ ಸಮಯದಲ್ಲಿ ಅಲ್ಲಿಗೆ ಬಂದು ಸಲಹೆ ಮಾಡಬೇಕೆಂದು ಕೇಳಿಕೊಳ್ಳುತ್ತೇನೆ.

ಶ್ರೀ ಡಿ. ದೇವರಾಜ ಅರಸ್ – ನಾನು ಅಲ್ಲಿಗೆ ಖಂಡಿತ ಬರುತ್ತೇನೆ.

ಶ್ರೀ ಎಸ್.ವೈ. ಪಾಟೀಲ – ತಾವು ಒಂದು ಎರಡು ದಿವಸ ಅಲ್ಲಿಯೇ ಇರಬೇಕು ಒಂದೆರಡು ತಾಸು ಇದ್ದರೆ ನಮ್ಮ ಆಹಾರದ ಸಮಸ್ಯೆ ಬಗೆಹರಿಯುವುದಿಲ್ಲ; ಮಾನ್ಯ ದೇವೇಗೌಡರು ಎಲ್ಲ ವಿಷಯಗಳ ಮೇಲೂ ಮಾತನಾಡುತ್ತಾರೆ. ಆದರೆ ನಾನು ವ್ಯವಸಾಯದ ಬಗ್ಗೆ ಮಾತ್ರ ಮಾತನಾಡುತ್ತಿದ್ದೇನೆ. ಆದಕಾರಣ ಅಲ್ಲಿಯ ರೈತರ ಕಷ್ಟವನ್ನು ತಾವು ತಿಳಿದು ಕೊಳ್ಳಬೇಕು. ಇಂದು ಹೆಣ್ಣು ಮಕ್ಕಳು ಮತ್ತು ಗಂಡುಮಕ್ಕಳು ಎಂಬ ಭೇದ ಇಲ್ಲದೆ ಮಂತ್ರಿ ಸ್ಥಾನಕ್ಕೆ ಬರಬೇಕೆಂದು ಹೋರಾಟ ಮಾಡುತ್ತಾರೆ; ಆದರೆ ನಮ್ಮ ಇಂಡಿ ಮತ್ತು ಸಿಂಧಗಿಯ ಸಮಸ್ಯೆಯನ್ನು ತಿಳಿದುಕೊಳ್ಳುವುದಕ್ಕೆ ಯಾರೂ ಸಹ ಮುಂದೆ ಬರುತ್ತಿಲ್ಲ; ನಮಗೆ ಇಂದು ಕನ್ನಡ ಶಾಲೆಗಳ ಅವಶ್ಯಕತೆ ಇಲ್ಲ; ಪೋಲೀಸರ ಉಪಯೋಗ ನಮಗೆ ಬೇಕಾಗಿಲ್ಲ. ನಮಗಿರುವುದು ಅನ್ನದ ಸಮಸ್ಯೆ ಒಂದೇ. ಅದಕ್ಕೆ ಏನಾದರು ಒಂದು ದಾರಿ ತೋರಿಸಿ ಕೊಡಿ; ಇಲ್ಲವೇ ನಮ್ಮ ಜನರಿಗೆ ಸಾಯುವಷ್ಟು ವಿಷವನ್ನು ಒದಗಿಸಲು ಸಪ್ಲಿಮೆಂಟರಿ ಡಿಮ್ಯಾಂಡ್ ನಲ್ಲಿ ಹಣ ಒದಗಿಸಿ. ಈಗಿನ ಮುಖ್ಯಮಂತ್ರಿಗಳನ್ನು ಆ ಸ್ಥಾನದಿಂದ ತೆಗೆಯಬೇಕೆಂದು ನಾವು ಮನಸ್ಸು ಮಾಡಿದೆವು. ಆದರೆ ಅವರು ಆ ಸ್ಥಾನದಲ್ಲಿ ಘಟ್ಟಿಯಾಗಿ ಕುಳಿತಿದ್ದಾರೆ. ಇರಲಿ, ಬೇಕಾದಷ್ಟು ದಿವಸ ಇರಲಿ. ಆದರೆ ಅವರಿಗೆ ನಮ್ಮ ಬಗ್ಗೆ ಕನಿಕರ ಇಲ್ಲದಿದ್ದರೆ ಏನು ಮಾಡುವುದು? ಅವರು ನಮ್ಮ ಬಗ್ಗೆ ಕನಿಕರ ಇಟ್ಟುಕೊಂಡು ಅಸೆಂಬ್ಲಿ ಮುಗಿದ ನಂತರ ಅಲ್ಲಿ ಒಂದು ಎರಡು ದಿವಸ ಇದ್ದು ಅಲ್ಲಿಯ ಸಮಸ್ಯೆಗಳನ್ನು ತಿಳಿದುಕೊಂಡು ಒಂದು ಪರಿಹಾರ ಸೂಚಿಸಬೇಕೆಂದು ತಮ್ಮಲ್ಲಿ ಕೈಜೋಡಿಸಿ ಕೇಳಿಕೊಳ್ಳುತ್ತೇನೆ. ಇದು ನನ್ನ ಮಿನಿಮಮ್ ಚಾಲೆಂಜ್; ತಾವು ನಮ್ಮ ಊರಿಗೆ ಬಂದು ಮೊಲೆಯಲ್ಲಿ ಹಾಲಿದ್ದರೆ ಕುಡಿಸಿ, ಇಲ್ಲದಿದ್ದರೆ ಮೊಲೆಗೆ ಹಾಲನ್ನು ತಂದು ಹಾಕಿ ಎಂದು ಹೇಳಿ ನನ್ನ ಮಾತನ್ನು ಮುಗಿಸುತ್ತೇನೆ.

## ಬೆಳೆಯೇ ಇಲ್ಲ, ಲೇವಿ ಕೊಡುವುದು ಹೇಗೆ

19ನೇ ಜುಲೈ 1975

ಶ್ರೀ ಎಸ್.ವೈ. ಪಾಟೀಲ – ಅಧ್ಯಕ್ಷರೆ, ಇವತ್ತಿನ ದಿವಸ ನಮ್ಮ ಕಡೆಯಲ್ಲಿ ಸರಿಯಾಗಿ ಮಳೆಯಾಗದೆ ಬೆಳೆ ಬಂದಿಲ್ಲ. ಆದರೂ ಕೂಡ ಅಲ್ಲಿ ಅಧಿಕಾರಿಗಳು ಲೇವಿ ವಸೂಲಿ ಮಾಡುತ್ತಿದ್ದಾರೆ. ಇದರಿಂದ ಅಲ್ಲಿಯ ಜನರಿಗೆ ಬಹಳ ತೊಂದರೆಯಾಗಿದೆ. ಅಲ್ಲಿಗೆ ನೀವು ಬರುವುದು ಬೇಡ, ಮಾನ್ಯ ಘೋರ್ಪಡೆಯವರು ಬರುವುದು ಬೇಡ, ಈ ಸಭೆಯ ಸದಸ್ಯರನ್ನು ಯಾರನ್ನಾದರೂ ಕಳುಹಿಸಿದರೆ ಆಗ ತಮಗೆ ಅಲ್ಲಿಯ ಕಷ್ಟ ಅರ್ಥವಾಗುತ್ತದೆ ಎಂದು ತಿಳಿಸುತ್ತೇನೆ. ಇವತ್ತಿನ ದಿವಸ

ನಾವು ಅಲ್ಲಿಯ ಪ್ರಜಾಪ್ರತಿನಿಧಿಗಳಾಗಿ ನಮ್ಮ ಕಡೆಯ ಜನತೆಗೆ ಏನೂ ಸೌಕರ್ಯ ಮಾಡುವುದಕ್ಕೆ ಆಗುತ್ತಿಲ್ಲ ಎಂದು ಹೇಳಬಹುತ್ತೇನೆ. ನಮ್ಮ ಕಡೆಯಲ್ಲಿ ಅಧಿಕಾರಿಗಳು ಬಹಳ ಆಕ್ರೋಶದಿಂದ ಲೆವಿ ವಸೂಲಿ ಮಾಡುತ್ತಿದ್ದಾರೆ. ನಾನು ಒಂದು ತಿಂಗಳು ಅಸೆಂಬ್ಲಿ ಬಿಟ್ಟು ಇರಬೇಕಾದರೆ ಅಲ್ಲಿ ನಮ್ಮ ಕಡೆ ಲಾ ಅಂಡ್ ಆರ್ಡರ್ ಇಲ್ಲ, ನಾನು ಧಾನ್ಯ ರಕ್ಷಣೆ ಮಾಡಬೇಕಾದರೆ ವಿರೋಧಪಕ್ಷದ ನಾಯಕರಾದ ಮಾನ್ಯ ದೇವೇಗೌಡರಿಗೆ ಹೇಳಿ ಹೋಗಿದ್ದೇನೆ. ಈಗ ನಮ್ಮ ಕಡೆಯಲ್ಲಿ ಅವರಿಗೆ ಯಾವುದು ಲೆಕ್ಕ ಇಲ್ಲದೇ ಲೆವಿಯನ್ನು ವಸೂಲಿ ಮಾಡುತ್ತಿದ್ದಾರೆ. ಆದುದರಿಂದ ನೀವು ನಮ್ಮಲ್ಲಿಗೆ ಈ ಸಭೆಯಿಂದ ಯಾವ ಒಬ್ಬ ಸದಸ್ಯರನ್ನು ಕಳುಹಿಸಿ ಕೊಟ್ಟರು ಸರಿಯೇ, ಆಗ ತಮಗೆ ಅರ್ಥವಾಗುತ್ತದೆ. ಈಗ ಆ ರೀತಿ ಕಳುಹಿಸಿಕೊಡುವುದನ್ನು ಬಿಟ್ಟು ಹಾಸನಕ್ಕೆ ಹೋಗುತ್ತೇವೆ. ಅಲ್ಲಿ ಹೋಗುತ್ತೇವೆ. ಇಲ್ಲಿ ಹೋಗುತ್ತೇವೆ ಎಂದು ಹೇಳಿದರೆ ತಮಗೆ ಅರ್ಥವಾಗುವುದಿಲ್ಲ. ಇವತ್ತಿನ ದಿವಸ ನಮ್ಮ ಕಡೆಯಲ್ಲಿ ಪರಿಸ್ಥಿತಿ ಏನಾಗಿದೆ ಅದನ್ನು ತಿಳಿದುಕೊಳ್ಳಬೇಕಾದುದು ಮುಖ್ಯ ಇದೆ. ಏಕೆಂದರೆ ನಾನು ಇವತ್ತಿನ ದಿವಸ ಅಸೆಂಬ್ಲಿ ಬಿಟ್ಟು ಊರಿಗೆ ಹೋಗುತ್ತಾ ಇದ್ದೇನೆ. ಇನ್ನು ನಾವು ಇಲ್ಲಿಗೆ ಬರಲಿಕ್ಕೆ ಸಾಧ್ಯವಿಲ್ಲ. ಆದ್ದರಿಂದ ತಾವು ಮತ್ತು ಮಾನ್ಯ ಘೋರ್ಪಡೆಯವರು ಅಲ್ಲಿಗೆ ಬಂದು ನೋಡಿದರೆ ಅಲ್ಲಿಯ ಪರಿಸ್ಥಿತಿ ತಮಗೆ ಗೊತ್ತಾಗುತ್ತದೆ. ತಾವು ಬರಲಿಕ್ಕೆ ತೊಂದರೆ ಇದ್ದರೆ ಈ ಮನೆಯ ಸದಸ್ಯರನ್ನಾದರೂ ಕಳುಹಿಸಿಕೊಡಿ ಎಂದು ಕೇಳಿಕೊಳ್ಳುತ್ತೇನೆ.

**ಶ್ರೀ ಎನ್. ಪುಟ್ಟ ಮಾಸ್ತಿಗೌಡ** – ತಾವು ಹೇಳಿದಂತೆ ಎಲ್ಲಾ ಕಡೆಗೂ ಈ ಸಭೆಯ ಸದಸ್ಯರನ್ನು ಕಳುಹಿಸಿಕೊಟ್ಟು ಅಲ್ಲಿಯ ಪರಿಸ್ಥಿತಿ ತಿಳಿದುಕೊಳ್ಳುವುದಕ್ಕಿಂತ ಹೆಚ್ಚಾಗಿ, ಅಲ್ಲಲ್ಲಿ ಏನೇನು ತೊಂದರೆಗಳು ಇವೆ ಎಂದು ಅಧಿಕಾರಿಗಳಿಂದ ವರದಿ ತರಿಸಿಕೊಂಡು ಕೆಲಸ ಮಾಡಬೇಕಾಗುತ್ತದೆ. ಈಗ ಅಧಿಕಾರಿಗಳು ತಪ್ಪು ರಿಪೋರ್ಟ್ ಕೊಡುತ್ತಾರೆ ಎನ್ನುವುದು ಬೇಡ, ಈಗ ಅಧಿಕಾರಿಗಳು ಲೆವಿ ವಸೂಲು ಮಾಡಬೇಕಾದರೆ, ಅವರು ನಿಯಮಕ್ಕೆ ವಿರುದ್ಧವಾಗಿ ಮಾಡುವುದಕ್ಕಾಗುವುದಿಲ್ಲ.

**ಶ್ರೀ ಎಸ್.ವೈ. ಪಾಟೀಲ** – ಅಧ್ಯಕ್ಷರೆ, ಇವತ್ತು ನಮ್ಮ ಕಡೆಗಳಲ್ಲಿ ಏನಾಗಿದೆ ಎಂದರೆ ಡೆಪ್ಯುಟಿ ಕಮಿಷನರ್ ಹೇಳುವ ಪ್ರಕಾರ ಅಸಿಸ್ಟೆಂಟ್ ಕಮಿಷನರ್ ಕೇಳಬೇಕಾಗುತ್ತದೆ. ಅಸಿಸ್ಟೆಂಟ್ ಕಮಿಷನರ್ ಹೇಳಿದ ಪ್ರಕಾರ ತಹಸೀಲ್ದಾರ್ ಅವರು ಕೇಳಬೇಕಾಗುತ್ತದೆ, ನಂತರ ತಹಸೀಲ್ದಾರ್ ಹೇಳಿದ ಪ್ರಕಾರ ಅಲ್ಲಿಯ ತಲಾಟಿ ಜನರು ಮಾಡಬೇಕಾಗುತ್ತದೆ. ನಾವು ಇವತ್ತಿನ ದಿವಸ ಅಸೆಂಬ್ಲಿ ಸದಸ್ಯರಾಗಿ ಒಂದು ಲಕ್ಷ ಜನರಿಂದ ಎಲೆಕ್ಟ್ ಆಗಿ ಬಂದು ನಾವು ಯಾವುದೇ ರೀತಿಯಿಂದ ಜನರಿಗೆ ಸೌಕರ್ಯ, ಕಲ್ಪಿಸಿಕೊಡುವುದಕ್ಕಾಗುತ್ತಿಲ್ಲ. ಇಂತಹ ಪರಿಸ್ಥಿತಿಯಲ್ಲೂ ಸಹ ಅಲ್ಲಿಯ ಅಧಿಕಾರಿಗಳು ಲೆವಿ ವಸೂಲಿ ಮಾಡುತ್ತಿದ್ದಾರೆ. ಆದುದರಿಂದ ನಾನು ಇದರ ಬಗ್ಗೆ ಒತ್ತಿ ಹೇಳಬೇಕಾಗಿದೆ. ನಮ್ಮ ಕಡೆ ಸರಿಯಾಗಿ ಮಳೆ ಬರುವುದಿಲ್ಲ ಸರಿಯಾಗಿ ಬೆಳೆ ಬರುವುದಿಲ್ಲ. ನೀವು ಸುಮ್ಮ ಸುಮ್ಮನೆ ಟೂರ್ ಮಾಡಿಕೊಂಡು ಬಂದರೆ ಆಗುವುದಿಲ್ಲ, ತಾವು ಯಾವ ಮಂತ್ರಿಗಳನ್ನೇ ಆಗಲಿ ಇಲ್ಲಿಂದ ನಮ್ಮ ಕಡೆಗೆ ಕಳುಹಿಸಿಕೊಟ್ಟರೆ ಅಲ್ಲಿಯ ವಿಚಾರ ತಿಳಿಯಲಿಕ್ಕೆ ಆಗುತ್ತದೆ ಎಂದು ನಾನು ಹೇಳುತ್ತೇನೆ. ಇವತ್ತಿನ ದಿವಸ ನಮ್ಮ ಕಡೆಯಲ್ಲಿ ಲೆವಿ ಬಗ್ಗೆ ಧಾನ್ಯವನ್ನು ವಸೂಲಿ ಮಾಡುತ್ತಿದ್ದಾರೆ. ಆದರೆ ನಾನು ಲೆವಿ ವಸೂಲಿ ಮಾಡುವುದನ್ನು ಬೇಡ ಎಂದು ಹೇಳುವುದಿಲ್ಲ. ಧಾನ್ಯ ಇಲ್ಲದೇ

ಇದ್ದವರಿಗೆ ಈ ರೀತಿ ತೊಂದರೆ ಕೊಡುವುದು ಬೇಡ ಎಂದು ನಾನು ಹೇಳುವುದು. ಈಗ ಈ ನಿಯಮ ಏತಕ್ಕೆ ಹೇಳುತ್ತಿದ್ದೇನೆಂದರೆ ನಾನು ಯಾವಾಗಲೂ ಕೂಡ ಸುಮ್ಮನೆ ಅಸೆಂಬ್ಲಿ ಮಾತನಾಡುವುದಕ್ಕೆ ಹೋಗುವುದಿಲ್ಲ ಈಗ ತಾವು ಏನು ಅಪ್ಪಣೆ ಹೇಳುತ್ತೀರಿ ಅದನ್ನು ಮಂಜರಿಸಬೇಕೆಂದು ನಮ್ಮ ಕರ್ತವ್ಯ ಇವತ್ತಿನ ದಿವಸ ನಿಮ್ಮ ಅಧಿಕಾರಿಗಳನ್ನು ನಂಬುವುದಾದರೆ ಈ ಅಸೆಂಬ್ಲಿ ಏತಕ್ಕೆ ಬೇಕಾಗಿತ್ತು. ಈ ಮಂತ್ರಿಮಂಡಲ ಏತಕ್ಕೆ ಬೇಕಾಗಿತ್ತು ಎಂದು ನಾನು ತಮ್ಮನ್ನು ಕೇಳುತ್ತೇನೆ. ಇವತ್ತು ತಾವು ನಿಮ್ಮ ಅಧಿಕಾರಿಗಳನ್ನು ನಂಬುವುದಾದರೆ ನನ್ನ ಜೊತೆಯಲ್ಲಿ ನೀವು ಬನ್ನಿ, ಪ್ರತಿಯೊಂದು ಮನೆಗೂ ತಮ್ಮನ್ನು ಕರೆದುಕೊಂಡು ಹೋಗಿ ತೋರಿಸುತ್ತೇನೆ. ಅಲ್ಲಿ ಜನರು ಏನು ತೊಂದರೆ ಅನುಭವಿಸುತ್ತಾರೆ ಅದು ತಮಗೆ ಅರ್ಥವಾಗುತ್ತದೆ. ಇವತ್ತು ತಾವಾಗಲಿ ಅಥವಾ ಈ ಮನೆಯ ಸದಸ್ಯರನ್ನು ಯಾರನ್ನು ನಮ್ಮ ಕಡೆಗೆ ಕಳುಹಿಸದೇ ಹೋದರೆ ನಾನು ಊರಿಗೆ ಹೋಗುವುದಕ್ಕೆ ತಯಾರಿಲ್ಲ. ಏಕೆಂದರೆ ಅಲ್ಲಿ ಬಲತ್ಕಾರದಿಂದ ಧಾನ್ಯ ವಸೂಲಿ ಮಾಡುತ್ತಿದ್ದಾರೆ. ಈಗ ಅಲ್ಲಿಯ ಜನತೆ ಬಂದು ನಮ್ಮನ್ನು ಇಂತಹ ಪರಿಸ್ಥಿತಿ ಇರುವಾಗ ತಾವು ಏನು ಮಾಡುತ್ತಿದ್ದೀರಿ ಎಂದು ಕೇಳುತ್ತಾರೆ. ಆದ್ದರಿಂದ ನಾನು ತಮ್ಮಲ್ಲಿ ದಯವಿಟ್ಟು ಕೇಳಿಕೊಳ್ಳುವುದು ಏನೆಂದರೆ ಖಂಡಿತವಾಗಿ ಮಾನ್ಯ ನಾಗರಾಳ್ ಸಾಹೇಬರವರನ್ನಾಗಲಿ, ಇತರೇ ಯಾವ ಒಬ್ಬ ಮಂತ್ರಿಯಾದರು ಸರಿಯೇ ನಮ್ಮಲ್ಲಿಗೆ ಕಳುಹಿಸಿಕೊಡಬೇಕು ಎಂದು ತಮ್ಮಲ್ಲಿ ಪ್ರಾರ್ಥನೆ ಮಾಡಿಕೊಳ್ಳುತ್ತೇನೆ.

**ಅಧ್ಯಕ್ಷರು** – ಎಲ್ಲದಕ್ಕೂ ಒಂದು ರಾಗ ಹಾಡಿದರೆ ಹೇಗೆ?

**ಶ್ರೀ ಜಿ.ಎಲ. ಕಬಾಡಿ**–ಪ್ರತಿಯೊಬ್ಬರ ಹತ್ತಿರ ಇದ್ದ ಕಾಳನ್ನು ಜಪ್ತಿ ಮಾಡಿ ತೆಗೆದುಕೊಳ್ಳುತ್ತಿದ್ದಾರೆ.

**ಶ್ರೀ ಎಸ್.ವೈ. ಪಾಟೀಲ** – ನಮ್ಮ ಪರಿಸ್ಥಿತಿ ಯಾರಿಗೂ ಇಲ್ಲ. ಕೃಷ್ಣಕುಮಾರರನ್ನು ಕಳಿಸಿರಿ ಅಥವಾ ಅಧಿಕಾರಿಗಳನ್ನು ಕಳಿಸಿ, ನಾವು ತೋರಿಸುತ್ತೇವೆ ಅಥವಾ ಮಿನಿಸ್ಟರ್ ನಾಗರಾಳ ಅವರು ಬರಲಿ.

## ಆಯವ್ಯಯದ ಮೇಲಿನ ಭಾಷಣ

2ನೇ ಮಾರ್ಚ 1976

**ಶ್ರೀ ಎಸ್.ವೈ. ಪಾಟೀಲ** (ಸಿಂಧಗಿ)–ಮಾನ್ಯ ಸಭಾಧ್ಯಕ್ಷಿಣೀಯರೇ, ಮಾನ್ಯ ಘೋರ್ಪಡೆಯವರು ತಮ್ಮ ಆಯವ್ಯಯ ಭಾಷಣದಲ್ಲಿ ಅನೇಕ ಅಂಕಿಸಂಖ್ಯೆಗಳನ್ನು ಕೊಟ್ಟು ತುಲನಾತ್ಮಕ ದೃಷ್ಟಿಯಿಂದ ಅನೇಕ ವಿಚಾರಗಳನ್ನು ವಿಚಾರಮಾಡಿದ್ದಾರೆ. ಸರ್ಕಾರದವರು ಯಾವ ರೀತಿ ಉಚಿತವಾದ ಅಭಿಪ್ರಾಯವನ್ನು ತೆಗೆದುಕೊಂಡಿದ್ದಾರೆ. ಎನ್ನತಕ್ಕ ಅಂಕಿಸಂಖ್ಯೆಗಳನ್ನು 6. 7. 8. 9 ನೇ ಪ್ಯಾರಾದಲ್ಲಿ ತುಲನಾತ್ಮಕ ದೃಷ್ಟಿಯಿಂದ ವಿಚಾರ ಮಾಡಿ ಸರ್ಕಾರದವರು ಉತ್ತಮವಾದ ಕೆಲಸಗಳನ್ನು ಮಾಡಿದ್ದಾರೆ ಎಂದು ಹೇಳಿಕೊಂಡಿದ್ದಾರೆ. ಅನೇಕ ಸಲ ನೀರಾವರಿ ಯೋಜನೆಗಳ

ಬಗ್ಗೆ ಮತ್ತು ದೇಶದ ಅಭಿವೃದ್ಧಿ ಕಾರ್ಯಗಳ ಬಗ್ಗೆ ಬಹಳವಾಗಿ ಅವರು ಹೇಳಿಕೊಂಡಿದ್ದಾರೆ. ಇದೆಲ್ಲಾ ನೋಡಿ ಭಾಷಣ ಬಹಳ ಆಶಾದಾಯಕವಾಗಿದೆ. ಪ್ರತಿಯೊಬ್ಬ ಮನುಷ್ಯನು ರಾಷ್ಟ್ರದಲ್ಲಿ ತನಗೆ ಅಗತಕ್ಕ ಲಾಭವನ್ನು ಪಡೆಯುವುದಕ್ಕೆ ಅವಕಾಶವಾಗಿದೆ. ಕರ್ನಾಟಕದಲ್ಲಿ ಮೂರು ಕೋಟಿ ಜನತೆಯ ಕಲ್ಯಾಣ ಆಗಬೇಕಾದರೆ ರೇಡಿಯೋದಲ್ಲಿ ಬರತಕ್ಕ, ವೃತ್ತಿ ಪತ್ರಿಕೆಗಳಲ್ಲಿ ಬರತಕ್ಕ ವಿಷಯಗಳನ್ನು ನೋಡಿದರೆ ಆಗುವುದಿಲ್ಲ. ಜನರು ತಮ್ಮ ಭವಿಷ್ಯ ಉತ್ತಮವಾಗುತ್ತದೆ ಎನ್ನುವ ಆಶಾಭಾವನೆಯನ್ನು ಇಟ್ಟು ಕೊಂಡಿದ್ದಾರೆ. ಮಾನ್ಯ ಮಂತ್ರಿಗಳು ರಾಜ್ಯದ 19 ಜಿಲ್ಲೆಗಳಲ್ಲಿ ತಿರುಗಾಡಿ ಎಲ್ಲಾ ಜಿಲ್ಲೆಯ ವಿಷಯಗಳನ್ನು ತಿಳಿದುಕೊಂಡು ಬಂದರೆ ಒಳ್ಳೆಯದು. ನನ್ನ ಮೇಲೆ ಬರೀ ಇಂಡಿ ಸಿಂದಗಿ ಬಗ್ಗೆ ಮಾತನಾಡುತ್ತೇನೆ ಎನ್ನುವ ಆರೋಪ ಇದ್ದೇ ಇರುತ್ತದೆ. ಸರ್ಕಾರದವರು ತಮ್ಮ 20 ಅಂಶದ ಕಾರ್ಯಕ್ರಮದಲ್ಲಿ ನಿವೇಶನ ಕೊಡುವುದು, ಶಿಕ್ಷಣ ಸೌಲಭ್ಯಗಳನ್ನು ಕೊಡುವುದು ಮುಂತಾದ ಉತ್ತಮ ಕೆಲಸಗಳನ್ನು ಮಾಡುತ್ತಿದ್ದಾರೆ. ಇದರ ವಿಷಯವಾಗಿ ರಾಜ್ಯಪಾಲರ ಭಾಷಣದ ಮೇಲೆ ಮಾತನಾಡುವಾಗ ಎಲ್ಲರೂ ಹೊಗಳಿದ್ದಾರೆ. ಇದು ರಾಷ್ಟ್ರೀಯ ಕಾರ್ಯಕ್ರಮ ಎಂದು ಪರಿಗಣಿಸಿ ನಮ್ಮ ಸಹಾನುಭೂತಿಯನ್ನು ತೋರಿಸಿದ್ದೇವೆ. ಮಾನ್ಯ ಸಚಿವರು ತಮ್ಮ ಭಾಷಣದಲ್ಲಿ 1976–77 ನೇ ಸಾಲಿನಲ್ಲಿ ರಾಜ್ಯದ ನೀರಾವರಿ ಯೋಜನೆಯುಗಳಿಗಾಗಿ 230 ಕೋಟಿ ರೂಪಾಯಿಗಳನ್ನು ಖರ್ಚು ಮಾಡಲಾಗುವುದು. ಎನ್ನತಕ್ಕ ಮಾತನ್ನು ಹೇಳಿದ್ದಾರೆ. ಡುವೈತನವರ ಸಹಾಯದಿಂದ 15 ಕೋಟಿ ರೂಪಾಯಿಗಳನ್ನು ಇದಕ್ಕಾಗಿ ಒದಗಿಸುತ್ತಿದ್ದೇವೆಂದೂ ಇದಕ್ಕಾಗಿ ವರ್ಲ್ಡ್‌ಬ್ಯಾಂಕಿನವರಿಂದ 70 ಕೋಟಿ ರೂಪಾಯಿಗಳನ್ನು ಪಡೆಯುತ್ತೇವೆಂದು ಹೇಳಿದ್ದಾರೆ. ನಮ್ಮ ಬಿಜಾಪುರ ಜಿಲ್ಲೆಯ ಜಾಗತಿಕ ಬ್ಯಾಂಕಿನವರು ಬಂದಾಗ ಅಪ್ಪರ್ ಕೃಷ್ಣ ಯೋಜನೆಯ ಬಗ್ಗೆ ಹೇಳಲಾಯಿತು. ಎನ್ನುವ ಮಾತನ್ನು ಹೇಳಿದ್ದಾರೆ. ಆದರೆ ಅವರು ಇದಕ್ಕೆ ಏನು ಹೇಳಿದರು ಎನ್ನುವುದನ್ನು ತಮ್ಮ ಭಾಷಣದಲ್ಲಿ ಯಾವ ಒಂದು ಶಬ್ದವನ್ನು ಹೇಳಿಲ್ಲ. ದಿವಂಗತ ಲಾಲ್ ಬಹದೂರ್ ಶಾಸ್ತ್ರಿಯವರು ಅಪ್ಪರ ಕೃಷ್ಣಾ ಯೋಜನೆಗೆ ಫೌಂಡೇಷನ್ ಅನ್ನು ಹಾಕಿ ಮೂರು ಕೋಟಿಯಲ್ಲಿ ಕನಿಷ್ಟ ಪಕ್ಷ 60–70 ಕೋಟಿ ರೂಪಾಯಿಗಳ ಯೋಜನೆಯನ್ನಾದರೂ ಮಾಡಬೇಕು ಎಂದು ಹೇಳಿದ್ದರು. ಇದು ಈಗ 300 ಕೋಟಿ ರೂಪಾಯಿಗಳಾದರೂ ಕೆಲಸ ಆಗುವಂತಿಲ್ಲ. ಸ್ವಾತಂತ್ರ್ಯ ಸಿಕ್ಕಿದನಂತರ, ಪರಕೀಯರ ಆಡಳಿತ ಹೋದನಂತರ ಬಿಜಾಪುರ ಜಿಲ್ಲೆಯ ಕಡೆಗೆ ಹೆಚ್ಚಿನ ಲಕ್ಷ್ಯ ಕೊಡುತ್ತಾರೆಂದು ತಿಳಿದುಕೊಂಡಿದ್ದೆವು. ಆದರೆ ಇದರ ಬಗ್ಗೆ ಒಂದು ಶಬ್ದವೂ ಇಲ್ಲ. ಬಿಜಾಪುರ, ಚಿತ್ರದುರ್ಗ, ಬಳ್ಳಾರಿ, ಕೋಲಾರ ಇವುಗಳು ದುರ್ದೈವದ ಜಿಲ್ಲೆಗಳು. ಬಳ್ಳಾರಿ ಜಿಲ್ಲೆಯ ಕೆಲಸ ಭಾಗಗಳಲ್ಲಿ ಜನರು ಕಷ್ಟ ಪಡುತ್ತಾರೆ. ತಾವುಗಳು ದಯೆಯಿಂದ ಬಿಜಾಪುರ ಜಿಲ್ಲೆಯ ಕಡೆಗೆ ಎಲ್ಲಾ ದೃಷ್ಟಿಯಿಂದ ಹೆಚ್ಚಿನ ಹಣವನ್ನು ಖರ್ಚು ಮಾಡಿ ಅಲ್ಲಿಯ ಕೆಲಸ ಕಾರ್ಯಗಳನ್ನು ಮಾಡಬೇಕು. ಪ್ರಧಾನ ಮಂತ್ರಿಯವರು ಈಗ 20 ಅಂಶಗಳ ಕಾರ್ಯಕ್ರಮದಲ್ಲಿ ಬಡವರಿಗೆ ನಿವೇಶನ ಕೊಡುವುದು, ಮುಂತಾದ ಕಾರ್ಯಕ್ರಮಗಳನ್ನು ಹಾಕಿಕೊಂಡಿದ್ದಾರೆ. ಆದರೆ ಬಿಜಾಪುರ ಜಿಲ್ಲೆ ಈ ಯಾವ ಅಂಶಗಳಲ್ಲಿ ಬರುತ್ತದೆ? ಬಿಜಾಪುರ ಜಿಲ್ಲೆಯಲ್ಲಿ, ಅದರಲ್ಲಿಯೂ ಇಂಡಿಯ ಸಿಂದಗಿ ತಾಲ್ಲೂಕುಗಳಲ್ಲಿ ಎಷ್ಟು ಜನರಿಗೆ ಸೈಟುಗಳನ್ನು ಕೊಟ್ಟಿದ್ದೀರಿ? ತಾಂಡವಲ್ಲಿರಾತಕ್ಕ ಹರಿಜನರಿಗೆ ಎಷ್ಟು ಸೈಟುಗಳನ್ನು ಕೊಟ್ಟಿದ್ದೀರಿ? ಅಲ್ಲಿ ಯಾವ ಅಂಶದ ಕಾರ್ಯಕ್ರಮವೂ ಇಲ್ಲ.

**ಶ್ರೀ ಎಂ.ವೈ. ಘೋರ್ಪಡೆ** – ತಾವು ಜೀವಂತವಾಗಿ ಇರುವಾಗಲೇ ಇದನ್ನು ಮಾಡಿಕೊಡುತ್ತೇವೆ. ದಯವಿಟ್ಟು ಗಲಾಟೆ ಮಾಡಬೇಡಿ

**ಶ್ರೀ ವೈ.ಎಸ್. ಪಾಟೀಲ** – ನಾನು ಜೀವಂತ ಇರಲಿ, ಬಿಡಲಿ. ನನ್ನ ಆಯುಷ್ಯಕ್ಕೂ ಇದಕ್ಕೂ ಸಂಬಂಧ ಇಲ್ಲ. ನಾನು ನಾಳೆಯೇ ಸತ್ತರೂ ಅಡ್ಡಿಯಿಲ್ಲ. ತಾವು ಈ ಅಪ್ಪರ್ ಕೃಷ್ಣಾ ಎಂದು ಏನು ಮಾಡುತ್ತಿದ್ದೀರಿ, ಅದನ್ನು ಕೇಳಿದರೆ ಸಾಕು. ಇಂಥ ದುರ್ದೈವದ ಸಮಾಜದಲ್ಲಿ ಇಂಥ ದುರ್ದೈವದ ಘೋರಾರಣ್ಯದಲ್ಲಿ ಇರುವುದಕ್ಕಿಂತ ಸಾಯುವುದೇ ಒಳ್ಳೆಯದು. ಅದೇ ಉತ್ತಮವಾದ ಕೆಲಸ. ಇವತ್ತು ನಾವು ಅಪೋಜಿಷನ್ ಪಾರ್ಟಿಯಲ್ಲಿದ್ದೇವೆ. ನೀವು ಮುಂದೆ 20 ಅಂಶದ ಕಾರ್ಯಕ್ರಮ ಅಲ್ಲ 30 ಅಂಶದ ಕಾರ್ಯಕ್ರಮಗಳನ್ನು ಜಾರಿಗೆ ತನ್ನಿ, ಆದರೆ ಮೆಜಾರಿಟಿಯಂತೂ ಬರುವುದಕ್ಕೆ ಸಾಧ್ಯವಿಲ್ಲ. ನೀವು ಅಪ್ಪರ್ ಕೃಷ್ಣ ಕೆಲಸ ಬಿಟ್ಟು ನಿವೇಶನ ಹಂಚುವುದು ಆಗಲಿ, ಇತರೇ ಯಾವುದೇ ಆಗಲಿ, ಎಷ್ಟೇ ಅಂಶಗಳ ಕಾರ್ಯಕ್ರಮಗಳನ್ನು ಜಾರಿಗೆ ತಂದರೂ ಕೂಡಾ ಆಗುವುದಾದರೂ ಏನು?

ಸ್ವಾಮಿ, ಇನ್ನು ಎರಡನೆಯದಾಗಿ ವಿದ್ಯುಚ್ಛಕ್ತಿ ಬಗ್ಗೆ ಬಹಳವಾಗಿ ಮಾತನಾಡಿದ್ದೇನೆ. ಇವತ್ತು ನಮ್ಮ ರಾಜ್ಯದಲ್ಲಿ ನೀರಾವರಿ ಕೆಲಸ ಮಾಡಿ, ಅಗ್ರಿಕಲ್ಚರ್ ಯೂನಿವರ್ಸಿಟಿ ಮಾಡಿ, ಕಾಲೇಜು ಶಿಕ್ಷಣ ಮಾಡಿ ಏನಾದರೂ ಮಾಡಿಕೊಳ್ಳಿ. ನಮ್ಮ ಸಿಂದಗಿ ಮತ್ತು ಇಂಡಿ ಕಡೆ 15 ಸಾವಿರ ಬಾವಿಗಳನ್ನು ಮಾಡಿಸಿ ಎಲೆಕ್ಟ್ರಿಫಿಕೇಷನ್ ಮಾಡಿದರೆ ಅಷ್ಟೇ ಸಾಕು. ಉಳಿದ ಕಡೆ ಏನಾದರೂ ಮಾಡಿಕೊಳ್ಳಿ. ಇವತ್ತು ತಾವು ಕಾಳಿನದಿ ವಿದ್ಯುತ್ ಯೋಜನೆಗೆ 50 ಕೋಟಿ ರೂಪಾಯಿಗಳನ್ನು ಖರ್ಚು ಮಾಡುತ್ತಿದ್ದೀರಿ. ಆದರೆ ಅಪ್ಪರ್ ಕೃಷ್ಣಾವನ್ನು ನಾನು ಸಾಯುವುದರೊಳಗೆ ಮಾಡುತ್ತೇವೆಂದು ಹೇಳುತ್ತಿದ್ದೀರಿ. ಆದರೆ ಅದು ಆಗುವವರೆಗೂ ನಾನು ಸಾಯುವುದಿಲ್ಲ. ಇವತ್ತು ತಾವು ಧಾರಣೆಗಳನ್ನು ಬಹಳ ಕಡಿಮೆ ಮಾಡಿದ್ದೀರಿ ಇದು ಬಹಳ ಸಂತೋಷದ ವಿಷಯ. ಆದರೆ ಇದು ಸರ್ಕಾರದ ಕರ್ತವ್ಯ. ಸ್ವಾಮಿ ಇವತ್ತು ಸರ್ಕಾರ ಕೆಲವು ಪ್ರಯತ್ನಗಳನ್ನು ಮಾಡುತ್ತಿದೆ. ಅದನ್ನು ನಾವು ಅಲ್ಲಗಳೆಯುವುದಕ್ಕೆ ಬರುವುದಿಲ್ಲ. ಉತ್ತಮ ಕಾರ್ಯಗಳನ್ನು ಮಾಡುತ್ತಾ ಇದೆ. ನಾನು ಇವತ್ತು ಒಬ್ಬ ಎಂ.ಎಲ್.ಎ. ಆಗಿ ಆರಿಸಿ ಬಂದಿದ್ದೇನೆ. ನಮ್ಮ ತಾಲ್ಲೂಕಿನ ಜನಗಳ ಸೇವೆಯನ್ನು ನಾನು ಮಾಡಬೇಕು. ಇದು ನನ್ನ ಕರ್ತವ್ಯ. ನಾನು ಒಬ್ಬ ರೈತನ ಮಗನಾಗಿ ಇಲ್ಲಿಗೆ ಬಂದಿದ್ದೇನೆ. ಇವತ್ತು ಒಂದು ಕ್ವಿಂಟಾಲ ಆಹಾರವನ್ನು ಬೆಳೆಯಬೇಕಾದರೆ 82 ರೂಪಾಯಿ ಕೊಟ್ಟು ಗೊಬ್ಬರ ತಂದು ಹಾಕಬೇಕು, ಎಲೆಕ್ಟ್ರಿಫಿಕೇಷನ್ ಇಲ್ಲದಿದ್ದರೆ ಡೀಸಲ್ ಆಯಿಲ ಇಂಜಿನ್ ತಂದು ಆದರೂ ಬೆಳೆಯಬೇಕು. ನಾವು ಬೆಳೆದಿದ್ದರಲ್ಲಿ ಗೊಬ್ಬರದ ಖರ್ಚು, ಡೀಸಲ್ ಆಯಿಲ ಖರ್ಚು, ಇತರೇ ವಿಧವಾದ ಎಲ್ಲ ಖರ್ಚುಗಳನ್ನು ತೆಗೆದು ನೋಡಿದಾಗ ನಮಗೆ ಉಳಿಯುವುದು ಕೇವಲ 18 ರೂಪಾಯಿಗಳು ಮಾತ್ರ, ನಮ್ಮ ಮಾನ್ಯ ಮಿತ್ರರಾದ ಶ್ರೀಮಾನ್ ಮಂಜುನಾಥರವರು ಮಾನ್ಯ ರಾಜ್ಯಪಾಲರ ಭಾಷಣದ ಬಗ್ಗೆ ಮಾತನಾಡುವಾಗ ಕೊಡುವುದಕ್ಕೂ ಕೊಳ್ಳುವುದಕ್ಕೂ ಒಂದು ನೀತಿ, ಒಂದು ಮಾರ್ಗ ಇರಬೇಕೆಂದು ಹೇಳಿದ್ದಾರೆ. ಇವತ್ತು ನಮ್ಮ ಸರ್ಕಾರಿ ನೌಕರದಾರರಿಗೆ ಪಗಾರವನ್ನು ಹೆಚ್ಚು ಮಾಡಿದ್ದೀರಿ. ಇದನ್ನು ನಾನು ಬೇಡ ಎಂದು ಹೇಳುವುದಿಲ್ಲ. ನಮ್ಮ ಶಿಕ್ಷಣ

ಖಾತೆಯಲ್ಲಿರುವ ನೌಕರ ವರ್ಗದವರಿಗೆ ದುಡ್ಡು ವೃಥಾ ಹೋಗುತ್ತಿದೆ. ಮಾಧ್ಯಮಿಕ ಶಾಲೆಗಳಲ್ಲಿ ಓದುತ್ತಿರುವ ಮಕ್ಕಳಿಗೆ ಕ್ರಿಯಾಪದಗಳು ಎಂದರೆ ಏನು ಎಂಬುದೇ ತಿಳಿಯದೇ ಇದ್ದರೆ ಅವರು ಏನು ವಿದ್ಯಾಭ್ಯಾಸವನ್ನು ಕಲಿಯುತ್ತಾರೆ ಎಂದು ಕೇಳುತ್ತೇನೆ. ಯಾವ ಉಪಾಧ್ಯಾಯರೂ ಕೂಡ 7 ಗಂಟೆಗೆ ಸರಿಯಾಗಿ ಸ್ಕೂಲಿಗೆ ಬರುವುದಿಲ್ಲ. ತಾವು ಒಮ್ಮೆ ಹೋಗಿ ನೋಡಿದರೆ ಇದೆಲ್ಲಾ ಗೊತ್ತಾಗುತ್ತದೆ.

ಸ್ವಾಮಿ, ಇನ್ನು ಎನ್.ಆರ್.ಡಬ್ಲ್ಯು. ಸ್ಕೀಂ ಬಗ್ಗೆ ಒಂದೆರಡು ಮಾತುಗಳನ್ನು ಹೇಳಬಯಸುತ್ತೇನೆ. ಸರ್ಕಾರದವರು ಜನರಿಂದ ಕಾಂಟ್ರಿಬ್ಯೂಷನ್ ತೆಗೆದುಕೊಂಡಿದ್ದಾರೆ. ಕೆಲಸ ಮಾಡಿಸಿ ಎಂದರೆ ಸರ್ಕಾರದಲ್ಲಿ ದುಡ್ಡಿಲ್ಲ ಎಂದು ಹೇಳುತ್ತಾರೆ. ಆದುದರಿಂದ ನಾನು ಹೇಳುತ್ತೇನೆ. ನೀವು ಕಂಟ್ರಿಬ್ಯೂಷನ್ ತೆಗೆದುಕೊಂಡಿದ್ದಕ್ಕೆ ಕೆಲಸವನ್ನು ಮಾಡಿಕೊಡಿ, ಇಲ್ಲವೇ ಕಾಂಟ್ರಿಬ್ಯೂಷನ್ ಹಣವನ್ನಾದರೂ ವಾಪಸ್ಸು ಜನಗಳಿಗೆ ಕೊಡಿ. ಸರ್ಕಾರದವರು ಹರಿಜನರ ಬಗ್ಗೆ ಏನೊಂದು ಸ್ಪೇಷಲ ಅಟೆನ್‌ಷನ್ ಕೊಡುತ್ತಿರೋ ಅದೇರೀತಿ ಉಳಿದವರಿಗೂ ಕೂಡ ಸ್ಪೆಷಲ ಅಟೆನ್‌ಷನ್ ಕೊಡಿ ಇವತ್ತು ಅಲ್ಲಿ ಜನರಿಗೆ ಕುಡಿಯುವುದಕ್ಕೆ ನೀರಿಲ್ಲದೇ ಬಹಳ ತೊಂದರೆ ಪಡುತ್ತಿರುವುದರಿಂದ ಅಲ್ಲಿ ಕಾಂಟ್ರಿಬ್ಯೂಷನ್ ತೆಗೆದು ಅವರಿಗೆ ಕುಡಿಯುವ ನೀರಿನ ಬಾವಿ ಕೂಡುವ ಬಗ್ಗೆ ಯೋಜನೆ ಮಾಡಬೇಕು. ಹೈದರಾಬಾದ್ ನಿಜಾಮನ ರಾಜ್ಯದಲ್ಲಿ ಊರಿನವರಿಗೇ ಒಂದು ಬಾವಿ, ಹರಿಜನಗೇ ಒಂದು ಕಂಪಲ್ಸರಿ ಬಾವಿ ಮಾಡಿಸುತ್ತಿದ್ದ. ಆದುದರಿಂದ ನಾನು ಹೇಳುವುದೇನೆಂದರೆ ತಾವು ಬಿ.ಡಿ.ಓ. ಅವರಿಂದ ಬಾವಿಗಳ ಬಗ್ಗೆ ಒಂದು ಲಿಸ್ಟನ್ನು ತರಿಸಿ ಎಲ್ಲೆಲ್ಲಿ ಬಾವಿಗಳನ್ನು ಇಂಪ್ರೂವ್ ಮಾಡಬೇಕೆಂದು ಇದೆ, ಅದನ್ನು ಮಾಡುವುದಕ್ಕೆ ಸೂಕ್ತ ವ್ಯವಸ್ಥೆ ಮಾಡಬೇಕೆಂದು ಹೇಳಬಯಸುತ್ತೇನೆ. ಇದನ್ನು ಸ್ಕೇರ್ಸಿಟಿ ವರ್ಕ್ಸ್ ತೆಗೆದುಕೊಳ್ಳುವ ಬಗ್ಗೆ ಹೇಳುವುದಾದರೆ, ನಮ್ಮ ಸಿಂದಗಿ, ಇಂಡಿ ಭಾಗದಲ್ಲಿಯೇ ತೆಗೆದುಕೊಳ್ಳಿ ಎಂದು ಹೇಳುವುದಿಲ್ಲ ತಾವು ಎಲ್ಲಿ ಬೇಕಾದರೂ ತೆಗೆದುಕೊಳ್ಳಿ. ಅಪ್ಪರ್ ಕೃಷ್ಣಕ್ಕೆ ಈಗ ಏನು ಖರ್ಚ ಮಾಡುತ್ತಿದ್ದೀರಿ ಅದನ್ನು ಮುಂದೆ ಸಾಗಿಸಿ, ಸರ್ಕಾರದ ರೋಡ್ಸ್ ಅನ್ ಕಂಪ್ಲೀಟ್ ಬಿಲ್ಡಿಂಗ್ಸ್ ಏನಿವೆ ಅವುಗಳನ್ನು ಮೊದಲು ಕಂಪ್ಲೀಟ್ ಮಾಡಿಸಿ, ಈಗ ಇರತಕ್ಕಂಥ ನಮ್ಮ ಚೀಫ್ ಇಂಜಿನಿಯರ್‌ರವರಾದ ಮಾನ್ಯ ಬಾಕೀಕುಂದ್ರಿ ಸಾಹೇಬರು ಬಹಳ ದೊಡ್ಡ ಮನುಷ್ಯರಿದ್ದಾರೆ. ಕೋಲಾರ, ಚಿತ್ರದುರ್ಗ, ಬಳ್ಳಾರಿ, ಇತ್ಯಾದಿ ಜಿಲ್ಲೆಗಳಿಗೆ ಡೆವಲಪ್‌ಮೆಂಟ್ ಮಂಡಲಿಯನ್ನು ಸ್ಥಾಪಿಸಬೇಕು. ಇವತ್ತು ಮೈನರ್ ಇರಿಗೇಷನ್‌ಗೋಸ್ಕರ ಎಷ್ಟೊ ಹಣವನ್ನು ಕೊಟ್ಟಿದ್ದೀರಿ. ನಮ್ಮ ಇಂಡಿ, ಸಿಂದಗಿ ಭಾಗದ ಭೂಮಿ ಬಹಳ ಸಂಪತ್‌ಭರಿತವಾದ ಭೂಮಿಯಾಗಿದೆ. ಅದರ ಸಲುವಾಗಿ ಈ ಅಪ್ಪರ್ ಕೃಷ್ಣವನ್ನು ತೆಗೆದುಕೊಳ್ಳಿ ಎಂದು ನಮ್ಮ ಮಾನ್ಯ ಅರ್ಥ ಮಂತ್ರಿಗಳಲ್ಲಿ ಕೇಳಿಕೊಳ್ಳುತ್ತೇನೆ.

**ಶ್ರೀ ಎಂ.ವೈ. ಘೋರ್ಪಡೆ** – ಅಪ್ಪರ್ ಕೃಷ್ಣಾ ಬಗ್ಗೆ ತಮಗೆ ಎಷ್ಟು ಕಳಕಳಿ ಇದೆಯೋ ಅಷ್ಟೆ ಕಳಕಳಿ ನಮಗೂ ಇದೆ. ಇವತ್ತು ನಮ್ಮ ರಾಷ್ಟ್ರದಲ್ಲಿ ಇಂಥ ಮುಖ್ಯವಾದ ನೀರಾವರಿ ಕಾಮಗಾರಿಗಳು ಬಹಳ ಇವೆ. ಇವೆಲ್ಲವನ್ನೂ ಪೂರೈಸುವಂತಹ ಶಕ್ತಿ ನಮ್ಮ ರಾಜ್ಯ ಸರ್ಕಾರಕ್ಕೆ ಇಲ್ಲವಾದುದರಿಂದ ಅಪ್ಪರ್ ಕೃಷ್ಣಾ ಯೋಜನೆ ಏನಿದೆ ಇದಕ್ಕೆ ಇಂಟರ್ ನ್ಯಾಷನಲ ಪ್ರಯಾರಿಟಿ

ಕೊಟ್ಟು ಹೊರಗಡೆಯಿಂದ ಹಣ ಕೊಡಿಸಲು ಎಷ್ಟು ಪ್ರಯತ್ನವನ್ನು ಮಾಡಬಹುದೋ ಅಷ್ಟನ್ನೂ ಕೂಡ ಕೇಂದ್ರ ಸರ್ಕಾರದ ಮಟ್ಟದಲ್ಲಿ ಮಾಡಿದ್ದೇವೆ ಎಂಬುದನ್ನು ತಮ್ಮ ಗಮನಕ್ಕೆ ತರಬಯಸುತ್ತೇನೆ. ತಮಗೇ ಗೊತ್ತಿರುವ ಹಾಗೆ ನಮ್ಮ ರಾಷ್ಟ್ರದಲ್ಲಿ ಬಹಳ ಮುಖ್ಯವಾದಂಥ ನೀರಾವರಿ ಯೋಜನೆಗಳಿವೆ. ಅವುಗಳಿಗೆ ಇಂಟರ್ ನ್ಯಾಷನಲ್ ಪ್ರಾಧಾನ್ಯತೆಯನ್ನು ಕೊಡುವುದು ಇದೆ. ಅಂಥ ಸನ್ನಿವೇಶ ಬಂದಿದೆ. ಈ ಅಪ್ಪರ್ ಕೃಷ್ಣಾವನ್ನು ಮುಗಿಸುವುದಕ್ಕೆ ಕರ್ನಾಟಕಕ್ಕೆ ಸಾಧ್ಯವಾಗುತ್ತದೆ ಎನ್ನುವ ಭರವಸೆಯನ್ನು ನಾವು ಹೊಂದಿದ್ದೇನೆ ಮತ್ತು ಅದೇ ಭರವಸೆ ತಮಗೂ ಕೂಡ ಇರಲಿ ಎಂದು ಹೇಳುತ್ತೇನೆ.

**ಶ್ರೀ ವೈ.ಎಸ್. ಪಾಟೀಲ** – ಸ್ವಾಮಿ, ಅಪ್ಪರ್ ಕೃಷ್ಣಾ ಸಬ್ ಮರ್ಜ್ಡ ಏರಿಯಾ ತಾಲ್ಲೂಕು ಏನಿದೆ ಅದು ಬಹಳ ಫಲವತ್ತಾದ ಭೂಮಿ. ಡಿವಿಜನಲ್ ಕಮಿಷನರ್ ರವರ ನೇತೃತ್ವದಲ್ಲಿ ಒಂದು ಮೀಟಿಂಗ್ 26.2.1975 ರಂದು ನಡೆದು ಡೆವಲಪ್‌ಮೆಂಟ್ ಆಗಬೇಕಾದುದನ್ನು ಸೂಚಿಸಿ, ಈಗ ಪುನಃ ಡೆವಲಪ್‌ಮೆಂಟ್ ಮಾಡುವುದಕ್ಕೆ ಪ್ರಾರಂಭ ಮಾಡಿದ್ದಾರೆಂದು ಗೊತ್ತಾಯಿತು. ಇದರಿಂದ ಈ ಅಪ್ಪರ್ ಕೃಷ್ಣಾ ಯೋಜನೆಯನ್ನು ಕೈ ಬಿಡಬಹುದೆಂದು ನಮಗೆ ಸಂಶಯ ಬಂದಿದೆ. ನಿಮ್ಮ ಮೇಲೆ ನಮಗೆ ವಿಶ್ವಾಸ ಇದೆ. ಆದರೆ ಪೂರ್ಣವಾದ ವಿಶ್ವಾಸ ಇಲ್ಲದೇ ಇರುವುದಕ್ಕಾಗಿ ಇಂತಹ ಸನ್ನಿವೇಶ ಬರುತ್ತಿದೆ. ಈವತ್ತಿನ ದಿವಸ ಹಳ್ಳಿಗಳಲ್ಲಿ ಪಾರ್ಟಿ ಗೌವರ್ನಮೆಂಟ್ ಇದೆ. ಪಾರ್ಟಿ ಸರ್ಕಾರವಿದೆ. ಅದ್ದರಿಂದ ಅವರಿಗೆ ಅನುಕೂಲವಾಗುತ್ತಿದೆಯೇ ಹೊರತು ಬೇರೆಯವರಿಗೆ ಅನುಕೂಲವಾಗುತ್ತಿಲ್ಲವೆಂದು ಹೇಳುತ್ತಿದ್ದಾರೆ. ಉದಾಹರಣೆಗೆ ನಮ್ಮ ಇಂಡಿ, ಸಿಂದಗಿ ತಾಲ್ಲೂಕುಗಳನ್ನೇ ತೆಗೆದುಕೊಂಡರೆ ಬಹಳವಾಗಿ ನಿಮ್ಮ ಪಾರ್ಟಿಯವರಿಗೆ ಸಕ್ಕರೆ ಲೈಸನ್ಸ್‌ಗಳನ್ನು ಹೆಚ್ಚಿಗೆ ಕೊಟ್ಟಿರುತ್ತೀರಿ. ಇದರಿಂದಾಗಿ ಖಾಸಗಿಯವರಿಗೆ ಬಹಳ ತೊಂದರೆಯಾಗುತ್ತಿದೆ ಅದರ ಸಲುವಾಗಿ ಉತ್ತಮವಾದ ಕಾರ್ಯಗಳು ಆಗಬೇಕಿದ್ದರೆ, ನಮ್ಮ ಕೀರ್ತಿ ಬೆಳೆಯಬೇಕಾದರೆ ಕಾನೂನು ಮತ್ತು ಕಟ್ಟಳೆಯನ್ನು ಸುವ್ಯವಸ್ಥಿತವಾದ ರೀತಿಯಲ್ಲಿ ನಡೆಸಿಕೊಂಡು ಹೋಗಬೇಕೆಂದು ನಾನು ಕೇಳಿಕೊಳ್ಳುತ್ತೇನೆ. ಹೋದ ತಿಂಗಳು 29 ನೇ ತಾರೀಖಿನ ದಿವಸ ಸ್ವಾಮೀಜಿಯವರ ದರ್ಶನಕ್ಕೆ ನಾನು ಹೋದಾಗ ಏಳುಮಂದಿ ಗೂಂಡಾ ಜನರು ಒಮ್ಮೆಲೇ ನನ್ನನ್ನು ಸುತ್ತು ಗಟ್ಟಿ ಕಡಿಯುವುದಕ್ಕೂ ಕೂಡ ಪ್ರಯತ್ನ ಮಾಡಿದರು. ಸುದೈವದಿಂದ ಹೇಗೋ ನಾನು ಪಾರಾದೆ, ನನ್ನನ್ನು ಯಾರೂ ಹಿಡಿಸಲು ಬರಲಿಲ್ಲ. ಲಾ ಅಂಡ್ ಆರ್ಡರ್ ಸಂಪೂರ್ಣವಾಗಿ ನಾಶವಾಗಿದೆ ಎಂದು ಹೇಳಬೇಕಾಗಿದೆ. ಯಾವ ಗುಂಡಾ ಜನರು ನನ್ನ ಮೇಲೆ ಹಲ್ಲೆ ಮಾಡಿದರೋ ಅವರೇ ಈವತ್ತಿನದಿವಸ ಪಾರ್ಟಿವರ್ಕರ ಆಗಿ ಕೆಲಸ ಮಾಡುತ್ತಿದ್ದಾರೆ. ಇದಕ್ಕೆ ಏನು ಮಾಡಬೇಕೋ ಗೊತ್ತಾಗುತ್ತಾ ಇಲ್ಲ. ಕೊಯ್ನಾ ಅಣೆಕಟ್ಟು ಇಷ್ಟೊತ್ತಿಗೆ ಮುಗಿಯಬೇಕಾಗಿತ್ತು. ಅದರಿಂದ ನಮ್ಮ ತಾಲ್ಲೂಕುಗಳಾದ ಇಂಡಿ ಮತ್ತು ಸಿಂದಗಿ ತಾಲ್ಲೂಕುಗಳಿಗೆ ನೀರು ಬರುವುದು ಇತ್ತು, ಅದನ್ನು ಪುನಃ ಪರಿಶೀಲನೆ ಮಾಡಬೇಕೆಂದು ಕೇಳಿಕೊಳ್ಳುತ್ತೇನೆ. ಅಪ್ಪರ್ ಕೃಷ್ಣಾ ಯೋಜನೆಯಿಂದ ನಮಗೇನು ಪ್ರಯೋಜನವಾಗುತ್ತಿಲ್ಲ. ಬಾಲೆಕುಂದರಿ ಕೆರೆಯನ್ನು ಇರಿಗೇಷನ್‌ಗೆ ಅನುಕೂಲವಾಗುವಂತೆ ಮಾಡಬೇಕು. ತಾತ್ಕಾಲಿಕವಾಗಿ ಮುಂದಿನ ವ್ಯವಸ್ಥೆಯಾಗುವವರೆಗೆ ಇಂಡಿ ಮತ್ತು ಸಿಂದಗಿ

ತಾಲ್ಲೂಕುಗಳಿಗೆ 15 ಸಾವಿರ ಇರಿಗೇಷನ್ ಬಾವಿಗಳಿಗೆ ವ್ಯವಸ್ಥೆ ಮಾಡಿದರೆ ಬಹಳ ಒಳ್ಳೆಯದೆಂದು ಈ ಸಂದರ್ಭದಲ್ಲಿ ಹೇಳಬಯಸುತ್ತೇನೆ. ದುಡ್ಡನ್ನು ಜನರು ಕೈಯಲ್ಲಿ ಕೊಡದೆ ಒಂದು ಕಾರ್ಪೋರೇಷನ್ ಮಾಡಿದರೆ ಬಡಜನರಿಗೆ ಅನುಕೂಲಮಾಡಿಕೊಟ್ಟಂತಾಗುತ್ತದೆಂದು ಹೇಳಿ ಮಾನ್ಯ ಸಭಾಪತಿಗಳಿಗೆ ನನಗೆ ಇಷ್ಟೊಂದು ವೇಳೆ ಕೊಟ್ಟದಕ್ಕಾಗಿ ಅವರನ್ನು ಅನನ್ಯ ಭಾವನೆಯಿಂದ ಪ್ರಾರ್ಥಿಸಿಕೊಂಡು ಅರ್ಥ ಮಂತ್ರಿಗಳು ಇತ್ತಕಡೆ ತಮ್ಮ ದೃಷ್ಟಿಯನ್ನು ಹೊರಳಿಸಲಿ ಎಂದು ಹೇಳಿ ನನ್ನ ಮಾತನ್ನು ಮುಗಿಸುತ್ತೇನೆ.

## ಅಬಕಾರಿ ಖಾತೆಯ ಡಿಮ್ಯಾಂಡ

9ನೇ ಮಾರ್ಚ್ 1976

**ಶ್ರೀ ಎಸ್.ವೈ. ಪಾಟೀಲ** (ಸಿಂದಗಿ) – ಮಾನ್ಯ ಸಭಾಧ್ಯಕ್ಷರೇ, ಬಜೆಟ್ ಅಧಿವೇಶನದಲ್ಲಿ ಡಿಮ್ಯಾಂಡುಗಳ ಮೇಲೆ ಮಾತನಾಡಬೇಕಾಗುತ್ತದೆ. ಆದರೆ ಪಾರ್ಟಿಯ ಜನ ಸರ್ಕಾರವನ್ನು ವರ್ಣಿಸುವುದೂ, ವಿರೋಧಪಕ್ಷದವರು ಸರ್ಕಾರದ ದೋಷಗಳನ್ನು ಎತ್ತಿ ತೆಗೆಯುವುದು ಸಹಜವಾದುದು. ಇಲ್ಲಿ ಈಗ ಲೇಬರ್ ಹಾಗೂ ಎಕ್ಸೈಜಿಗೆ ಸಂಬಂಧಪಟ್ಟ ಬೇಡಿಕೆ ಇದೆ. ನಾನು ಎಕ್ಸೈಜ್ ಮೇಲೆ ಕೆಲವು ಮಾತುಗಳನ್ನು ಹೇಳುತ್ತೇನೆ. ಇವತ್ತು ಭಾರತೀಯ ಗಣರಾಜ್ಯದಲ್ಲಿ, ಒಂದು ಭಾಗವಾದ ಕರ್ನಾಟಕದಲ್ಲಿ ನಾವು ಇದ್ದೇವೆ. ರಾಷ್ಟ್ರಕ್ಕೆ ಸ್ವಾತಂತ್ರ್ಯವನ್ನು ದೊರೆಕಿಸಿಕೊಟ್ಟರು. ಅವರ ಹೆಸರು ಹೇಳಿಕೊಂಡು ನಾವು ಇಂಥ ಕೆಲಸ ಮಾಡುತ್ತಿದ್ದೇವೆ. ಭಾರತೀಯ ಸಂಸ್ಕೃತಿಗೆ ವಿರೋಧವಾದ ನೀತಿಯಿಂದ ಸರ್ಕಾರ ನಡೆಸುವುದು ಅಂದರೆ ಏನು? ಉತ್ಪನ್ನವನ್ನು ಎಲ್ಲಿಂದಲಾದರೂ ತರಬಹುದು. ಸರ್ಕಾರಕ್ಕೆ ಒಂದು ಬಜೆಟ್ ಮಾಡುವ ಅಧಿಕಾರ ಇದೆ, ಒಂದು ಕಾನೂನು ಮಾಡುವ ಅಧಿಕಾರ ಇದೆ. ನೀವು ಈ ಡಿಮ್ಯಾಂಡನ್ನು ಪಾಸ್ ಮಾಡಿಕೊಳ್ಳುತ್ತೀರಿ. ಕುಡುಕತನಕ್ಕಾಗಿ ಇಷ್ಟೊಂದು ಮೊತ್ತದ ದುಡ್ಡನ್ನು ಖರ್ಚು ಮಾಡುತ್ತೀರಿ? ನಾನು ರಿಪೋರ್ಟ್ ಓದಿದ್ದೇನೆ ನಮ್ಮ ದೇಶದ ಸಂಸ್ಕೃತಿಗೆ ವಿರೋಧವಾಗಿಗಿರತಕ್ಕದ್ದು. 1930 ನೇ ಇಸವಿಯಲ್ಲಿ ನಾನು ವಿದ್ಯಾರ್ಥಿಯಾಗಿದ್ದಾಗ ಮಹಾತ್ಮಾ ಗಾಂಧೀಯವರು ಶೇಂದಿ ಅಂಗಡಿಗಳ ಮುಂದೆ ಪಿಕೆಟಿಂಗ್ ಮಾಡಬೇಕೆಂದು ಹೇಳಿದಾಗ, ನಾವು ಅದನ್ನು ಕೇಳಿ ಹೈಸ್ಕೂಲು ಬಿಟ್ಟು ಪಿಕೆಟಿಂಗ್ ಮಾಡಿ ಜೈಲಿಗೆ ಹೋಗತಕ್ಕ ಸನ್ನಿವೇಶ ಇತ್ತು. ಅಸಂಬ್ಲಿ ಮೆಂಬರ್ ಆದ ಬಳಿಕ ಅದರ ಮೇಲೆ ಚರ್ಚೆ ಮಾಡತಕ್ಕಂಥಾ ಸನ್ನಿವೇಶ ಬಂದಿದೆ. ಮೊನ್ನೆ ನಮ್ಮ ರಾಜ್ಯಪಾಲರು ಒಂದು ಮಾತು ಹೇಳಿದರು. ತಾಳ್ಮೆಯಿಂದ ಇರಿ, ತಾಳ್ಮೆಯಿಂದ ಇರಿ ಎಂದು ಏನು ಉತ್ತಮ ಕೆಲಸ ಮಾಡುತ್ತಾರೆ ಅಂತ ನಾವು ತಾಳ್ಮೆಯಿಂದ ಇರಬೇಕು? ಈವೊತ್ತು ದೇಶದಲ್ಲಿ ನಿಮ್ಮ ಮಂತ್ರಿಪದವಿ ಇರುವುದು ನಮ್ಮ ಕರ್ನಾಟಕ ರಾಜ್ಯಕ್ಕೆ ಅದರಲ್ಲೂ ಭಾರತೀಯ ಸಂಸ್ಕೃತಿಗೆ ತಕ್ಕಂತೆ ಒಂದು ಸಂಸ್ಕೃತಿಯನ್ನು ಬೆಳೆಸಿಕೊಂಡು ಹೋಗುವುದಕ್ಕೆ. ಮದ್ರಾಸ್‌ನಲ್ಲಿ ಶ್ರೀಮಾನ್ ಕರುಣಾನಿಧಿಯವರು ಕೆಟ್ಟ ರೀತಿಯಲ್ಲಿ ರಾಜ್ಯಭಾರ ಮಾಡಿದರು ಅಂತ ಹೇಳಿ ಅಲ್ಲಿ ರಾಷ್ಟ್ರಪತಿ ಆಡಳಿತ ಜಾರಿಗೆ ತಂದರು. ಅವರು ತಮ್ಮ ಕಾಲದಲ್ಲಿ ಕುಡಿಯುವದಕ್ಕೆ ಪ್ರೊಹಿಬಿಷನ್ ತಂದರು ಅದು ಕೆಟ್ಟ ಆಡಳಿತವೇ?

**ಶ್ರೀ ಅಜೀಜ್ ಸೇಟ್**–ಅವರು ಪ್ರೊಹಿಬಿಷನ್ ತಂದದ್ದು ಹೇಗೆ ಅನ್ನುವುದು ತಮಗೆ ಗೊತ್ತಿದೆಯೇ? ಪ್ರತಿಯೊಂದು ಹೋಟೇಲಿನಲ್ಲೂ ಕೂಡ ಯಾರಾದರೂ ಹೋಗಿ ಸಾಫ್ಟ್‌ಡ್ರಿಂಕ್ ಬೇಕು ಎಂದು ಕೇಳಿದರೆ ಅವರು ಹಾಟ್‌ಡ್ರಿಂಕ್ ತಂದು ಇಡುತ್ತಾ ಇದ್ದರು. ಹಾಟ್‌ಡ್ರಿಂಕ್ ಅಂದರೆ ಏನು ಅನ್ನುವುದು ಗೊತ್ತೇ ಜಿನ್; ವಿಸ್ಕಿ ಇಂಥಾವೆಲ್ಲಾ ತಂದು ಟೇಬಲ ಮೇಲೆ ಇಡುತ್ತಾ ಇದ್ದರು.

**ಶ್ರೀ ಎಸ್.ವೈ. ಪಾಟೀಲ**–ಇರಬಹುದು ಈ ಬಗ್ಗೆ ತಮಗೆ ಒಂದು ಉದಾಹರಣೆ ಹೇಳುತ್ತೇನೆ. ವಿದ್ಯಾವಂತರಾದವರಿಗೂ ಕೂಡ ಇದರಿಂದ ಏನು ಪರಿಣಾಮ ಉಂಟಾಗುತ್ತದೆ ಅನ್ನುವುದನ್ನು ಹೇಳುತ್ತೇನೆ. ಮುಂಬೈ ಪ್ರಾಂತ್ಯದ ಆಜಾದ್ ಎಂಬ ಬ್ಯಾರಿಸ್ಟರ್ ಸೊಲಾಪುರದ ಒಂದು ಕೇಸಿನಲ್ಲಿ ಏನು ಮಾಡಿದರು ಎಂದರೆ ಕುಡಿದು ಬಂದ ಅಮಲ್‌ನಲ್ಲಿ ಒಂದು ಕೇಸಿನಲ್ಲಿ ಆರ್ಗ್ಯೂ ಮಾಡುತ್ತಾ ಇರುವಾಗ ಅವರೇ ಆರೋಪಿಗೆ ವಿರುದ್ಧವಾಗಿ ಆರ್ಗ್ಯೂ ಮಾಡಿದರು. ಇದರಿಂದ ಪ್ರಾಸಿಕ್ಯೂಷನ್‌ನವರು ಏನು ಹೇಳುವುದಕ್ಕೂ ಪಾಯಿಂಟ್ ಇಲ್ಲದೆ ಅವರೇ ಆರ್ಗ್ಯೂ ಮಾಡಿಬಿಟ್ಟರು. ಈವೊತ್ತು ನೀವು ಹಳ್ಳಿಯಲ್ಲಿ ಹೆಣ್ಣು ಮಕ್ಕಳ ಕಲ್ಯಾಣವಾಗಬೇಕು ಎಂದು ಹೇಳುತ್ತೀರಿ, ರೈತರ ಬಗ್ಗೆ ಮಾತನಾಡುತ್ತೀರಿ. ಈವೊತ್ತು ಯಾವುದೇ ಒಂದು ಕಾರಣಕ್ಕಾಗಲಿ ಕೆಲಸ ಮಾಡುವುದಕ್ಕೆ ದುಡ್ಡು ಇಲ್ಲ ಆದರಿಂದ ಈ ಪಾನನಿರೋಧವನ್ನು ನಮ್ಮ ರಾಜ್ಯದಲ್ಲಿ ಜಾರಿಗೆ ತಂದಿಲ್ಲ. ಇದರಿಂದ ನಮಗೆ 50 ಕೋಟಿ ರೂಪಾಯಿ ಉತ್ಪತ್ತಿ ಬರುತ್ತದೆ. ಈ ಉತ್ಪನ್ನದಿಂದ ನಾವು ಕೆಲಸಮಾಡಬೇಕಾಗಿದೆ ಎಂದು ಹೇಳುವುದಾದರೆ ಈ ಕುಡಿಯುವವರ ಅವಾಚ್ಯ ಮಾತುಗಳನ್ನು ನೋಡಿದರೆ ಅವರ ಬೈಗಳನ್ನು ನೋಡಿದರೆ ಯಾರಿಗೆ ತಾನೇ ಅವಮಾನವಾಗುವುದಿಲ್ಲ ಹೇಳಿ.

ಶ್ರೀ ಕೆ.ಬಿ. ಶಿವಯ್ಯ – ಕುಡಿಯಬೇಡಿ ಎಂದು ಪ್ರಚಾರ ಮಾಡುತ್ತಿದ್ದಾರಲ್ಲಾ ಅವರು ರಾತ್ರಿ ಹೊತ್ತು ಕುಡಿಯುತ್ತಾರೆ ಅನ್ನುವುದು ತಮಗೆ ಗೊತ್ತಿದೆಯೇ?

**ಶ್ರೀ ಎಸ್.ವೈ. ಪಾಟೀಲ** – ಪ್ರಚಾರ ಮಾಡಿ ಕುಡಿಯತಕ್ಕಂಥಾವರೇ ಇರಲಿ, ಯಾರೇ ಇರಲಿ ನಾವೇ ಕುಡಿಯಲಿ, ನೀವೇ ಕುಡಿಯಲಿ ಆ ಮಾತು ಬೇಡ. ದಯವಿಟ್ಟು ಇದರಿಂದ ನಮ್ಮ ದೇಶದ ಮೇಲೆ ಏನು ತೊಂದರೆಯಾಗುತ್ತದೆ ಅನ್ನುವುದರ ಕಡೆ ಯೋಚನೆ ಮಾಡಬೇಕು. ಹಿಂದಿನ ಕಾಲದಲ್ಲಿ ಎಲ್ಲಾ ಕಡೆಯೂ ಹನುಮಂತರಾಯನ ಗುಡಿ ಇತ್ತು, ಈಗ ಎಷ್ಟು ಇದೆಯೋ ಇಲ್ಲವೋ ಗೊತ್ತಿಲ್ಲ. ಈ ಸೇಂದಿ ಮಾರಾಟದಿಂದ ನಮಗೆ ಈವೊತ್ತು 50 ಕೋಟಿ ರೂಪಾಯಿ ಉತ್ಪನ್ನ ರಾಜ್ಯಕ್ಕೆ ಬರುತ್ತದೆ. ಆದರೆ ಇದಕ್ಕೆ ಖರ್ಚು ಮಾಡುವುದು 4 ಕೋಟಿ ರೂಪಾಯಿ ಅನ್ನುವುದಾದರ, ಶಿವನ ಪಂಚಾಮೃತ ಇದ್ದ ಹಾಗೆ ಇದನ್ನು ಮುಂದುವರೆಸಿಕೊಂಡು ಹೋದರೆ ಇದರಿಂದ ಏನು ಪರಿಣಾಮವಾಗಬಹುದು ಅನ್ನುವುದನ್ನು ಯೋಚನೆ ಮಾಡಬೇಕು.

**ಶ್ರೀ ಕೆ.ಆರ್. ಶ್ರೀನಿವಾಸಲು ನಾಯಿಡು** – ಹಿಂದಿನವರು ಮಾಡಿದ ಪ್ರಸಾದವಲ್ಲವೇ ಇದು.

**ಶ್ರೀ ಎಸ್.ವೈ. ಪಾಟೀಲ** – ಅದನ್ನು ನಮ್ಮವರೇ ಮಾಡಲಿ, ನಿಮ್ಮವರೇ ಮಾಡಲಿ, ಯಾರೇ ಮಾಡಲಿ ನಾನು ಮಂತ್ರಿಯಾಗಿದ್ದುಕೊಂಡು ನನ್ನ ಮನಸ್ಸಿನಲ್ಲಿ ಇದನ್ನು ಮಾಡಬಹುದೇ ಅನ್ನುವುದನ್ನು ಯೋಚನೆ ಮಾಡಬೇಕು. ಈವೊತ್ತು ನನ್ನ ಮಟ್ಟಿಗೆ ಹೇಳುವುದಾದರೆ ಯಾರೇ ತಪ್ಪು ಮಾಡಲಿ ನಮ್ಮ ಪಕ್ಷದವರು ನಿಮ್ಮ ಪಕ್ಷದವರು ಅನ್ನುವುದು ಬೇಡ, ತಮಗೆ ಹೇಳುವುದಾದರೆ ಈವೊತ್ತು ಯಾರು ನಮ್ಮ ಅಧ್ಯಕ್ಷರಾಗಿದ್ದಾರೋ ಅವರ ಪರವಾನಗಿ ತೆಗೆದುಕೊಂಡು ನಾನು ಈವೊತ್ತು ಮಾತನಾಡಬೇಕೇ ಹೊರತು, ವರ್ತಮಾನ ಕಾಲದ ಸ್ಥಿತಿ ನೋಡಿಕೊಂಡು ಅದಕ್ಕನುಗುಣವಾಗಿ ನಾವು ಮಾತನಾಡಬೇಕೇ ಹೊರತು ಹಿಂದಿನವರ ಮೇಲೆ ಹೇಳಿ ಆ ರೀತಿಯಾಗಿ ಜಗತ್ತಿಗೆ ಉಪದೇಶ ಕೊಡಬಾರದು ಪಂಡಿತ್ ನೆಹರೂರವರು ಸ್ವಾತಂತ್ರ್ಯ ತೆಗೆದುಕೊಳ್ಳತಕ್ಕಂಥಾ ಕಾಲದಲ್ಲಿ ಹಿಂದೂಮುಸ್ಲಿಮ್ ಐಕ್ಯತೆಗಾಗಿ ಏನು ಉಪದೇಶ ಮಾಡುತ್ತಿದ್ದರೂ ಅನ್ನುವುದನ್ನು ನೋಡಬೇಕು, ಮತ್ತು ನಮ್ಮ ಭಾರತೀಯ ಸಂಸ್ಕೃತಿ ಮೇಲೆ ತಾವು ಒಂದು ಎಚ□ರ ವಹಿಸಬೇಕು ಏತಕ್ಕೆಂದರೆ ಆಡಳಿತ ಒಳ್ಳೆಯದಾಗಬೇಕಾದರೆ, ಅಧಿಕಾರಿಗಳು ಒಳ್ಳೆಯವರು ಇರಬೇಕಾದರೆ, ಇಲಾಖೆಗಳು ಒಳ್ಳೆಯದು ಇರಬೇಕಾದರೆ ಸಂಸ್ಕೃತಿ ಒಳ್ಳೆಯದಾಗಿರಬೇಕು. ನಾನು ಜೈನರ ಸಂಸ್ಕೃತಿಯನ್ನೂ ನೋಡಿದ್ದೇನೆ. ಬ್ರಾಹ್ಮಣರ ಸಂಸ್ಕೃತಿಯನ್ನೂ ನೋಡಿದ್ದೇನೆ. ಕುಡಿಯತಕ್ಕಂಥವರ ಸಂಸ್ಕೃತಿಯನ್ನೂ ನೋಡಿದ್ದೇನೆ. ಇದರಿಂದ ಅವರ ಜೀವನವೆಲ್ಲಾ ನಿರ್ನಾಮವಾಗಿದೆ, ಇದರಿಂದ ಉತ್ಪತ್ತಿ ಬರುತ್ತದೆ ಅಂತ ತಿಳಿದುಕೊಂಡು ನಮ್ಮ ಭಾರತೀಯ ಸಂಸ್ಕೃತಿಯನ್ನು ಹಾಳುಮಾಡುವುದು ಬೇಡ. ಆಹಾರ ಉತ್ತಮವಾಗಿ ಬೆಳೆಯಬೇಕಾದರೆ, ರೋಗ ನಿವಾರಣೆಯಾಗಬೇಕಾದರೆ, ರಕ್ತ ಶುದ್ಧ ಅಶುದ್ಧವಾಗಿರಬೇಕಾದರೆ ಇದಕ್ಕೆಲ್ಲಾ ಒಂದು ಸಂಸ್ಕೃತಿ ಬೇಕೇ ಬೇಕು. ಅದು ಗುನ್ಹೆ ಆಗಬಾರದು ಆಗಿನ ಕಾಲದ ರಾಮದಾಸರ ಒಂದು ಸಂಸ್ಕೃತಿಯನ್ನೇ ತೆಗೆದುಕೊಳ್ಳಿ ಬಸವಣ್ಣನವರ ಜಯಂತಿಯನ್ನೇ ತೆಗೆದುಕೊಳ್ಳಿ ಒಟ್ಟಿನಲ್ಲಿ ನಾನು ಹೇಳುವುದಾದರೆ ಈ ಕುಡಿಯುವುದನ್ನು ವಿರೋಧ ಮಾಡುತ್ತೇನೆ. ಇದು ನಮ್ಮ ಭಾರತೀಯ ಸಂಸ್ಕೃತಿಗೆ ವಿರೋಧ ಅಲ್ಲದೆ ನಮ್ಮ ಪೂಜ್ಯ ಮಹಾತ್ಮಾ ಗಾಂಧೀಜಿಯವರು ಏನು ಇದ್ದರೋ ಅವರ ಕಾಲದಲ್ಲಿ ನಾವು ಬೆಳೆದವರು, ಆದುದರಿಂದ ಈ ಕುಡಿತ ಎನ್ನುವುದು ನನಗೆ ದುಃಖವಾಗುತ್ತದೆ. ಆದರೆ ನಿಮಗೆ ಏತಕ್ಕೆ ದುಃಖವಾಗುವುದಿಲ್ಲವೆಂದರೆ, ಕುಡಿತದಿಂದ ಯಾರು ಹಾಳಾದರೆ ನಮಗೇನು? ಕುಡಿತದಿಂದ ಯಾರ ಮಕ್ಕಳು ಸತ್ತರೆ ನಮಗೇನು ನಾವು ಆರಾಮವಾಗಿದ್ದರೆ ಸಾಕು, ನಾವು ಮಂತ್ರಿಗಳಾಗಿದ್ದರೆ ಸಾಕು ನಾವು ಎಂ.ಎಲ್.ಎ.ಗಳಾಗಿದ್ದರೆ ಸಾಕು ಎಂಬ ಮನೋಭಾವನೆಯನ್ನು ಇಲ್ಲಿ ಮನುಷ್ಯತ್ವ ಮತ್ತು ದೇಶದ ಸಂಸ್ಕೃತಿ ಮುಖ್ಯವಾದವುಗಳೇ ಹೊರತು ಈ ಎಕ್ಸೈಜ್ ಬಾಬಿನಿಂದ 40 ಕೋಟಿ ಆದಾಯ ಬರುತ್ತದೆ ಎಂಬುದು ಮುಖ್ಯವಾದುದಲ್ಲ? ಇಲ್ಲಿ ದೇಶದ ಸಂಸ್ಕೃತಿ ಮೈನಸ್ ಆದರೆ ಮನುಷ್ಯತ್ವ ಏನೂ ಉಳಿಯುವುದಿಲ್ಲವೆಂಬುದನ್ನು ತಾವು ಅರ್ಥಮಾಡಿಕೊಳ್ಳಬೇಕು. ಆದಕಾರಣ ಈ ದೇಶದ ಒಂದು ಸಂಸ್ಕೃತಿಗೆ ತಾವು ಪ್ರಾಧಾನ್ಯತೆ ಕೊಡಬೇಕಲ್ಲದೆ ಗಾಂಧೀಜಿಯವರ ವಿಚಾರಶಕ್ತಿಗೆ ವಿರುದ್ಧವಾಗಿ ತಾವು ಏನನ್ನೂ ಮಾಡಲು ಹೋಗಬಾರದೆಂದು ಹೇಳುತ್ತೇನೆ. ಮತ್ತು ಎಕ್ಸೈಜ್ ಬಾಬಿನ ಮೇಲೆ ಮಾತನಾಡತಕ್ಕಂಥ ಒಂದು ಸನ್ನಿವೇಶ ಹಾಗೂ ಬಸವಣ್ಣನವರ ಅನುಯಾಯಿಗಳು ಎಷ್ಟು ಜನರಿದ್ದಾರೆಯೋ ನನಗೆ ಗೊತ್ತಿಲ್ಲ;

ಆದರೆ ಇಂದು ಸರ್ಕಾರದವರು ಕುಡಿಯುವುದಕ್ಕೆ ಅವಕಾಶ ಕೊಟ್ಟಿರುವ ಕಾರಣದಿಂದ ಅನೇಕ ಜನರು ಕುಡಿದುಕೊಂಡು ಬಂದು ತಮ್ಮ ಹೆಂಗಸರನ್ನು ಹೊಡೆಯುತ್ತಿದ್ದಾರೆ. ಇದು ತಮ್ಮ ಭಾರತೀಯ ಸಂಸ್ಕೃತಿಗೆ ವಿರೋಧವಾದುದು. ಆದಕಾರಣ ಇನ್ನು ಮುಂದೆ ಕುಡಿಯುವುದಕ್ಕೆ ಅವಕಾಶಕೊಡಬಾರದೆಂದು ಹೇಳುತ್ತೇನೆ. ನಾವು ರಾಜಮಹಾರಾಜರನ್ನೇ ಮನೆಗೆ ಕಳುಹಿಸಿದ ಮೇಲೆ ಪಾನನಿರೋಧವನ್ನು ಜಾರಿಗೆ ತರುವುದು ಅಷ್ಟೇನೂ ಕಷ್ಟದ ಕೆಲಸವಾಗುವುದಿಲ್ಲ. ಆದರೂ ಇದರ ಕಡೆಗೆ ಸರ್ಕಾರದವರು ಗಮನ ಕೊಡದಿರುವುದು ನಮ್ಮ ದುರ್ದೈವವೆಂದು ಹೇಳಬಹುದು.

**ಶ್ರೀ ಅಜೀಜ್ ಸೇಟ್** – ಆದರೂ ಸಹ ತಾವು ಅದೇ ವಿಚಾರವನ್ನು ಪದೇಪದೇ ಹೇಳುತ್ತಿದ್ದೀರಿ.

**ಶ್ರೀ ಎಸ್.ವೈ. ಪಾಟೀಲ** – ಇನ್ನು ಮುಂದೆಯಾದರೂ ಸರ್ಕಾರದ ಮೇಲೆ ಪರಿಣಾಮವಾಗಲೀ ಎಂದು ಹೇಳುತ್ತಿದ್ದೇನೆ. ದೇವಸ್ಥಾನಕ್ಕೆ ಹೋದರೆ ಮಂತ್ರವನ್ನು ಯಾವ ರೀತಿ ಹೇಳಬೇಕಾಗುತ್ತದೋ ಅದೇರೀತಿ, ಈ ಡಿಮ್ಯಾಂಡ್ ಇರುವುದರಿಂದ ಹೇಳಿದ್ದನ್ನೇ ಹೇಳಬೇಕಾಗುತ್ತದೆ. ಇಷ್ಟು ಹೇಳಿ, ಮುಂದಿನ ಸಲ ಇಂತಹ ಒಂದು ಡಿಮ್ಯಾಂಡ್ ಬರಬಾರದೆಂದು ಹೇಳಿ, ಈಗ ತಂದಿರತಕ್ಕಂಥ ಡಿಮ್ಯಾಂಡ್‌ಗಳನ್ನು ವಿರೋಧ ಮಾಡುತ್ತಾ, ನನಗೆ ಇಷ್ಟು ಮಾತನಾಡಲು ಅವಕಾಶ ಕೊಟ್ಟ ಅಧ್ಯಕ್ಷರಿಗೆ ವಂದಿಸಿ ನನ್ನ ಮಾತನ್ನು ಮುಗಿಸುತ್ತೇನೆ.

## ಸಹಕಾರಿ ಸಂಘಗಳ ಡಿಮ್ಯಾಂಡ

16ನೇ ಮಾರ್ಚ 1976

**ಶ್ರೀ ಎಸ್.ವೈ. ಪಾಟೀಲ** (ಸಿಂದಗಿ) – ಮಾನ್ಯ ಅಧ್ಯಕ್ಷರೇ, ಸಹಕಾರ ಸಂಸ್ಥೆಗಳ ಬಗ್ಗೆ ಈ ಮಾನ್ಯ ಸಭೆಯಲ್ಲಿ ಅನೇಕ ಡಿಮ್ಯಾಂಡ್ ಗಳನ್ನು ತಂದು ಅದರ ಬಗ್ಗೆ ಚರ್ಚೆಯಾಗುತ್ತಿರುವುದು ಬಹಳ ಆನಂದದ ಸಂಗತಿ. ಈ ಡಿಮ್ಯಾಂಡ್ ಮೇಲೆ ಚರ್ಚೆಯಾಗುವ ಕಾಲಕ್ಕೆ ಮಾನ್ಯ ಶ್ರೀ ಕೆ.ಎಚ್. ರಂಗನಾಥನ ಅವರು ಸಹಕಾರ ಸಂಸ್ಥೆಗಳನ್ನು ರಚಿಸಿರುವ ಬಗ್ಗೆ ಎಲ್ಲರೂ ವರ್ಣನೆ ಮಾಡುತ್ತಿದ್ದಾರೆ ಕೆಲವು ಸಂಸ್ಥೆಗಳಲ್ಲಿ ಬಹಳ ಒಳ್ಳೆಯ ಜನರು ಬರುವುದರಿಂದ ಅದೊಂದು ಮಾತ್ರ ಈ ದೇಶದ ಸೌಭಾಗ್ಯವಾಗಿಯೆಂದು ನಾನು ಈ ಸಂದರ್ಭದಲ್ಲಿ ಸಭೆಯಲ್ಲಿ ಹೇಳಬೇಕಾಗಿದೆ. ಅನೇಕ ವಿಚಾರಗಳ ಮೇಲೆ ಇಲ್ಲಿ ಚರ್ಚೆಯಾಗುತ್ತಾ ಇರುವಾಗ ನನಗೆ ತಿಳಿದು ಬಂದ ಅನುಭವ ಏನೆಂದರೆ ಆಫೀಸಿಯಲ್ಸ್ ಮೇಲೂ ಮತ್ತು ನಾನ್ ಆಫೀಸಿಯಲ್ಸ್ ಮೇಲೂ ಹೆಚ್ಚು ಹೆಚ್ಚಾಗಿ ಟೀಕೆಗಳು ಕಂಡುಬರುತ್ತಾ ಇವೆ. ನನ್ನ ದೃಷ್ಟಿಯಿಂದ ಆ ದೋಷಗಳು ಖರೆ ಆಗುತ್ತಾ ಇವೆ. ಆ ದೋಷಗಳ ಪರಿಹಾರವನ್ನು ಮಂತ್ರಿಗಳು ಮಾಡುವುದಕ್ಕಾಗುವುದಿಲ್ಲವೇ? ಕೆಲವು ಕಡೆಗಳಲ್ಲಿ ಸೊಸೈಟಿಗಳ ವ್ಯವಹಾರ ಸರಿಯಾಗಿಲ್ಲ. ಇದಕ್ಕೆ ಕಾರಣ ಪ್ರಜಾಪ್ರಭುತ್ವದಲ್ಲಿ ಮನುಷ್ಯ ತಾನು ಹೇಗಾದರೂ ಆರಿಸಿ ಬರಬೇಕೆಂಬ ಪ್ರವೃತ್ತಿ ಏನಿದೆಯೋ ಅದರಲ್ಲಿ ಯಾರ ಕೈಲಿ ಎಷ್ಟು ಹೋಗುತ್ತದೋ ಗೊತ್ತಿಲ್ಲ. ಅಧಿಕಾರದಲ್ಲಿ ಯಾರು ಸಮರ್ಥರಿದ್ದಾರೆ ಅವರಿಗೆ ಆ ಸ್ವಾತಂತ್ರ್ಯವಿದೆ, ಅಂತಹವರು ಎಷ್ಟು ಒಳ್ಳೆಯ

ಕೆಲಸ ಮಾಡಬೇಕೆಂಬ ಭಾವನೆ ಇದ್ದರೂ ಅವರು ಆ ರೀತಿಯಾಗಿ ಹೋಗುವುದಕ್ಕಾಗುವುದಿಲ್ಲ, ಯಾರಿಗೆ ಸರ್ಕಾರದಲ್ಲಿ ಹೆಸರು ಇರುತ್ತದೆಯೋ ಅಂತಹವರ ಧೋರಣೆಯನ್ನು ಅನುಸರಿಸಿ ಹೋಗಬೇಕಾಗುತ್ತದೆ. ಏಕೆಂದರೆ ಒಳ್ಳೆಯ ಅಧಿಕಾರಿಗಳಿಗೆ ಏನು ಕೆಲಸ ಮಡಬೇಕೆಂಬುದೇ ಸರಿಯಾಗಿ ಗೊತ್ತಾಗುತ್ತಾ ಇಲ್ಲ. ಇವತ್ತು ನಾನು ಒಬ್ಬ ಮತದಾರರ ಪ್ರತಿನಿಧಿಯಾಗಿ ಇಲ್ಲಿಗೆ ಬಂದಿದ್ದೇನೆ. ಕೊ-ಆಪರೇಟೀವ್ ಇಲಾಖೆಯಲ್ಲಿ ನಾನು ಸೂಪರ್ ಮೈಜರ್ಸ್ ಸಂಘಕ್ಕೆ ನಾನು ಚೇರಮನ್ ಆಗಿದ್ದೆ ಅಲ್ಲಿಯೂ ಕೆಲಸ ಮಾಡಿದ್ದೇನೆ ಮತ್ತು ಅನೇಕ ಸೊಸೈಟಿಗಳಲ್ಲಿಯೂ ಕೆಲಸ ಮಾಡಿದ್ದೇನೆ. ಆದರೆ ಅಲ್ಲಿ ಒಳ್ಳೆಯ ಕೆಲಸಗಳನ್ನು ಮಾಡುವುದಕ್ಕಾಗುವುದಿಲ್ಲ. ಅಲ್ಲಿ ಜನರ ಒತ್ತಡ ಹೇಗೆ ಬರುತ್ತದೆಂಬುದು ನನಗೆ ಗೊತ್ತು. ಆದ್ದರಿಂದ ಇಂತಹ ಸೊಸೈಟಿಗಳಲ್ಲಿ ಕೆಲಸ ಮಾಡುವವರು ನಿಷ್ಠೆಯಿಂದ ಇದ್ದರೂ ಅನೇಕ ಸಂದರ್ಭಗಳಲ್ಲಿ ತಪ್ಪುದಾರಿ ಹಿಡಿಯತಕ್ಕ ಪ್ರಸಂಗಗಳೂ ಬಂದು ಒಂದು ಕೆಟ್ಟ ಹೆಸರನ್ನು ಪಡೆಯುವಂಥ ಸಂದರ್ಭಗಳು ಬರುತ್ತವೆ. ಕೆಲವು ಕಡೆಗಳಲ್ಲಿ ಹೆಚಿ□ನ ಪ್ರೆಷರ್ ಕೊಡುವುದರಿಂದ ಇವತ್ತು ಆಗುತ್ತಾ ಇರುವ ಕೆಲಸಗಳು ಅಷ್ಟಾಗಿ ಒಳ್ಳೆಯದಾಗುವುದಿಲ್ಲ ಆದ್ದರಿಂದ ಇವತ್ತು ಮಾನ್ಯ ಮಂತ್ರಿಗಳಿಗೆ ಮತ್ತು ರಿಜಿಸ್ಟ್ರಾರ್ ಅವರಿಗೆ ಒಂದು ಪ್ರಾರ್ಥನೆ ಮಾಡುತ್ತೇನೆ. ಇವತ್ತು ನಮ್ಮ ಮಂತ್ರಿಗಳು ಎಲ್ಲರಿಗೂ ಬೇಕಾದವರು ಆದ್ದರಿಂದ ಏನಾದರೂ ತೊಂದರೆ ಇದೆಯೇ ಅಂದರೆ ಅ0ತಹ ತೊಂದರೆ ಏನೂ ಇಲ್ಲ. ನಮಗೆ ಕೊಟ್ಟಿರುವ ಪಿ.ಎ.ಸಿ. ರಿಪೋರ್ಟ್ ನೋಡಿದರೆ ಅದರಲ್ಲಿ ಕೆಲವು ಪುಟಗಳನ್ನು ಕೊಟ್ಟಿದ್ದಾರೆ ಅವುಗಳಲ್ಲಿ ಹೇಳಿದಹಾಗೆ ತಮಗೆ ಏನೇನು ಮಾಡುವುದಕ್ಕೆ ಶಕ್ತಿ ಇದೆಯೋ ಅದರಲ್ಲಿ ಮಿನಿಮಂ ಆದರೂ ಮಾಡಿ, ಮ್ಯಾಗ್ಸಿಮಂ ಮಾಡುವುದಕ್ಕೆ ಆಗದೇ ಹೋದರೂ ಮಿನಿಮಂ ಕೆಲಸಗಳನ್ನಾದರೂ ಮಾಡಿ. ಅಧಿಕಾರಿಗಳನ್ನು ಸಮ್ಮನೆ ವರ್ಣನೆ ಮಾಡಿದರೆ ಏನು ಪ್ರಯೋಜನ. ಎಲ್ಲರೂ ಪ್ರಮಾಣಿಕರಲ್ಲ. ಮಂತ್ರಿಗಳು ಮಾತ್ರ ತತ್ವನಿಷ್ಠ ಮಂತ್ರಿಗಳಾಗಿದ್ದಾರೆ. ಅಂತಹವರು ಯಾವಾಗಲೂ ಒಳ್ಳೆಯ ಕೆಲಸಗಳನ್ನು ಮಾಡುವುದು ಬಹಳ ಒಳ್ಳೆಯದು. ಒಳ್ಳೆಯವರು ಮೆಜಾರಿಟಿಯಲ್ಲಿ ಉಳಿಯುತ್ತಾರೆ. ಅದೇ ರೀತಿಯಲ್ಲಿ ಅಧಿಕಾರಿಗಳೂ ಸಹ ತತ್ವನಿಷ್ಠೆಯಿಂದ ಇದ್ದರೆ ತುಂಬಾ ಒಳ್ಳೆಯದು.

**ಶ್ರೀ ಕೆ.ಬಿ. ಶಿವಯ್ಯ** – ಮ್ಯಾಗ್ಸಿಮಂ ಯಾರು ಮಾಡಬೇಕು.

**ಶ್ರೀ ಎಸ್.ವೈ. ಪಾಟೀಲ** – ನಾವು ನೀವೂ ಮಾಡಬೇಕು. ಬರೀ ಸರ್ಕಾರದ ಪಕ್ಷವನ್ನೇ ಟೀಕೆ ಮಾಡುವುದು ಒಂದೇ ಅಲ್ಲ, ಅವರು ಈ ಕಡೆ ಬಂದಾಗ ಒಂದು ರೀತಿ ಹೇಳುವುದು, ಆ ಕಡೆ ಇದ್ದಾಗ ಒಂದು ರೀತಿ ಹೇಳುವುದು ಇದು ನಿಜವಾಗಿ ಸರಿಯಲ್ಲ. ನ್ಯಾಯವಾಗಿ ವಿಚಾರ ಮಾಡುವುದು ಒಂದು ತತ್ವನಿಷ್ಠೆ. ಏಕೆಂದರೆ ನಮ್ಮ ನಮ್ಮ ಪ್ರಾಮಾಣಿಕತನವನ್ನು ಪ್ರಶ್ನೆ ಮಾಡವುದು ಪ್ರತಿಯೊಬ್ಬರಿಗೂ ಸೇರಿರುವ ಹಕ್ಕು ಆಗಿದೆ. ಸಾರ್ವಜನಿಕರಲ್ಲಿ ಒಂದು ಹೇಳುವುದು, ಸನ್ಯಾಸಿಗಳಂತೆ, ವಿರಕ್ತಿಗಳಂತೆ. ಬಾಯಲ್ಲಿ ಹೇಳಿದಂತೆ ಕೃತಿಯಲ್ಲಿಯೂ ನಡೆಯಬೇಕು. ನಾನೂ ಸಹ ನನ್ನ ಆತ್ಮಶೋಧನೆ ಮಾಡಿಕೊಂಡಿದ್ದೇನೆ. ನಮ್ಮಲ್ಲಿ ಅನೇಕ ಲೋಪದೋಷಗಳನ್ನು ಕಾಣುತ್ತಿದ್ದೇನೆ. ಅಸೆಂಬ್ಲಿಯಲ್ಲಿ ಹೇಳಿದ ಮಾತು ಹೊರಗೆ ಉಳಿಯುವುದಿಲ್ಲ. ನಮ್ಮ ದೇಶದಲ್ಲಿ ಪ್ರಾಮಾಣಿಕವಾದ ಸಪ್ಪೋರ್ಟ ಪಕ್ಷದ ಅಧಿಕಾರಿಗಳಿಗೆ ಇಲ್ಲ.

ಮಾನ್ಯ ಅಧ್ಯಕ್ಷರೇ, ತಮ್ಮ ಮುಖಾಂತರ ಮಾನ್ಯ ಸಹಕಾರ ಸಚಿವರನ್ನು ಕೇಳಿಕೊಳ್ಳುವುದೇನೆಂದರೆ ಏನು ಕಲ್ಯಾಣ ಮಾಡಬೇಕೆಂದು ಹೊರಟಿರೋ ಅದು ನಿಜವಾಗಿಯೂ ಬಡ ಜನತೆಗೆ ದೊರೆಯಬೇಕಾದರೆ ತಾವು ಬಜೆಟ್ನಲ್ಲಿ ಇತರೆ ಟ್ಯಾಕ್ಸ್ ಮುಖಾಂತರ ವಸೂಲಿ ಮಾಡುವುದಕ್ಕಾಗುವುದಿಲ್ಲ. ಸಹಕಾರಿ ಬ್ಯಾಂಕುಗಳಲ್ಲಿ ಏನು ಏಳೂವರೆ ಪರ್ಸೆಂಟ್ ಇದ್ದುದನ್ನು ಹೋಗಿ ಇವತ್ತು 15 ಪರ್ಸೆಂಟ್ ಬಡ್ಡಿ ಸಾಮಾನ್ಯವಾಗಿ ಹೋಗಿದೆ. ಈ ಟ್ಯಾಕ್ಸ್ ವಸೂಲಿಗೋಸ್ಕರ ಒಂದು ವ್ಯವಸ್ಥೆ ಮಾಡಬೇಕಾಗುತ್ತದೆ. ಇದಕ್ಕೆ ಒಬ್ಬ ಡೆಪ್ಯೂಟಿ ಕಮಿಷನರ್ ಮಾಡಿ ಅವರಿಂದ ತಹಸೀಲ್ದಾರ್‌ಗೆ ಅಧಿಕಾರ ಕೊಟ್ಟು ಅವರ ಮುಖಾಂತರ ಸರ್ಕಲ್ ಇನ್ಸ್‌ಪೆಕ್ಟರ್‌ವರೆಗೆ ನಮ್ಮ ತಾಲ್ಲೂಕುಗಳಲ್ಲಿ 15 ಪರ್ಸೆಂಟ್ ಬಡ್ಡಿ ವಸೂಲಿ ಮಾಡುವುದು ಏನು ಇದೆ ಇವರಲ್ಲಿ ಒಂದು ಸಿಸ್ಟಮ್ಯಾಟಿಕ್ ವ್ಯವಸ್ಥೆ ಇಲ್ಲದೆ ಹೋದರೆ ಈಗ ನಮ್ಮ ಮುಂದೆ ಇರುವ ಪರಿಸ್ಥಿತಿ ಸುಧಾರಿಸಬೇಕಾದರೆ ಬಹಳ ಕಷ್ಟವಾಗುತ್ತದೆ. ಇದು ಹೇಗೆ ಇರಲಿ ನನ್ನ ವಿಚಾರವಾದರೂ ಇಷ್ಟೇ, ಇನ್ನು ಏನಾದರೂ ಈ ಇಲಾಖೆ ಸುಗಮವಾಗಿ ನಡೆಯಬೇಕಾದರೆ ಆ ಸಂಸ್ಥೆಯಲ್ಲಿರುವ ದೋಷವನ್ನು ತೆಗೆದು ಸರಿಯಾದ ರೀತಿಯಲ್ಲಿ ನಡೆಯುವಂತೆ ವ್ಯವಸ್ಥೆ ಮಾಡಬೇಕೆಂದು ಹೇಳುತ್ತೇನೆ. ಮತ್ತು ಪ್ರೈಮರಿ ಲ್ಯಾಂಡ್ ಡೆವಲಪ್‌ಮೆಂಟ್ ಬ್ಯಾಂಕ್ ಮುಖಾಂತರ ಸಣ್ಣ ರೈತರಿಗೆ ಸಹಾಯ ಮಾಡುತ್ತಿದ್ದು ಈಗ ಏನು ವಸೂಲಿ 75 ಪರ್ಸೆಂಟ್ ಆಗದೇ ಇದ್ದರೆ ಮತ್ತೆ ಯಾರಿಗೂ ಸಾಲವನ್ನು ಕೊಡಬಾರದೆಂದು ಏನು ಮಾಡಿದ್ದೀರಿ ಅದು ಬಹಳ ಜನರಿಗೆ ತೊಂದರೆಯಾಗುತ್ತದೆ. ಇದು ನಮ್ಮ ಬಿಜಾಪೂರ ಜಿಲ್ಲೆಗೆ, ಅದರಲ್ಲೂ ಸಿಂದಗಿ ಮತ್ತು ಇಂಡಿ ತಾಲ್ಲೂಕುಗಳಿಗೆ ಅನ್ವಯಿಸುವುದಿಲ್ಲ. ಕಾರಣವಾದರೂ ಇಷ್ಟೆ ಅಲ್ಲಿ ಸುಮಾರು ವರ್ಷಗಳಿಂದ ಮಳೆಬೆಳೆಗಳು ಇಲ್ಲದೆ ಅಲ್ಲಿನ ಜನರ ಸ್ಥಿತಿಯನ್ನು ಹೇಳುವುದಕ್ಕೆ ಬರುವುದಿಲ್ಲ. ಮಾನ್ಯ ಶ್ರೀ ಕಾಗೋಡು ತಿಮ್ಮಪ್ಪನವರು ಹೇಳಿದಂತೆ ಶ್ರೀ ಎಸ್.ವೈ. ಪಾಟೀಲ್‌ರವರು ಯಾವಾಗಲೂ ಅವರ ಭಾಗದಲ್ಲಿ ತೊಂದರೆ ಇದ್ದೇ ಇರುತ್ತದೆ ಅದಕ್ಕೆ ಪರಿಹಾರ ಸಿಕ್ಕಿಲ್ಲವೇ? ಎನ್ನುವ ರೀತಿಯಲ್ಲಿ ಹೇಳಿದರು. ನಮ್ಮ ಭಾಗದಲ್ಲಿ ಅಂತಹ ಪರಿಸ್ಥಿತಿಯಾಗಿದೆ. ನಮ್ಮ ಸಹಕಾರಿ ಬ್ಯಾಂಕುಗಳ ನಿಯಮಗಳೇನೆ ಇರಲಿ ಅದನ್ನು ಗಣನೆಗೆ ತೆಗೆದುಕೊಳ್ಳದೆ ನಮ್ಮ ಭಾಗಕ್ಕೆ ಸಹಾಯ ಮಾಡಬೇಕೆಂದು ಕೇಳಿಕೊಳ್ಳುತ್ತೇನೆ. ಇನ್ನು ನಮ್ಮ ಭಾಗದಲ್ಲಿ ಯಾವಾಗ ಮಳೆ ಬಂದು ಬೆಳೆ ಬರುತ್ತದೆ ಎನ್ನುವ ಭರವಸೆಯನ್ನು ನಾವು ಇಟ್ಟುಕೊಳ್ಳಲು ಸಾಧ್ಯವಿಲ್ಲ. ಅದಕ್ಕೆ ಗ್ಯಾರಂಟಿ ಮಾಡುವುದಕ್ಕೆ ಬರುವುದಿಲ್ಲ. ಯಾವುದೇ ರೂಲ್ಸ್ ಇದ್ದರೂ ಅದನ್ನು ನಮ್ಮ ಭಾಗಕ್ಕೆ ಅನ್ವಯಿಸಿದರೆ ಬಹಳ ತೊಂದರೆಯಾಗುತ್ತದೆ ಬ್ಯಾಂಕಿನಿಂದ ಯಾರಿಗೂ ಹಣ ಸಿಕ್ಕುವುದಿಲ್ಲ ಆದ್ದರಿಂದ ನಮ್ಮ ಭಾಗಕ್ಕೆ ಬೇರೆ ವ್ಯವಸ್ಥೆ ಮಾಡಿ ಅವರಿಗೆ ಹಣ ಕೊಡುವಂತ ವ್ಯವಸ್ಥೆ ಮಾಡಬೇಕೆಂದು ಮಾನ್ಯ ಕೆ. ಎಚ್. ರಂಗನಾಥ ಅವರನ್ನು ಕೇಳಿಕೊಳ್ಳಬೇಕಾಗಿದೆ. ಇದರಿಂದ ಪರಿಣಾಮ ಏನಾಗುತ್ತದೆ ಎಂದರೆ ನಿಮ್ಮ ಇಲಾಖೆಯವರು ಮತ್ತು ಸಿಬ್ಬಂದಿಯವರು ಜನರಿಗೆ ಸುಳ್ಳು ಹೇಳಿ ಸುಧಾರಣೆ ಮಾಡುತ್ತೇವೆಂದು ಜನರನ್ನು ಅಲ್ಲಿಂದ ಇಲ್ಲಿಗೆ ಅಡ್ಡಾಡಿಸುತ್ತಾರೆ. ಆದ್ದರಿಂದ ಇದಕ್ಕೆ ಕೊ-ಆಪರೇಟೀವ್ ಸೊಸೈಟೀಸ್ ಆಕ್ಟಿನಲ್ಲಿ ಒಂದು ಕಾನೂನನ್ನು ಮಾಡಿ ಅಪೆಕ್ಸ್ ಬ್ಯಾಂಕಿನಿಂದ ಏನಾದರೂ ಸಹಾಯ ದೊರೆಯುವಂತೆ ಮಾಡಬೇಕು ಬರೀ ನಾವು ಅಸೆಂಬ್ಲಿ ಮೆಂಬರ್ ಆಗಿ

ಒಂದು ಬರೀ ಟೀಕೆ ಮಾಡಿದರೆ ನಮ್ಮ ಜವಾಬ್ದಾರಿ ಮುಗಿಯುವುದಿಲ್ಲ. ಯಾವುದಾದರೂ ಒಂದು ಪಾರ್ಟ್ಸ್ ಮುರಿದು ಹೋದರೆ ಅಲ್ಲಿಗೆ ಆ ಯಂತ್ರ ಯಾವುದಕ್ಕೂ ಬರುವದಿಲ್ಲವೆಂದು ಹೇಳಿದರೆ ಆಗುವುದಿಲ್ಲ ಬೇರೆ ಪಾರ್ಟ್ಸ್ ಮಾಡಿ ಮತ್ತೆ ಚಾಲನೆಗೆ ಅವಕಾಶ ಮಾಡಬೇಕು. ನಮ್ಮ ಮುನಿಸಿಪಾಲಿಟಿ ಮೇಯರ್ ಹೇಳಿದ ಪೇರ್‌ಪಾರ್ಟ್ಸ್ ಇಲ್ಲದೇ ಹೋದರೆ ಅದು ಯಾವ ಪ್ರಯೋಜನಕ್ಕೆ ಬರುವುದಿಲ್ಲ ಎನ್ನುವ ಹಾಗೆ ಆಗಬಾರದು. ಯಾವ ಪಿಎಲ್‌ಡಿ ಬ್ಯಾಂಕ್ ಆ ರೀತಿ ತೊಂದರೆಗೆ ಒಳಗಾಗಿದೆ. ಅದನ್ನು ಬಂದ್‌ಮಾಡಿ ಅದಕ್ಕೆ ಒಂದು ಹೊಸ ಸಾಧನೆಯನ್ನು ಕಂಡುಕೊಂಡು ಮುಂದೆ ರೈತರಿಗೆ ಅನುಕೂಲ ಮಾಡಿಕೊಡಬೇಕೆಂದು ಹೇಳುತ್ತೇನೆ. ಪ್ರೈವೇಟ್ ಬ್ಯಾಂಕ್ ಅಥವಾ ಡಿಸಿಸಿ ಬ್ಯಾಂಕ್‌ಗಳ ಮುಖಾಂತರವಾಗಿ ಯಾದರೂ ಸಹಾಯ ನೀಡದೇ ಹೋದರೆ ಬೇರೆ ಕೆಲವು ಸೊಸೈಟಿಗಳನ್ನು ಕೊಡಬೇಕೆಂದು ಹೇಳುತ್ತೇನೆ. ಮುಖ್ಯವಾಗಿ ಬಿಜಾಪುರ ಜಿಲ್ಲೆಯ ಇಂಡಿ ಮತ್ತು ಸಿಂದಗಿ ತಾಲ್ಲೂಕುಗಳಿಗೆ ಸಹಾಯ ಮಾಡಬೇಕು. ಆದರೆ ಪ್ರತಿಸಾರಿಯು ಸಿಂದಗಿ ಮತ್ತು ಇಂಡಿ ಬಗ್ಗೆ ಮಾತನಾಡುತ್ತೇನೆ. ಇದು ಒಂದು ಪರಮನೆಂಟ್ ಸಿಲೆಬಸ್ ಬಿದ್ದ ಹಾಗೆ. ಆದ್ದರಿಂದ ಮಾನ್ಯ ಮುಖ್ಯಮಂತ್ರಿಗಳು ತಾವು ದೊಡ್ಡ ಮನಸ್ಸು ಮಾಡಿ ಮಾಡಬೇಕು. ಇಷ್ಟು ಹೇಳಿ ನನಗೆ ಇಷ್ಟು ಮಾತನಾಡಲು ಅವಕಾಶ ಕೊಟ್ಟ ಅಧ್ಯಕ್ಷರಿಗೆ ವಂದಿಸಿ ನನ್ನ ಮಾತನ್ನು ಮುಗಿಸುತ್ತೇನೆ.

## ನಮಗೆಂಥ ಶಿಕ್ಷಕರು, ಶಿಕ್ಷಣ ಬೇಕು?

17ನೇ ಮಾರ್ಚ್ 1976

**ಶ್ರೀ ಎಸ್.ವೈ. ಪಾಟೀಲ** (ಸಿಂದಗಿ) – ಸನ್ಮಾನ್ಯ ಉಪಾಧ್ಯಕ್ಷರೇ, ಮಾನ್ಯ ಮಲ್ಲಿಕಾರ್ಜುನ ಸ್ವಾಮಿ ಯವರು ಬಹಳ ಯೋಗ್ಯರು. ಅವರ ಬಗ್ಗೆ ನನಗೆ ಗೌರವ ಇದೆ. ಪ್ರಾಥಮಿಕ ಶಿಕ್ಷಣ, ಪ್ರೌಢ ಶಿಕ್ಷಣ ಮತ್ತು ವೃತ್ತಿಕ ಶಿಕ್ಷಣಗಳ ಬಗ್ಗೆ ಹಲವಾರು ಮಾತುಗಳನ್ನು ತುಲನಾತ್ಮಕ ದೃಷ್ಟಿಯಿಂದ ಅಂಕಿ ಸಂಖ್ಯೆಗಳನ್ನು ಜೋಡಿಸಿ ಮಾನ್ಯ ಮಂತ್ರಿಗಳು ತಮ್ಮ ಇಲಾಖಾ ವರದಿಯಲ್ಲಿ ಬರೆದಿದ್ದಾರೆ. ಇದನ್ನು ಬಾಹ್ಯ ದೃಷ್ಟಿಯಿಂದ ನೋಡಿದಾಗ, ಮಾನ್ಯ ಮಂತ್ರಿಗಳು ಬಹಳ ಪ್ರಯತ್ನಪಟ್ಟಿದ್ದಾರೆ. ಇಂಥಾ ಶಿಕ್ಷಣ ಮಂತ್ರಿಗಳು ದೊರೆಯುವುದು ದುರ್ಲಭ ಎನ್ನುವಂತಾಗುತ್ತದೆ. ಆದರೆ ಇದರ, ಒಳಹೊಕ್ಕು ನೋಡಿದಾಗ ನಮ್ಮ ರಾಜ್ಯದ ಜನತೆಗೆ ಎಂಥಾ ಶಿಕ್ಷಣ ದೊರಕಬೇಕು; ಅದು ಹೇಗೆ ದೊರಕಬೇಕು. ಇದರ ಬಗ್ಗೆ ಮಾಡಿರುವ ಪ್ರಯತ್ನಗಳಾವುವು ಎಂಬುದೊಂದು ತಿಳಿಯುವುದಿಲ್ಲ. ಲೋಕೋಪಯೋಗಿ ಇಲಾಖೆಯವರ ಕಾರ್ಯಕ್ರಮಗಳನ್ನು ನಾವು ನೋಡುತ್ತಿದ್ದೇವೆ. ಅವರು ಸಾವಿರಾರು ಸೇತುವೆಗಳನ್ನು ಕಟ್ಟುತ್ತಿದ್ದಾರೆ. ಅವುಗಳಲ್ಲಿ ನೂರಾರು ಬಿದ್ದರೂ ಅಡ್ಡಿಯಿಲ್ಲ! ಆದರೆ, ದೇಶದ ಭವಿಷ್ಯದ ದೃಷ್ಟಿಯಲ್ಲಿ ಮೂರು ಖಾತೆಗಳು ಅತಿ ಮಹತ್ವದವು. ಒಂದು ಭಾರತ ಸರ್ಕಾರದಲ್ಲಿರತಕ್ಕಂಥ ಡಿಫೆನ್ಸ್ ಖಾತೆ. ಆ ಮೇಲೆ ನಮ್ಮ ಸರ್ಕಾರದಲ್ಲಿ ಆಂತರಿಕವಾಗಿ ಲಾ ಅಂಡ್ ಆರ್ಡರ್ ಮೇನ್‌ಟೇನ್ ಮಾಡತಕ್ಕ ಖಾತೆ, ಮತ್ತು ಎರಡನೆಯದಾಗಿ ಆಹಾರ ಖಾತೆ ಮೂರನೇದು ಶಿಕ್ಷಣ ಖಾತೆ. ಇನ್ನುಳಿದ ಖಾತೆಗಳು ಇದ್ದರೂ ಸರ್ಕಾರ ನಡೆಯುತ್ತದೆ, ಇಲ್ಲದಿದ್ದರೂ ನಡೆಯುತ್ತದೆ. ಸರ್ಕಾರದ ವರದಿ ನೋಡಿದಾಗ, ಇಷ್ಟು ಹುಡುಗರು ಪಾಸಾಗಿದ್ದಾರೆ. ಇಷ್ಟು ರೂಮುಗಳನ್ನು ಹೆಚ್ಚು ಮಾಡಿದ್ದೇವೆ

ಎಂದು ಹಲವಾರು ಅಂಕಿ–ಸಂಖ್ಯೆಗಳನ್ನು ಕೊಟ್ಟಿರುವುದು ಕಂಡು ಬರುತ್ತದೆ. ಆದರೆ, ನನ್ನ ದೃಷ್ಟಿಯಲ್ಲಿ ನಮ್ಮ ಭಾರತ ಸ್ವಾತಂತ್ರ್ಯವನ್ನು ಯಾರು ಗಳಿಸಿಕೊಟ್ಟರು? ಹೇಗೆ ಗಳಿಸಿಕೊಟ್ಟರು? ಎನ್ನುವುದು ಮುಖ್ಯ. ನೀವು, ನಿಮ್ಮ ಹೆಸರನ್ನು ಬರೆದುಕೊಂಡು ಇದಕ್ಕೆ ನಾವೇ ಕಾರಣರು ಎಂದು ಒಂದು ಪುಸ್ತಕವನ್ನು ನೀವೇ ಬರೆದುಕೊಳ್ಳಬಹುದು. ಆದರೆ ನಮ್ಮ ದೇಶಕ್ಕೆ ಸ್ವಾತಂತ್ರ್ಯ ಬರಲು ಮಹಾತ್ಮಾ ಗಾಂಧಿಯವರು ಕಾರಣ, ಜವಾಹರಲಾಲ ನೆಹರೂ ಅವರು, ವಲ್ಲಭಾಯಿ ಪಟೇಲ ಅವರು, ಡಾ. ರಾಜೇಂದ್ರ ಪ್ರಸಾದ್ ಅವರು, ಇನ್ನೂ ಮುಂತಾದ ಹಲವಾರು ದೇಶಭಕ್ತರು ತ್ಯಾಗ ಮಾಡಿದ ಫಲವಾಗಿ ನಮಗೆ ಸ್ವಾತಂತ್ರ್ಯ ಬಂದಿದೆ. ಅಷ್ಟೇ ಅಲ್ಲದೆ, ಅನೇಕ ಸ್ವಾತಂತ್ರ್ಯ ವೀರಯೋಧರ ಸ್ವಾತಂತ್ರ್ಯ ಸಂಗ್ರಾಮ ಕಾಲದಲ್ಲಿ ಇದಕ್ಕಾಗಿ ಫಾಸಿ ಶಿಕ್ಷೆಯನ್ನು ಅನುಭವಿಸಿದ್ದಾರೆ.

ಇವೊತ್ತು ನಮಗೆ ಸರಿಯಾದ ಶಿಕ್ಷಣ ಸಿಕ್ಕದೇ ಹೋದರೆ ನಮ್ಮ ತಲೆಯಲ್ಲಿ ಶಿಕ್ಷಣ ವ್ಯವಸ್ಥೆ ತಪ್ಪಾದರೆ ಅದನ್ನು ಯಾವ ಒಂದು ಡಿಪಾರ್ಟ್‌ಮೆಂಟ್‌ನಿಂದಲೂ ಕೂಡ ಟ್ರಾನ್ಸ್‌ಫರ್ ಮಾಡಲಿಕ್ಕೆ ಆಗುವುದಿಲ್ಲ ಎಂದು ಹೇಳುತ್ತೇನೆ. ಇವೊತ್ತು ಆಹಾರ ಧಾನ್ಯ ಗೋಧಿ ಇಲ್ಲ ಎಂದರೆ ಅಮೇರಿಕಾದಿಂದ ತರಬಹುದು, ಬ್ಲಡ್ ಇಲ್ಲ ಎಂದರೆ ಬ್ಲಡ್ ಬ್ಯಾಂಕಿನಿಂದ ಬ್ಲಡ್ ತರಬಹುದು. ಆದರೆ ಈ ಶಿಕ್ಷಣವನ್ನು ತರಲಿಕ್ಕೆ ಸಾಧ್ಯವಾಗುವುದಿಲ್ಲ, ಇವೊತ್ತಿನ ದಿವಸ ಈ ಶಿಕ್ಷಣ ದೃಷ್ಟಿಯನ್ನು ನೋಡುವುದಾದರೆ, ಇದು ಅತ್ಯಂತ ವಿರೋಧ ಮಾಡತಕ್ಕ ಡಿಮ್ಯಾಂಡ್ ಆಗಿದೆ, ಆದುದರಿಂದ ಇದನ್ನು ನಾನು ತಾತ್ವಿಕವಾಗಿ ವಿರೋಧ ಮಾಡುತ್ತಿದ್ದೇನೆ. ಈ ಒಂದು ಶಿಕ್ಷಣ ಖಾತೆಯಲ್ಲಿ ಯಾರೇ ವಿದ್ಯಾಸಚಿವರು ಬಂದರೂ ಕೂಡ ಉಪಯುಕ್ತವಾಗುವುದಿಲ್ಲ ಇವೊತ್ತು ಇದಕ್ಕೆ ಒಂದು ಉದಾಹರಣೆ ಹೇಳಬೇಕು ಎಂದರೆ ಡಾಕ್ಟರು ಯಾರಾದರೆ ಏನು? ಮುಖ್ಯವಾಗಿ ಕಾಯಿಲೆ ಗುಣವಾಗಬೇಕು ಇವೊತ್ತು ಬೇಕಾದಷ್ಟು ಡಿಗ್ರಿ ತೆಗೆದುಕೊಂಡಿರುತ್ತಾರೆ. ಆದರೆ ಅವರ ಕೈಯಿಂದ ಕಾಯಿಲೆ ಗುಣವಾಗುವುದಿಲ್ಲ, ಅದೇ ಒಬ್ಬ ಹಳ್ಳಿಯ ಡಾಕ್ಟರ ಬಳಿ ಔಷಧಿ ತೆಗೆದುಕೊಂಡರೆ ಕಾಯಿಲೆ ಗುಣವಾಗುತ್ತದೆ. ಆದ್ದರಿಂದ ಹಿತ ತೋರಿಸುವವರು ಆತ್ಮಬಂಧು ಎಂದು ಹೇಳುತ್ತೇನೆ. ಯಾರು ಮಗುವನ್ನು ಹಡೆಯುತ್ತಾರೆ ಅವರು ತಾಯಿಯಾಗುತ್ತಾರೆ. ಇನ್ನು ಇವೊತ್ತು ನಮ್ಮ ಬದುಕು ಹೇಗಿದೆ ಎಂದರೆ ನಮ್ಮ ಪಾಲಿಗೆ ಯಾರು ಇದ್ದಾರೆ ಎಂದರೆ ಎಸ್.ಎಸ್.ಎಲ್.ಸಿ. ಅದಂತ ಹುಡುಗರು, ಆ ಹುಡುಗರು ಏನು ಹೇಳುತ್ತಾರೆಂದರೆ ನಿಮಗೆ ಒಂದು ಕೆಲಸ ಕೊಡಿಸಲು ಸಾಧ್ಯವಾಗುವುದಿಲ್ಲ ಯಾಕೆ ನಮ್ಮ ಎಂ.ಎಲ್.ಎ ಆಗಿದ್ದೀರಿ ಅನ್ನುತ್ತಾರೆ. ನಾವು ನಮ್ಮ ಪಾಲಿನ ಕರ್ತವ್ಯವನ್ನು ಚೆನ್ನಾಗಿ ಇವೊತ್ತಿನ ದಿವಸ ಯೋಚನೆ ಮಾಡಿ ನೋಡಬೇಕಾದ ಸಂದರ್ಭ ಬಂದಿದೆ. ಹುಡುಗರಿಗೆ ಒಳ್ಳೆಯ ಶಿಕ್ಷಣ ಸಿಕ್ಕುತ್ತಿದೆಯೇ ಇಲ್ಲವೇ? ನಮ್ಮ ಮಕ್ಕಳ ದೃಷ್ಟಿಯಿಂದ ಒಳ್ಳೆಯದು ಆಗುತ್ತದೆಯೇ ಇಲ್ಲವೇ? ಎಂದು ನೋಡಬೇಕಾಗಿದೆ. ಎಂತಹ ಶಿಕ್ಷಣ ಸಿಕ್ಕಿದರೆ ಜನರ ಅಭ್ಯುದಯವಾಗುತ್ತದೆ ಎಂದು ನೋಡಬೇಕು. ಮಾನ್ಯ ಮಂತ್ರಿಗಳು ನಮ್ಮ ಸಲಹೆಗಳನ್ನು ತೆಗೆದುಕೊಳ್ಳಬೇಕು ಎಂದು ನಾನು ಹೇಳುತ್ತಾ, ಇಲ್ಲ ಡಿ.ಸಿ. ಪಾವಟೆಯವರನ್ನು ಕೆ.ವಿ ಪುಟ್ಟಪ್ಪನವರನ್ನು ಕೇಳಿ ಈ ಶಿಕ್ಷಣ ರಾಜಕೀಯದಿಂದ ಬಂದಿಲ್ಲ, ಋಷಿ ಮೂಲದಿಂದ ಬಂದಿದ್ದು, ಇವೊತ್ತು ಹುಡುಗರಿಗೆ, ವಿದ್ಯಾಸಂಸ್ಥೆಗಳಲ್ಲಿ ಸರಿಯಾದಂತಹ ಶಿಕ್ಷಣ ದೊರೆಯುತ್ತಿಲ್ಲ, ಇವೊತ್ತು ಹುಡುಗರು ಏನೋ

ಎಸ್.ಎಸ್.ಎಲ್.ಸಿ. ಪಾಸು ಮಾಡಿಕೊಂಡು ಬಂದು ಎಂ.ಎಲ್.ಎ. ಮಿನಿಸ್ಟರುಗಳ ಕಾಲು ಹಿಡಿದು ನೌಕರಿ ಕೊಡಸಬೇಕೆಂದು ಕೇಳತಕ್ಕದ್ದು ನೋಡುತ್ತಿದ್ದೇವೆ. ಈ ರೀತಿ ಅಲೆದಾಡತಕ್ಕಂತವರಿಗೆ ನೌಕರಿ ದೊರಕಿಸತಕ್ಕ ಒಂದೇ ಉದ್ದೇಶವಾಗಿದೆ. ಎಂ.ಬಿ.ಬಿ.ಎಸ್. ಪಾಸಾದ ತಕ್ಷಣ ಅವರು ಗವರ್ನ್‌ಮೆಂಟ್ ಡಾಕ್ಟರು ಆಗಬೇಕು ಎಂದು ಹೇಳುತ್ತಾರೆ. ಬಿ.ಎ.ಎಲ್.ಎಲ್.ಬಿ. ಓದಿದವರು ಗವರ್ನ್‌ಮೆಂಟ್ ಪ್ಲೀಡರ್ ಆಗಬೇಕು ಎಂದು ಹೇಳುತ್ತಾರೆ. ಹೇಗೋ ಅಂತೂ ಒಂದು ಸರ್ಕಾರಿ ಕೆಲಸ ಸಿಕ್ಕಿದರೆ, ಅವರ ತಂದೆತಾಯಿಗಳು ಒಂದು ಹೆಣ್ಣು ನೋಡಿ ಮದುವೆ ಮಾಡಿಬಿಡುತ್ತಾರೆ. ಇನ್ನೂ ಪ್ರೈವೇಟ್ ಸಂಸ್ಥೆಗಳನ್ನು ನಡೆಸಿ ಎಂದು ಹೇಳಿದರೆ, ಇವೊತ್ತು ಪ್ರೈವೇಟ್ ಸಂಸ್ಥೆ ನಡೆಸಿದರೆ ಅಲ್ಲಿ ಯಾರೂ ಬರುವುದಿಲ್ಲ, ಮಿನಿಸ್ಟರು ಏನಾದರೂ ನಡೆಸಿದರೆ ಒಂದು ಇಪ್ಪತ್ತು ಹುಡುಗರು ಬರಬಹುದು. ಇನ್ನು ಕೆಲಸವು ಕಡೆ ಏನಾಗಿದೆ ಎಂದರೆ ಹುಡಗರಿಗೆ ಪುಸ್ತಕ ಕೊಟ್ಟು ಕಾಪಿ ಮಾಡು ಎಂದು ಹೇಳಿದರೂ ಅವರಿಗೆ ಕಾಫಿ ಮಾಡಲಿಕ್ಕೆ ಬರುವುದಿಲ್ಲ ಎಂದು ಹೇಳುತ್ತಾರೆ. ಆದುದರಿಂದ ಮಾನ್ಯಮಂತ್ರಿಗಳು ನಾವು ಏನೊಂದು ಹತ್ತಾರು ಸಲಹೆಗಳನ್ನು ಕೊಡುತ್ತೇವೆ. ಅದನ್ನು ತೆಗೆದುಕೊಳ್ಳಬೇಕು ನಮ್ಮ ಸಜೆಸನ್‌ನಿಂದ ಏನೂ ಆಗುವುದಿಲ್ಲ ತಾವು ಕವಿಗಳಾದ ಕೆ.ವಿ. ಪುಟ್ಟಪ್ಪನವರನ್ನು ಕೇಳಬೇಕು. ತಾವು ಅನುಭವೀ ಶಿಕ್ಷಣ ತಜ್ಞರು ಇದ್ದೀರಿ, ತಾವು ತಮ್ಮ ಅಂತರಾತ್ಮ ಹೇಳುವ ಹಾಗೆ, ಒಳ್ಳೆಯ ಪ್ರಮಾಣಿಕತೆಯಿಂದ ಮಹಾತ್ಮ ಗಾಂಧಿಯವರನ್ನು ನೆನಪಿಸಿಕೊಂಡು ಉತ್ತರ ಕೊಡಬೇಕು. ಇವೊತ್ತು ಈ ರಿಪೋರ್ಟ್‌ನಲ್ಲಿ ಅನೇಕ ಅಂಕಿಸಂಖ್ಯೆಗಳು ತುಂಬಿಕೊಂಡಿವೆ. ಇವೊತ್ತು ಈ ಹುದ್ದೆಗಳನ್ನು ನೋಡಿದರೆ ಬೇಕಾದಷ್ಟು ಇವೆ. ಇವೊತ್ತು ಟೀಚರ್ಸ್ ಏನಾಗಿದ್ದಾರೆ. ನಮ್ಮ ದೇಶದಲ್ಲಿ ಏನು ನಡೆಯುತ್ತಿದೆ ಬಿಗಿನಿಂಗ್ ಆಫ್ ದಿ ಡೆಮಾಕ್ರಸಿ ಏನಾಗಿದೆ ಅದನ್ನು ನೋಡಬೇಕಾಗಿದೆ. ಇವೊತ್ತಿನ ಇವಸ ನಿಮ್ಮ ಡೈರೆಕ್ಟರು, ನಿಮ್ಮ ಸೆಕ್ರಟರಿಯವರು ನಿಮ್ಮ ಕೈಯಲ್ಲಿ ಇದ್ದಾರೆ ಇವೊತ್ತು ಡೈರೆಕ್ಟರು ಏನೋ ಒಂದು ವಿಸಿಟ್ ಮಾಡಬೇಕು ಎಂದು ಹೇಳುತ್ತಾರೆ. ಅದರಂತೆ ಕೆಳಗಿನ ಅಧಿಕಾರಿಗಳು ವಿಸಿಟ್ ಮಾಡುತ್ತಾರೆ. ಅಷ್ಟೇ ಹೊರತು ಕೆಳಗಿನ ಅಧಿಕಾರಿಗಳ ಬಗ್ಗೆ ಹೇಳಬೇಕಾದರೆ ಯಾರ ಕೈಯ್ಯಲ್ಲಿ ಯಾದು ಇಲ್ಲ. ತಮ್ಮ ಕೈ ಕೆಳಗೆ ಮಾತ್ರ ತಮ್ಮ ಸೆಕ್ರೆಟರಿಗಳು, ಡೈರೆಕ್ಟರುಗಳು ಸಿಕ್ಕುತ್ತಾರೆ. ಆದುದರಿಂದ ಇವೊತ್ತು ಇದರ ಮೂಲ ತಳಹದಿಗೆ ಹೋಗಿ ನೋಡಬೇಕಾಗಿದೆಯೇ ಹೊರತು, ಅದನ್ನು ಬಿಟ್ಟು ಸುಮ್ಮನೆ ಯಾರನ್ನು ಟೀಕೆ ಮಾಡಿದರು. ಈ ಪ್ರಶ್ನೆ ಬಗೆಹರಿಯುವುದಿಲ್ಲ. ಇವೊತ್ತು ರೋಗಿಗಳಿಗೆ ಸರಿಯಾದ ಔಷಧಿ ಕೊಟ್ಟರೆ ಕಾಯಿಲೆ ವಾಸಿಯಾಗುತ್ತದೆ. ಸುಮ್ಮನೆ ಅದನ್ನು ಬಿಟ್ಟು ಸರಿಯಾದ ಔಷಧಿ ಇಲ್ಲ ಎಂದು ಅಲಿಗೇಷನ್ ಮಾಡಿಕೊಂಡು ಹೋದರೆ ಅದು ಬಗೆಹರಿಯವುದಿಲ್ಲ. ಇನ್ನು ವಿಜಾಪುರ ಜೈಲಿನಲ್ಲಿ ನಡೆದದ್ದು ಹೇಳಬೇಕು ಎಂದು 1930 ರಲ್ಲಿ ಜೈಲಿನ ಡಾಕ್ಟರರು ಎಲ್ಲ ರೋಗಗಳಿಗೂ ಒಂದೇ ತರದ ಮುಲಾಮು ಹಚ್ಚುತ್ತಿದ್ದರು ಇಂಥವರು ಪಡೆದ ಶಿಕ್ಷಣ ನೋಡಿ ದುಃಖವಾಯಿತು. ಇವೊತ್ತು ಮಾನ್ಯ ಚನ್ನಬಸಪ್ಪನವರು ಇಲ್ಲಿ ಇದ್ದಾರೆ, ನಾನು ಇವರಿಗೆ ಹೇಳುವುದು ಏನೆಂದರೆ ತಾವು ಇಲ್ಲಿ ವಿಧಾನಸೌಧ ನೋಡುತ್ತಿದ್ದೀರಿ. ಇವೊತ್ತು ತಾವು ಯಾವುದೇ ಒಂದು ಪ್ಲಾನ್ ಮಾಡಿ ಸರಿಯಾಗಿ ಸಿಮೆಂಟ್ ಹಾಕದೇ ಇದ್ದರೆ ಸರಿಯಾದ ಫೌಂಡೇಷನ್ ಹಾಕದೇ ಇದ್ದರೆ ಆ ಬಿಲ್ಡಿಂಗ್ ಉಳಿಯುವುದಿಲ್ಲ. ಇವೊತ್ತು ಇದೇ ರೀತಿ ಮಕ್ಕಳ ಜನನವಾದ ಕೂಡಲೇ ಯಾವ ಪೌಷ್ಠಿಕ ಆಹಾರ

ಹಾಕಿದರೂ ಸರಿ ಆಗುವುದಿಲ್ಲ. ಅದಕ್ಕೆ ತಾಯಿ ಹಾಲು ಮುಖ್ಯ ಇರುತ್ತದೆ. ಹಾಗೆ ಈ ಪ್ರೈಮರಿ ಶಿಕ್ಷಣ ನಂತರ ಮಾಧ್ಯಮಿಕ ಶಿಕ್ಷಣ, ಕಾಲೇಜು ಶಿಕ್ಷಣ ಆದುದರಿಂದ ತಾವು ಪ್ರಾಥಮಿಕ ವಿದ್ಯಾಭ್ಯಾಸದ ಕಡೆಗೆ ಹೆಚ್ಚು ಗಮನ ಕೊಡಬೇಕು ಎಂದು ಹೇಳುತ್ತೇನೆ. ಇನ್ನು ನಮ್ಮ ಹುಡುಗರು ಏನು ಹೇಳುತ್ತಾರೆ. ಎಂದರೆ ಎಸ್.ಎಸ್.ಎಲ್.ಸಿ ಪಾಸ್ ಮಾಡಿದರೆ ಸಾಕು, ನಮ್ಮಲ್ಲಿ ಬಂದು ತಾವು ನೌಕರಿ ಕೊಡಿಸುತ್ತೀರೋ ಅಥವಾ ನಾವು ಬಾವಿಗೆ ಬೀಳೋಣವೋ, ನೀವು ಏತಕ್ಕೆ ಎಂ.ಎಲ್.ಎ.ಗಳಾಗಿದ್ದೀರಾ ಎಂದು ನಮ್ಮ ಮೇಲೆ ಚಾರ್ಜ್ ಮಾಡುತ್ತಾರೆ. ನಾನು ಮೊಂಬಾಯಿ ಎಂ.ಎಲ್.ಎ. ಆಗಿದ್ದಾಗ ನಾನು ಒಂದು ಕಡೆ ಹೋಗಿಲ್ಲ. ಈಗ ನಮ್ಮ ಮನೆಯಲ್ಲಿ ಏನಾಗಿದೆ ಎಂದರೆ ನಮ್ಮ ಮನೆಗೆ ನೌಕರಿ ಕೊಡಿಸಿರಿ ಎಂದು ಬರುವುದರ ಸಂಖ್ಯೆ ಜಾಸ್ತಿಯಾಗುತ್ತದೆ ಇದನ್ನು ನೋಡಿ ನನ್ನ ಧರ್ಮಪತ್ನಿಯವರು ನೌಕರಿ ಸಲುವಾಗಿ ಎಡತಾಕುವ ಹುಡುಗರನ್ನು ನೋಡಿ ನಿಮಗೆ ಈ ಹುಡುಗರಿಗೆ ಕಲ್ಯಾಣ ಮಾಡುವುದು ಆಗಿದಿದ್ದರೆ ಎಂ.ಎಲ್.ಎ ಬಿಡಿರಿ ಅಂತಾ ಅನ್ನ ಹತ್ತಿರುವರು ಅವರಿಗೆ ಈ ದಡ್ಡ ಹುಡುಗರಿಗಾಗಿ ಎಂ.ಎಲ್.ಎ ಬಿಡಲಾರೆ. ನಿಮ್ಮೆಲ್ಲರನ್ನೂ ಮನೆಯನ್ನೆ ಬಿಡುವೆ ಅಂತಾ ಹೇಳಿರುವೆ. ಇವತ್ತು ನೀವು ನಮ್ಮ ಕಡೆ ಅಪ್ಪರ್ ಕೃಷ್ಣಾ ಯೋಜನೆಯನ್ನು ಮಾಡಿಕೊಟ್ಟಿಲ್ಲ ಇವತ್ತು ಜನರಿಗೆ ಆಹಾರವಿಲ್ಲ. ಮೇಲಾಗಿ ಇಂಥಹ ಶಿಕ್ಷಣ ಪಡೆದ ನಿರುದ್ಯೋಗಿಗಳು. ನಾನು ಭಾರತೀಯ ಸಂಸ್ಕೃತಿಯನ್ನು ಓದಿದ್ದೇನೆ. ಶ್ರೀರಾಮಚಂದ್ರನ ಚರಿತ್ರೆ ಸತ್ಯ ಹರಿಶ್ಚಂದ್ರನ ಚರಿತ್ರೆ ಓದಿದ್ದೇನೆ. ನಮ್ಮ ಸ್ನೇಹಿತರೊಬ್ಬರು ಜಾನ್ಸಿ ರಾಣಿ ಕಿತ್ತೂರು ಚೆನ್ನಮ್ಮನ ಬಗ್ಗೆ ಹೇಳಿದರು. ಮತ್ತೆ ರಾಮ ಮೋಹನ ರಾವ್, ಬಾಲ ಗಂಗಾಧರ್ ತಿಲಕ್ ರವರ ಚರಿತ್ರೆಯನ್ನು ಓದಿದ್ದೇವೆ. ಮಹಾತ್ಮ ಗಾಂಧೀಜಿಯವರು ಸಣ್ಣವರು ಇದ್ದಾಗ ಅವರು ಶಿಕ್ಷಣ ಪಡೆದಿದ್ದು ಅವರ ತಾಯಿಯಿಂದ, ಇವತ್ತು ನಾವು ಶಿಕ್ಷಣವನ್ನು ಶಿಕ್ಷಕರಿಂದ ಪಡೆಯಬಹುದು ಆದರೆ ಇವತ್ತು ನಮ್ಮ ಇಂದಿನ ವಿದ್ಯಾಭ್ಯಾಸ ಕ್ರಮ ಒಂದು ಲಂಗುಲಗಾಮು ಇಲ್ಲದೆ ನಡೆಯುತ್ತಿರುವುದಕ್ಕೆ ಕಾರಣವೇನು? ಇವತ್ತಿನ ಪುಸ್ತಕಗಳಲ್ಲಿ ಏನೂ ಇಲ್ಲವೇ ಇಲ್ಲ. ಅದನ್ನು ಓದಿದಂಥ ಹುಡುಗರಿಗೆ ಒಂದು ಅಪ್ಲಿಕೇಷನ್ ಬರೆಯುವುದಕ್ಕೂ ಬರುವುದಿಲ್ಲ. ಅವನು ಬಿ.ಎ. ಪಾಸ್ ಆಗಿರುತ್ತಾನೆ. ಅಂಥವರು ಸಹ ತಂದೆಗೇ ಒಂದು ಅಪ್ಲಿಕೇಷನ್‌ನ್ನು ಕನ್ನಡದಲ್ಲಿ ಬರೆದುಕೊಡು ಎಂದು ಕೇಳುತ್ತಾನೆ. ಆದರೆ ಹಿಂದಿನ ಶಿಕ್ಷಣ ಕ್ರಮ ಹೇಗಿತ್ತು ಎಂದು ನಾವು ನೋಡುವುದಾದರೆ ನಮ್ಮ ಡಾ. ಅಂಬೇಡ್ಕರ್‌ರವರಿಗೆ ಒಂದು ಉತ್ತಮವಾದ ಶಿಕ್ಷಣ ದೊರೆತಿದ್ದರಿಂದ ಅವರು ಭಾರತದ ರಾಜ್ಯಾಂಗ ಘಟನೆಯನ್ನು ಬರೆದಿಡುವುದಕ್ಕೆ ಸಾಧ್ಯವಾಯಿತು. ಅವರು ಪಂಡಿತ ನೆಹರೂರವರನ್ನೂ ಕೇಳಿ ಬರೆಯಲಿಲ್ಲ. ಅವರು ಬಹಳ ದೊಡ್ಡ ಮನುಷ್ಯರು, ಅಂಥ ಒಂದು ಒಳ್ಳೆಯ ವಿದ್ಯಾಭ್ಯಾಸದಿಂದ ಭಾರತದ ರಾಜ್ಯಾಂಗ ಘಟನೆಯನ್ನು ಬರೆದಿಡುವುದಕ್ಕೆ ಸಾಧ್ಯವಾಯಿತು. ಆದರೆ ಇವತ್ತು ನಾವು ಶ್ರೀ ಮಲ್ಲಿಕಾರ್ಜುನ ಸ್ವಾಮಿಯವರನ್ನು ಟೀಕೆ ಮಾಡುವುದರಿಂದ ಈ ಸಮಸ್ಯೆ ಬಗೆಹರಿಯುವುದಿಲ್ಲ ಅಥವಾ ಇವತ್ತು ಸರ್ಕಾರದವರನ್ನು ದೂರುವುದರಿಂದ ನಮ್ಮ ಸಮಸ್ಯೆ ಬಗೆಹರಿಯುವುದಿಲ್ಲ ಹಿಂದೆ ಬ್ರಿಟೀಷರು ಇದ್ದ ಕಾಲದಲ್ಲಿ ಅವರು ಒಬ್ಬ ಕಾರಕೂನನನ್ನು ತಯ್ಯಾರು ಮಾಡುವುದಕ್ಕಾಗಿ ಒಂದು ವಿದ್ಯಾಭ್ಯಾಸ ಕ್ರಮವನ್ನು ಪ್ರಾರಂಭ ಮಾಡಿದರು ಅದು ಸರಿಯಾದ ಕ್ರಮವಲ್ಲ. ಇವತ್ತು ನಮ್ಮ

ಹುಡುಗರಿಗೆ ಒಳ್ಳೆಯ ವಿದ್ಯಾಭ್ಯಾಸ ಕ್ರಮವನ್ನು ಕೊಡುವುದಕ್ಕಾಗಿ ನೀವು ಎಷ್ಟು ಬೇಕಾದರೂ ಟ್ಯಾಕ್ಸ್ ಹಾಕಿ ನಾವು ಬೇಡವೆಂದು ಹೇಳುವುದಿಲ್ಲ ಮಕ್ಕಳಿಗೆ ಒಂದು ಒಳ್ಳೆಯ ವಿದ್ಯೆಯನ್ನು ಕೊಡುವುದಕ್ಕಾಗಿ ತಾವು ಎಂಥಾ ಕಾರ್ಯಕ್ರಮವನ್ನಾದರೂ ತೆಗೆದುಕೊಳ್ಳಿ. ಅದಕ್ಕೆ ನಮ್ಮ ಸಂಪೂರ್ಣ ಬೆಂಬಲವಿದೆ. ನಾನು ಇಡೀ ಭಾರತ ದೇಶವನ್ನೆಲ್ಲಾ ಸುತ್ತಾಡಿ ನೋಡಿದ್ದೇನೆ. ಮಾರವಾಡಿಗಳ ಒಬ್ಬರ ಹೆಸರೂ ಇವತ್ತು ಎಂಪ್ಲಾಯ್‌ಮೆಂಟ್ ಎಕ್ಸ್‌ಚೇಂಜ್‌ನಲ್ಲಿ ಇರುವುದಿಲ್ಲ. ಅದಕ್ಕೆ ಕಾರಣ ಅವರಲ್ಲಿ ದುಡಿದು ತಿನ್ನತಕ್ಕಂಥ ಒಂದು ಯೋಗ್ಯತೆ ಇದೆ. ಇವತ್ತು ಒಂದು ಹೊತ್ತಿಗೆ ಊಟ ಸಿಕ್ಕಿಲ್ಲಿ ಏನಾದರೂ ಕೆಲಸ ಮಾಡೋಣ ರಾತ್ರಿಯ ಊಟ ಹೇಗೋ ಆಗುತ್ತದೆಂದು ಅವರು ಕಷ್ಟಪಟ್ಟು ಒಂದು ಕೆಲಸವನ್ನು ನಿಷ್ಠೆಯಿಂದ ಮಾಡಿ, ಸ್ವತಃ ಉದ್ಯೋಗವನ್ನು ಹುಡುಕಿಕೊಂಡು ಮಾಡುತ್ತಾರೆ. ಅವರಲ್ಲಿ ಒಂದು ಅಂಥ ಉತ್ತಮ ವಿದ್ಯೆ ಇರುವುದರಿಂದ ಆ ರೀತಿ ಮಾಡಲು ಸಾಧ್ಯತೆ ಇದೆ. ಈಗ ಒಬ್ಬ ಎಸ್.ಎಲ್.ಸಿ.ಯಾದರೆ ಸಾಕು ಅವನಿಗೆ ಹೆಣ್ಣು ಕೊಡುತ್ತಾರೆ. ಹಣ ಕೊಡುತ್ತಾರೆ ಆದರಿಂದ ಅವನ ಜೀವನ ಹೇಗೋ ನಡೆಯುತ್ತದೆ, ನಾನು ಮಾತನಾಡುವಾಗ ನಮ್ಮ ವಿಜಾಪುರದ ಬಗ್ಗೆ ಮಾತ್ರ ಮಾತನಾಡಲು ಇಚ್ಛೆ ಪಡುತ್ತೇನೆ. ನಮ್ಮಲ್ಲಿ ಏನಾಗಿದೆಯೆಂದರೆ ಅತ್ಯಂತ ಬಡತನವಿರುವುದರಿಂದ, ಅವರಿಗೆ ಸರಿಯಾದ ವಿದ್ಯಾಭ್ಯಾಸದ ಸೌಕರ್ಯವಿರುವುದಿಲ್ಲ. ಅವರಿಗೆ ಪ್ರತಿ ದಿವಸವೂ ದೂರದ ಊರಿನಿಂದ ಬಸ್‌ನಲ್ಲಿ ಊಟ ಬರಬೇಕಾಗುತ್ತದೆ. ಮತ್ತೆ ಅವರಿಗೆ ಸರಿಯಾಗಿ ಪುಸ್ತಕಗಳು ದೊರೆಯುವುದಿಲ್ಲ. ಅದು ದೊರೆತರೂ 7–8 ಹುಡುಗರು ಸೇರಿ ಓದಬೇಕಾಗುತ್ತದೆ. ಹೇಗೋ ಎಸ್.ಎಸ್.ಎಲ್.ಸಿ. ಪಾಸ್ ಮಾಡುತ್ತಾರೆ. ನಮಲ್ಲಿ 35 ಪರ್ಸೆಂಟ್ ಅದು ಮಿನಿಮಂಗಿಂತ ಕಡಿಮೆ ಸಂಖ್ಯೆಯಲ್ಲಿ ಪಾಸಾಗುತ್ತಾರೆ. ಪಾಸಾದ ನಂತರ ಕೆಲವರಿಗೆ ಇಂಟರ್‌ವ್ಯೂ ಬರುತ್ತದೆ. ಅದು ಎಲ್ಲರಿಗೂ ಬರುವುದಿಲ್ಲ. ಕೆಲಸ ಸಿಗುವ ಮಾತಂತೂ ಬೇರೆ. ಆದುದರಿಂದ ಅವರಿಗೆ ಸ್ವಲ್ಪ ರಿಯಾಯಿತಿಯನ್ನು ತೋರಿಸಬೇಕೆಂದು ತಮ್ಮಲ್ಲಿ ಕೇಳಿಕೊಳ್ಳುತ್ತೇನೆ. ಇನ್ನೂ ಹರಿಜನರ ಬಗ್ಗೆ ನನಗೆ ಪ್ರೀತಿ ವಿಶ್ವಾಸವಿದೆ. ಆದರೆ ಒಂದು ವಿಷಯದಲ್ಲಿ ಮಾತ್ರ ನಾನು ವಿರುದ್ಧವಾಗಿ ಮಾತನಾಡಬೇಕಾಗಿದೆ. ನಾನು ಮಹಾತ್ಮಾ ಗಾಂಧೀಜಿಯವರೊಡನೆ ಓಡಾಡಿರುವುದರಿಂದ ಅವರು ಹೇಳಿರತಕ್ಕಂಥ ಮಾತುಕತೆಗಳು ನನಗೆ ನೆನಪಿದೆ. ಇವತ್ತು ನೀವು ಬರೀ ಹರಿಜನರ 18 ಪರ್ಸೆಂಟ್ ರಿಜರ್ವೇಷನ್ ಕೊಡಬೇಕು ಎನ್ನುತಕ್ಕಂಥ ದೃಷ್ಟಿಯಿಂದ ಯೋಗ್ಯರಾದವರನ್ನು ಶಿಕ್ಷರನ್ನಾಗಿ ನೇಮಿಸಿ ಎಂದು ಹೇಳುತ್ತೇನೆ. ನಮ್ಮ ಸ್ನೇಹಿತರೊಬ್ಬರು ಸೈನಿಕ ಶಿಕ್ಷಣ ಶಾಲೆ ಬಿಜಾಪುರದಲ್ಲಿ ಇರುವಂತೆ ಕೂರ್ಗ್‌ನಲ್ಲಿ ಒಂದು ಇರುವುದು ಒಳ್ಳೆಯದೆಂದು ಹೇಳಿದರು. ಅದರ ಬಗ್ಗೆ ನಾನು ಹೆಚ್ಚು ಹೇಳುವುದಕ್ಕೆ ಹೋಗುವುದಿಲ್ಲ. ಆದರೆ ಇವತ್ತು ಬ್ರಾಹ್ಮಣರ ಬಗ್ಗೆ ಹೇಳುತ್ತಿಲ್ಲ. ಜಾತಿ ಆಧಾರದ ಮೇಲೆ ಶಿಕ್ಷಕರನ್ನು ನೇಮಿಸದೆ ಯೋಗ್ಯತೆಯ ಮೇಲೆ ಯಾರು ಅಂಥ ಯೋಗ್ಯರು ಇದ್ದಾರೆ, ಅಂಥವರಿಗೆ ಇವತ್ತು ನಿಮ್ಮ ಡಿಪಾರ್ಟ್‌ಮೆಂಟಿನಲ್ಲಿ ರಿಜರ್ವೇಷನ್ ಇಡಿರಿ ಎನ್ನತಕ್ಕಂಥದ್ದನ್ನು ಸ್ಪಷ್ಟವಾಗಿ ಹೇಳುತ್ತಿದ್ದೇನೆ. ಶಿಕ್ಷಕರಿಗೆ ಪ್ರಾಪಂಚಿಕ ಸಮಸ್ಯೆ ಇರಬಾರದು. ಅವನ ಹೆಂಡರ ಮಕ್ಕಳಿಗೆ ತೊಂದರೆ ಇರದಿದ್ದರೆ ಮಾತ್ರ ಮಕ್ಕಳಿಗೆ ಸರಿಯಾದ ವಿದ್ಯಾಭ್ಯಾಸವನ್ನು ಕೊಡಲು ಸಾಧ್ಯ. ಶಿಕ್ಷಕರ ಕಲ್ಯಾಣದ ಬಗ್ಗೆ ತಾವು ಸೂಕ್ತಗಮನವನ್ನು ತೆಗೆದುಕೊಳ್ಳಬೇಕು. ತಾವು

ನನಗೆ ಇದರ ಬಗ್ಗೆ ಹೆಚ್ಚು ಮಾತನಾಡಲು ಅವಕಾಶ ಕೊಡಬೇಕು ನಾನು ಈ ಸಭೆಗೆ ಸೀನಿಯರ್‌ಮೋಸ್ಟ್ ಮೆಂಬರ್ ಆದುದರಿಂದ ಎಲ್ಲರಿಗೂ 20 ನಿಮಿಷ ಕೊಟ್ಟರೆ ನನಗೆ 43 ನಿಮಿಷಗಳ ಕಾಲ ಕೊಡಬೇಕೆಂದು ಕೇಳಿಕೊಳ್ಳುತ್ತೇನೆ. ಏತಕ್ಕೆಂದರೆ ಈ ವಿದ್ಯಾಭ್ಯಾಸದ ಡಿಮ್ಯಾಂಡ್ ಬಹಳ ಮುಖ್ಯವಾದಂಥ ಬೇಡಿಕೆಯಾಗಿದೆ ಇದರ ಬಗ್ಗೆ ನನಗೆ ಇನ್ನು ಸ್ವಲ್ಪ ಹೊತ್ತು ಮಾತನಾಡಲು ಅವಕಾಶ ಕೊಡಬೇಕೆಂದು ಮಾನ್ಯ ಅಧ್ಯಕ್ಷರಲ್ಲಿ ಕೇಳಿಕೊಳ್ಳುತ್ತೇನೆ. ಇವತ್ತು ವಿದ್ಯಾಭ್ಯಾಸವನ್ನು ಸರಿಪಡಿಸುವುದು ಮಾನ್ಯ ಮಲ್ಲಿಕಾರ್ಜುನ ಸ್ವಾಮಿಯವರೊಬ್ಬರಿಂದಲೇ ಸಾಧ್ಯವಿಲ್ಲ ಅದು ಕ್ಯಾಬಿನೆಟ್‌ನಲ್ಲಿ ಇರತಕ್ಕಂಥ ಎಲ್ಲ ಎಲ್ಲಾ ಮಂತ್ರಿಗಳ ಜವಾಬ್ದಾರಿಯಾಗಿದೆ. ಇವತ್ತು ನೀವು ಬೇಕಾದರೆ ಸೇತುವೆಗಳನ್ನು ಕಟ್ಟಿಸುವುದನ್ನಾದರೂ ಬೇಕಾದರೆ ನಿಲ್ಲಿಸಿ ಒಳ್ಳೆಯ ವಿದ್ಯಾಭ್ಯಾಸವನ್ನು ಒದಗಿಸಲು ಹೆಚ್ಚು ಹಣವನ್ನು ವಿನಿಯೋಗಿಸುವುದಾದರೆ ನಮ್ಮ ಅಡ್ಡಿ ಏನೂ ಇಲ್ಲವೆಂದು ಸ್ಪಷ್ಟವಾಗಿ ಹೇಳುತ್ತೇನೆ.

ಇವತ್ತು ಮಾನ್ಯ ಕಾಗೋಡು ತಿಮ್ಮಪ್ಪನವರು ಶ್ರೀ ಮಲ್ಲಿಕಾರ್ಜುನ ಸ್ವಾಮಿಯಂಥವರು ಹಾಗೂ ಶ್ರೀ ಚೆನ್ನಬಸಪ್ಪನವರಂಥವರಿಗೆ ಒಳ್ಳೆಯ ವಿದ್ಯಾ ಸಿಕ್ಕಿರುವುದರಿಂದ ನೀವು ಇಲ್ಲಿ ಬಂದು ಕುಳಿತುಕೊಂಡು ಚನ್ನಾಗಿ ಮಾತನಾಡುತ್ತಿದ್ದೀರಿ ಒಳ್ಳೆಯ ಸ್ಥಾನಮಾನದಲ್ಲಿ ಇದ್ದೀರಿ ಇಲ್ಲದಿದ್ದರೆ ಸಾಧ್ಯವಾಗುತ್ತಿತ್ತೋ ಎಂದು ತಾವು ಆಲೋಚನೆ ಮಾಡಬೇಕು ನಾನು ಹೇಳುವುದೇನೆಂದರೆ ಬಿ.ಎ., ಎಂ.ಎ.ವರೆಗೆ ಕಲಿತವರಿಗೆ ಶಿಕ್ಷಕರಿಗೆ ಒಳ್ಳೆ ಶಿಕ್ಷಣವನ್ನು ಕೊಟ್ಟು ಅವರನ್ನು ಪ್ರೈಮರಿ ಸ್ಕೂಲ ಟೀಚರ್ಸ್‌ನ್ನಾಗಿ ನೇಮಕ ಮಾಡಬೇಕೆಂದು ನಾನು ತಮ್ಮಲ್ಲಿ ಕಳಕಳಿಯಿಂದ ಕೇಳಿಕೊಳ್ಳುತ್ತೇನೆ. ಇನ್ನು ಹೆಚ್ಚು ವಿಷಯವನ್ನು ನಾನು ಈ ಬೇಡಿಕೆಯ ಮೇಲೆ ಮಾತನಾಡಬೇಕೆಂದು ಇದ್ದೆ ಆದರೆ ಅಧ್ಯಕ್ಷರವರು ಬೆಲ್ ಬಾರಿಸುತ್ತಲೇ ಇರುವುದರಿಂದ ಇನ್ನು ಹೆಚ್ಚಿನ ಕಾಲಾವಕಾಶವನ್ನು ತೆಗೆದುಕೊಳ್ಳದೇ ಅಧ್ಯಕ್ಷರಿಗೆ ವಂದಿಸಿ ನನ್ನ ಮಾತನ್ನು ಮುಗಿಸುತ್ತೇನೆ.

## ನೀರಾವರಿ ಮುಖ್ಯ ಯೋಜನೆಗಳ ಮೇಲಿನ ಚರ್ಚೆ

23ನೇ ಮಾರ್ಚ್ 1976

**ಶ್ರೀ ಎಸ್.ವೈ. ಪಾಟೀಲ**–ಮಾನ್ಯ ಸಭಾಧ್ಯಕ್ಷರೇ ಇಲ್ಲಿ ನಾವುಗಳು ಔಪಚಾರಿಕವಾಗಿ ಮಾತನಾಡುವುದರಲ್ಲಿ ಯಾವ ಅರ್ಥವೂ ಇಲ್ಲ. ನಾನು ಮಾನ್ಯ ಮಂತ್ರಿಗಳು ಮಂಡನೆ ಮಾಡಿದಂಥ ಬೇಡಿಕೆಯನ್ನು ಏಕೆ ವಿರೋಧ ಮಾಡುತ್ತೇನೆ ಎನ್ನತಕ್ಕದ್ದಕ್ಕೆ ಈ ಮಾತನ್ನು ಹೇಳುತ್ತಿದ್ದೇನೆ. ವಿರೋಧ ಪಾರ್ಟಿಯ ಮನುಷ್ಯ, ನಾನು ವಿರೋಧ ಮಾಡುವುದು. ಆ ಕಡೆಯ ಪಾರ್ಟಿಯ ಜನರು ಅದನ್ನು ಸಮರ್ಥನೆ ಮಾಡುವುದು, ಇದು ಒಂದು ರೂಢಿಯಾದಂಥ ರೀತಿಯಲ್ಲಿ ಮಾತನಾಡುವುದು ಆಗಿದೆ. ನಮ್ಮ ಕರ್ನಾಟಕ ರಾಜ್ಯದಲ್ಲಿ ಸುಮಾರು 10 ಮೇಜರ್ ಪ್ರಾಜೆಕ್ಟಗಳು ಇವೆ. ನಾವು ನಿಮ್ಮನ್ನು ಈಗ ಕೇಳುವುದಕ್ಕಿಂತ ಯಾರು ಆಡಳಿತವನ್ನು ನಡೆಸುತ್ತೀರೋ ಅವರು ಸ್ವಲ್ಪ ತಮ್ಮ ಆತ್ಮವನ್ನು ಮುಟ್ಟಿಕೊಂಡು ನಮಗೆ ಉತ್ತರ ಕೊಟ್ಟರೆ ಅದು ಸ್ವಲ್ಪ ಶೋಭಾಯಮಾನವಾಗುತ್ತದೆ

ಈ ರೀತಿಯಾಗಿ ತಾವು ವಿಚಾರ ಮಾಡುವುದು ಒಳ್ಳೆಯದು. ಏಕೆಂದರೆ ಒಬ್ಬನಿಗೆ 10 ಮಕ್ಕಳು ಇದ್ದು, ಒಬ್ಬ ಮಗನದು ಮಾತ್ರ ಲಗ್ನ ಮಾಡದೆ ಇದ್ದರೆ, ಅವನು ಸ್ಮಶಾನಕ್ಕೆ ಹೋಗಬೇಕೆ? ಒಂದೇ ಕಡೆ ಇದ್ದು ಎಲ್ಲರಿಗೂ ಪ್ರಮೋಷನ್ ಆದಾಗ ಒಬ್ಬನಿಗೆ ಪ್ರಮೋಷನ್ ಕೊಡದಿದ್ದರೂ ಹೋಗಲಿ, ಅವನನ್ನು ಸಸ್ಪೆಂಡ್ ಮಾಡಿದರೆ ಹೇಗೆ? ಈ ರೀತಿಯಾಗಿ ಘಟಪ್ರಭಾ ಮತ್ತು ಮಲಪ್ರಭಾ ಹಾರಂಗಿ ಹೇಮಾವತಿ ಯೋಜನೆಗಳು ಎಲ್ಲಾ ಇರಲಿ. ಆದರೆ ಬಿಜಾಪುರ ಜಿಲ್ಲೆಯನ್ನು ದುಷ್ಕಾಲ ಬಿದ್ದಂಥಾದ್ದು ಎಂದು ತಿಳಿದುಕೊಂಡು ಆಡಳಿತ ನಡೆಸುವವರು ನಮ್ಮ ಜಿಲ್ಲೆಯಲ್ಲಿರುವ ಅಪ್ಪರ್ ಕೃಷ್ಣ ಯೋಜನೆಯನ್ನು ಕಾರ್ಯಗತಗೊಳಿಸಬೇಕು. ನಮಗೆ ಆಡಳಿತದಲ್ಲಿ ಯಾರೇ ಮುಖ್ಯ ಮಂತ್ರಿಗಳು ಇರಲಿ. ಸ್ಪೀಕರ್ ಯಾರೇ ಇರಲಿ, ಯಾವ ತರಹದ ಹೂವಾದರೂ ಇರಲಿ ನಮಗೆ ನಾತ ಆದರೆ ಸಾಕು. ಮಾನ್ಯ ಸ್ನೇಹಿತರನೇಕರು ಮಾತನಾಡುತ್ತಾ, ಕೆಲವು ವರ್ಗದವರಿಂದ ಕೆಲವು ವರ್ಗಗಳ ಶೋಷಣೆಯಾಗಿದೆ ಎಂದು ಹೇಳಿದರು. ಈ ರೀತಿಯಾಗಿ ಅವರು ಕೆಲವರ ಮೇಲೆ ಡೆಫಿನೇಟ್ ಚಾರ್ಜಸ್ ಮಾಡಿದರು. ಬ್ರಾಹ್ಮಣ ಸಮಾಜದಲ್ಲಿಯೂ ಸಹ ಬಹಳ ಬಡವರು ಇದ್ದಾರೆ. ಲಿಂಗಾಯತ ಸಮಾಜದಲ್ಲಿ ಒಂದು ಸೀರೆಯನ್ನು ತಂದು, ಹದಿನೈದು ವರ್ಷದವರೂ ಇನ್ನೊಂದ ಸೀರೆ ತರಲಿಕಾ [illegible] ದುರ್ದೈವಿಗಳು ಇದ್ದಾರೆ. ಹಿಂದಿನ ಘಟನೆಗಳಿಂದ ಯಾರಿಗೆ ಅನುಕೂಲವಾಗಿದೆ? ಯಾರಿಗ ಅನುಕೂಲವಾಗಿದೆಯೋ ಅವರು ವಿದ್ಯಾವಂತರಾಗಿದ್ದಾರೆ. ಅವರು ಎಂ.ಎಲ್.ಎ ಆಗಿದ್ದಾರೆ. ಆಗ ಮಾನ್ಯ ದೇವರಾಜ ಅರಸ್ ಅವರು ಎಷ್ಟೇ ಪ್ರಯತ್ನ ಮಾಡಿದರೂ ಅವರು ಕ್ಯಾಬಿನೆಟ್ ಮಂತ್ರಿಗಳಾಗಿ ಬರುವುದಕ್ಕೆ ಸಾಧ್ಯವಾಗಲಿಲ್ಲ ಯಾರು ಶೋಷಣೆ ಮಾಡಿದ್ದಾರೆ ಎನ್ನುವುದನ್ನು ಮಾನ್ಯ ಸದಸ್ಯರು ಸ್ಪಷ್ಟವಾಗಿ ಹೇಳಬೇಕು ನಮ್ಮ ಬಿಜಾಪುರ ಜಿಲ್ಲೆಯ ಉತ್ತರ ಭಾಗದಲ್ಲಿ ನಮ್ಮ ಭಾಗದ ಜನರಿಗೆ ಸಮಗ್ರ ಜನತೆಯಿಂದ ಶೋಷಿಸಲ್ಪಟ್ಟಂಥವರ್ಗವಾಗಿದೆ. ಇವತ್ತು ಮೇಜರ್ ಪ್ರಾಜೆಕ್ಟಗಳಲ್ಲಿ ಘಟಪ್ರಭ ಮಲಪ್ರಭ ಕಬಿನ ತುಂಗಭದ್ರ ಇವೆಲ್ಲಾ ಮುಗಿಯುವ ಮುಟ್ಟಕ್ಕೆ ಬಂದಿದೆ ಆದರೆ ನಮ್ಮ ಯೋಜನೆ ಹಿಂದೆ 150 ಕೋಟಿ ರೂಪಾಯಿಗಳಿಗೆ ಎಸ್ಟಿಮೇಟ್ ಆಗಿದ್ದು ಈಗ ಅದು 300 ಕೋಟಿ ರೂಪಾಯಿಯವರೆಗೆ ಹೋಗಿದೆ. ಇಲ್ಲದೇ ಹೋದರೆ ನಾನು ಸರ್ಕಾರಕ್ಕೆ ಮತ್ತೆ ಮತ್ತೆ ಕೇಳಿಕೊಳ್ಳಬೇಕಾಗುತ್ತದೆ ಇದನ್ನು ನಾನು ಚಾರ್ಜ ಮಾಡುತ್ತೇನೆಂದಾದರೂ ತಿಳಿಯಿರಿ ಅಥವಾ ಏನಾದರೂ ತಿಳಿಯಿರಿ ಮಾನ್ಯ ಮುಖ್ಯಮಂತ್ರಿಗಳು ಹೇಳಬಹುದು. ಮಾನ್ಯ ವೀರೇಂದ್ರ ಪಾಟೀಲರು ನಿಮಗೆ ಏನು ಮಾಡಿದರು ಮುಂಬೈ ಸರ್ಕಾರದವರು ಏನು ಮಾಡಿದರು ಎಂದು ಮುಂಬೈ ಸರ್ಕಾರದವರು ಇದ್ದಾಗ ನಮಗೆ ಮಲತಾಯಿ ಧೋರಣೆಯಿಂದ ನೋಡುತ್ತಿದ್ದರು. ಈಗ ನಾನು ಕರ್ನಾಟಕಕ್ಕೆ ಬಂದಮೇಲೆ ಎಲ್ಲಾ ಅನುಕೂಲಗಳು ನಮಗೆ ಬರಬೇಕು. ಆದರೂ ಇವತ್ತು ನಮಗೆ ಹೆಚ್ಚಿನ ಅನುಕೂಲಗಳು ಆಗಿಲ್ಲ ಹೆಚ್ಚಿನ ಅನುಕೂಲ ಆದರೆ ನಮ್ಮ ಜನರ ಕಲ್ಯಾಣವಾಗುತ್ತದೆ. ಈ ದೃಷ್ಟಿಯಿಂದ ನಾವು ನಿಮ್ಮನ್ನು ನಂಬಿ. ಪ್ರೀತಿಯಿಂದ ನೋಡುತ್ತೀರೇದು ತಿಳಿದು ಬಂದಿದ್ದೇವೆ. ನಮ್ಮ ಮುಖ್ಯಮಂತ್ರಿಗಳನ್ನು ಯಾರು ಅಲುಗಾಡಿಸುವುದಕ್ಕೆ ಆಗುವುದಿಲ್ಲ ಎನ್ನುವ ಮಾತು ಕೇಳಿ ಬರುತ್ತಿದೆ. ಇವರು ಕೇಂದ್ರ ಸರ್ಕಾರದವರೊಂದಿಗೆ ವ್ಯವಹರಿಸಿ ಒತ್ತಾಯವನ್ನು ತಂದು ನಮಗ ಮತ್ತು ನಮ್ಮ ಜಿಲ್ಲೆಯಲ್ಲಿ ಬೇಕಾಗಿರುವ ನೀರಿನ ಸೌಕರ್ಯವನ್ನು ಅಪ್ಪರ್ ಕೃಷ್ಣ

ಪ್ರಾಜೆಕ್ಟಿನಿಂದ ಮಾಡಬೇಕೆಂದು ನಾನು ತಮ್ಮಲ್ಲಿ ಪ್ರಾರ್ಥನೆ ಮಾಡಿಕೊಳ್ಳುತ್ತೇನೆ. ಎಲ್ಲಿಗೆ ಹೋದರೂ ನೀರು ನೀರೆ, ನೀವು ಕೇಂದ್ರ ಸರ್ಕಾರಕ್ಕೆ ಹೋಗ್ರಿ, ವರ್ಲ್ಡ್ ಗವರ್ನಮೆಂಟಿಗೆ ಹೋಗ್ರಿ ನೀರೇ ಶೃಂಗಾರ, ಆದ್ದರಿಂದ ತಾವು ಈ ನೀರಾವರಿ ಯೋಜನೆಯಲ್ಲಿ ಪರಿಣತೆಯನ್ನು ಪಡೆದಿರತಕ್ಕ ಶ್ರೀ ಬಾಳೇಕುಂದ್ರಿಯವರು ನಮ್ಮ ಜಿಲ್ಲೆ ಬಗ್ಗೆ ತಿಳಿದಂಥವರು, ಅವರನ್ನು ಈ ಕೆಲಸಕ್ಕೆ ನೇಮಿಸಿದರೆ ನಮ್ಮ ಕೆಲಸಕಾರ್ಯಗಳು ಸರಿಯಾಗಿ ಆಗುತ್ತವೆ. ಅವರು ಹಿಂದೆ ನಮ್ಮಲ್ಲಿದ್ದಾಗ ಈ ಪ್ರಾಜೆಕ್ಟಿನ ಎಲ್ಲಾ ಮಾಹಿತಿಯನ್ನು ಅವರು ತಿಳಿಸಿದ್ದಾರೆ. ನಮ್ಮ ಏರಿಯಾ ಸಮಗ್ರ ರೀತಿಯಿಂದಲೂ ಶೋಷಣೆಗೆ ಒಳಗಾಗಿದೆ. ಎಲ್ಲರಿಗೂ ಊಟ ಹಾಕಿ, ನಾವು ಊಟಕ್ಕೆ ಬಂದಾಗ ಊಟಕ್ಕೆ ಏನು ಇದೆಯೆಂದು ಕೇಳಿದರೆ ಹೇಗೆ? ನಾವು ಹಸಿದು ಕೊಂಡಿದ್ದೇವೆ ನಮಗೂ ಊಟ ಹಾಕಬೇಕು. ಎಂದು ನಾನು ಮುಖ್ಯಮಂತ್ರಿಗಳಲ್ಲಿ ವಿನಂತಿ ಮಾಡಿಕೊಳ್ಳುತ್ತೇನೆ. ತಾವು ಅಧ್ಯಕ್ಷರು ಇದ್ದೀರಿ. ನಮ್ಮ ಭಾಗಕ್ಕೂ 7–8 ಅಂಶದ ಕಾರ್ಯಕ್ರಮವನ್ನು ತೆಗೆದುಕೊಂಡು ಮೇಜರ್ ಪ್ರಾಜೆಕ್ಟಗಳನ್ನು ಮುಗಿಸಬೇಕು ಎಂದು ನಾನು ಕೇಳಿಕೊಳ್ಳುತ್ತೇನೆ. ಇಲ್ಲಿ ವಿದ್ಯುಚ್ಛಕ್ತಿ ಮಂತ್ರಿಗಳು ಇದ್ದಾರೆ. ಅವರಲ್ಲಿಯೂ ನಾನು ಕೇಳಿಕೊಳ್ಳುತ್ತೇನೆ. ನಮ್ಮ ಪ್ರಾಜೆಕ್ಟಗಳಿಂದ ಹೆಚ್ಚಿನ ಉಪಯೋಗವನ್ನು ಮಾಡಿಕೊಳ್ಳಬೇಕು, ಇದು ಮುಖ್ಯವಾದಂಥ ಸ್ಕೀಂ, ಇದನ್ನು ತಾವು ಅರ್ಥಮಾಡಿಕೊಂಡು ನಮ್ಮ ಅಪ್ಪರ ಕೃಷ್ಣಾ ಪ್ರಾಜೆಕ್ಟನ್ನು ಮುಗಿಸಿ, ಇದರಿಂದ ವಿದ್ಯುಚ್ಛಕ್ತಿಯನ್ನು ಮತ್ತು ನೀರಾವರಿ ಯೋಜನೆಯ ಲಾಭವನ್ನು ಪಡೆದುಕೊಳ್ಳಬೇಕೆಂದು ತಮ್ಮಲ್ಲಿ ಕೇಳಿಕೊಳ್ಳುತ್ತೇನೆ. ಈ ಒಂದು ಯೋಜನೆಯಿಂದ ನಮ್ಮ ಜಿಲ್ಲೆಯಲ್ಲಿ ಹೆಚ್ಚಿನ ಅನುಕೂಲಗುತ್ತದೆ, ಇದನ್ನು ತಾವು ಮಾಡಬೇಕು ಎಂದು ನಾನು ಕೇಳಿಕೊಳ್ಳುತ್ತೇನೆ.

ನಾನು 10 ನಿಮಿಷಕ್ಕೆ ಹೆಚ್ಚಿಗೆ ತೆಗೆದುಕೊಳ್ಳುವುದಿಲ್ಲ I request the Chief Minster to get money from the Centrel Government as well as from the world Bank and go ahead with the work. ಇದು ವರ್ಲ್ಡ್ ಗೌರ್ನ್‌ಮೆಂಟ್ ಎಂದು ನನ್ನ ಬಾಯಿಂದ ಬಂದಿದೆ. ಈ ಬಾಯಿ ಸಮಾನ್ಯವಾದುದಲ್ಲ ನಾನು ಹೇಳಿದ ಮಾತು ಒಂದಲ್ಲೊಂದು ಕಾಲಕ್ಕೆ ನಿಜವಾಗುತ್ತದೆ. ಒಟ್ಟಿನಲ್ಲಿ ನೀವು ಎಲ್ಲಿಂದಲಾದರೂ ತೆಗೆದುಕೊಂಡು ಬನ್ನಿ. ನಮಗೆ ಕೆಲಸ ಆಗುವುದು ಮುಖ್ಯ. ತಾವು ಬಹಿರಂಗವಾಗಿ ಗಂಟೆಯನ್ನು ಹೊಡೆದರೂ ಅಂತರಂಗದಲ್ಲಿ ಗಂಟೆಯನ್ನು ಹೊಡೆದಿಲ್ಲವೆಂದು ನಾನು ತಿಳಿದುಕೊಂಡು ಇಷ್ಟು ಮಾತುಗಳನ್ನಾಡಲು ಅವಕಾಶವನ್ನು ಕಲ್ಪಿಸಿಕೊಟ್ಟ ಮಾನ್ಯ ಅಧ್ಯಕ್ಷರಿಗೆ ವಂದಿಸಿ ನನ್ನ ಮಾತುಗಳನ್ನು ಮುಗಿಸುತ್ತೇನೆ.

## ದಯವಿಟ್ಟು ಸುಳ್ಳು ಹೇಳಬೇಡಿ

13ನೇ ನವೆಂಬರ್ 1976

**ಶ್ರೀ ಎಸ್.ವೈ. ಪಾಟೀಲ** – ಮಾನ್ಯ ಅಧ್ಯಕ್ಷರೇ ನಾನು ಮಾನ್ಯ ರೆವಿನ್ಯೂ ಸಚಿವರನ್ನು, ಒಂದು ಪ್ರಶ್ನೆಯನ್ನು ಕೇಳಲು ಅವಕಾಶಬೇಕು?

**ಉಪಾಧ್ಯಕ್ಷರು** – ದಯಮಾಡಿ ಕುಳಿತುಕೊಳ್ಳಬೇಕು.

**ಶ್ರೀ ಎಸ್.ವೈ. ಪಾಟೀಲ** – ನಿಮ್ಮ ಮಾತನ್ನು ಮನ್ನಿಸುತ್ತೇನೆ. ಆದರೆ ನನಗೆ ಸ್ವಲ್ಪ ಮಾತನಾಡಲು ಪರವಾನಗಿ ಕೊಟ್ಟರೆ ಒಂದು ಪ್ರಶ್ನೆ ಕೇಳಬೇಕು? ತಾವು ನನಗೆ ಅವಕಾಶ ಕೊಡುವುದಿಲ್ಲವೆಂದರೆ ನಮ್ಮ ಪ್ರಶ್ನೆಗೆ ಉತ್ತರ ಸಿಗುವುದಿಲ್ಲ.

**ಉಪಾಧ್ಯಕ್ಷರು** – ದಯಮಾಡಿ ಮಾನ್ಯಸದಸ್ಯರು ಕುಳಿತುಕೊಳ್ಳಬೇಕು.

**ಶ್ರೀ ಎಸ್.ವೈ. ಪಾಟೀಲ** – ನನಗೆ ಮಾತನಾಡಲು ಅವಕಾಶ ಕೊಡದೆ ಹೋದರೆ, ಇನ್ನು ಏತಕ್ಕೆ ಇಲ್ಲಿ ಕೂಡಬೇಕು?

**ಶ್ರೀ ಎಸ್. ಹುಚ್ಚ ಮಾಸ್ತಿಗೌಡ** – ಮಾನ್ಯ ಅಧ್ಯಕ್ಷರೇ ಶ್ರೀಮಾನ್ ಪಾಟೀಲರವರು, ಅವರ ಕ್ಷೇತ್ರದಲ್ಲಿ ಒಂದು ದೊಡ್ಡ ಹಳ್ಳವೆಂದು ಇದೆ ಅದನ್ನು ತೆಗೆದುಕೊಳ್ಳಬೇಕೆಂದು ಹೇಳಿದ್ದರು...

**ಶ್ರೀ ಎಸ್.ವೈ. ಪಾಟೀಲ** – ನಾನು ಹೇಳಿದ್ದು ಅದು ಅಲ್ಲ. ಸಭಾಧ್ಯಕ್ಷರೇ, ಮಾನ್ಯ ಸಚಿವರಲ್ಲಿ ಒಂದು ಪ್ರಾರ್ಥನೆ ಮಾಡುವುದು ಏನೆಂದರೆ ಇದುವರೆಗೂ ನನ್ನ ಕ್ಷೇತ್ರದಲ್ಲಿ ಒಬ್ಬರಿಗಾದರೂ ಕೆಲಸವಿಲ್ಲ. ಹೋದವರ್ಷ ಫೆಬ್ರುವರಿಯಲ್ಲಿ ಮಳೆಬಾರದೆ ಅಭಾವದಿಂದ ಏನೂ ಬೆಳೆ ಆಗಿರಲಿಲ್ಲ. ಯಾವುದೋ ಉದಯ ಎನ್ನುವ ಪೇಪರ್‌ನಲ್ಲಿ ಇದುವರೆಗೆ 30 ಸಾವಿರ ಜನಕ್ಕೆ ಉದ್ಯೋಗ ಕೊಟ್ಟಿದ್ದಾರೆಂದು ಬಂದಿತೆಂದು ಕೇಳಿದ್ದೇನೆ. ಈ ರೀತಿ ಸುಳ್ಳು ವರದಿಯನ್ನು ಏತಕ್ಕೆ ಕೊಡಬೇಕು?

**ಶ್ರೀ ಎಸ್ ಹುಚ್ಚ ಮಾಸ್ತಿಗೌಡ** – ಮಾನ್ಯ ಪಾಟೀಲ ಸಾಹೇಬರೇ ನನ್ನ ವಿನಂತಿ ಏನೆಂದರೆ 10–20 ದಿವಸಗಳ ಮುಂಚೆ ಬರಗಾಲ ಪಟ್ಟಿಯಲ್ಲಿ ಇದನ್ನು ಸೇರಿಸಿರಲಿಲ್ಲ, ಆದರೆ ಸಾಮಾನ್ಯವಾಗಿ ಸಿಂದಗಿ ತಾಲ್ಲೂಕಿನಲ್ಲಿ ಬರಗಾಲ ಬಂದಿದೆಯೆಂದು ಈ ಪಟ್ಟಿಯಲ್ಲಿ ಸೇರಿಸಿದ್ದೇವೆ. ಬಿಜಾಪುರ, ಇಂಡಿ, ಸಿಂದಗಿ ತಾಲ್ಲೂಕುಗಳನ್ನು ಕೂಡಲೇ ಬರಗಾಲ ಪ್ರದೇಶವೆಂದು ಪರಿಗಣಿಸಿ ಅಲ್ಲಿಗೆ ಬೇಕಾದ ಸೌಕರ್ಯಗಳನ್ನು ಕೂಡಲೇ ಒದಗಿಸಬೇಕೆಂದು ನಮ್ಮ ಅಧಿಕಾರಿಗಳಿಗೆ ತಿಳಿಸಿ ಸೂಕ್ತ ಕೆಲಸಕಾರ್ಯಗಳನ್ನು ತೆಗೆದುಕೊಳ್ಳುತ್ತೇವೆಂದು ಹೇಳುತ್ತೇನೆ. ನಮ್ಮ ಮೇಲೆ ಭರವಸೆ ಇಟ್ಟು ಅಲ್ಲಿಗೆ ಹೋಗಿ ಜನರಿಗೆ ತಿಳಿಸಬಹುದು.

**ಶ್ರೀ ಎಸ್.ವೈ. ಪಾಟೀಲ** – ಫಾಲ್ಸ್‌ಸ್ಟೇಟ್‌ಮೆಂಟ್ ಕೊಡುತ್ತಿದ್ದೀರಾ? ನಾನು ಕೇಳುತ್ತೇನೆ. ರಾಜ್ಯದಲ್ಲಿ ಏನು ಫಿಗರ್ಸ್ ಮತ್ತು ಫ್ಯಾಕ್ಟ್ಸ್ ಇದೆ ಅದನ್ನು ಕೊಟ್ಟು ಹೇಳುತ್ತಿದ್ದೀರಿ. ಚೀಫ್ ಮಿನಿಸ್ಟರು

ಹೇಳಿದ್ದಾರೆ. ಆದರೆ ನಮ್ಮನ್ನು ನೋಡಿದರೆ ನಿಮಗೆ ಅಲಕ್ಷ್ಯ ಉಂಟಾಗುತ್ತದೆ. ನಮ್ಮ ತಾಲ್ಲೂಕುಗಳನ್ನು ಯಾವ ಲೆಕ್ಕಕ್ಕೂ ತೆಗೆದುಕೊಂಡಿಲ್ಲ. ಕಾರಣ ಎಲ್ಲಿಯವರೆಗೆ ನಮ್ಮ ತಾಲ್ಲೂಕಿನಲ್ಲಿ ಒಬ್ಬರೂ ಇಲ್ಲದ ಹಾಗೆ ಬೇರೆ ಕಡೆಗೆ ಕೆಲಸ ನೋಡಿಕೊಂಡು ಹೋಗುತ್ತಾರೆ ಅಲ್ಲಿಯವರೆಗ ನಮ್ಮ ಕಡೆಗೆ ಗಮನಕೊಡುವುದಿಲ್ಲವೆಂದು ತಿಳಿದಿದ್ದೇನೆ. 18ನೇ ತಾರೀಖಿಗೆ ಅಸೆಂಬ್ಲಿ ಸೆಕ್ಷನ್ ಮುಗಿದ ಕೂಡಲೇ ಯಾರಾದರೂ ಒಬ್ಬ ಜವಾಬ್ದಾರಿ ಜನರು ಬಂದು, ಹಿಂದೆ ನಡೆದಂತಹ ತಪ್ಪನ್ನು ಸರಿಪಡಿಸಬೇಕು ಎಂದು ಹೇಳುತ್ತೇನೆ.

**ಶ್ರೀ ಎಸ್.ಎಂ. ಕೃಷ್ಣ** – ಮಾನ್ಯ ಪಾಟೀಲರನ್ನು ನಾನು ಕೇಳುವುದು ಇಷ್ಟೇ. ಮಾನ್ಯ ರೆವಿನ್ಯೂ ಮಂತ್ರಿಗಳು ತಮ್ಮ ಕಷ್ಟವನ್ನು ಅರ್ಥಮಾಡಿಕೊಂಡಿದ್ದೇನೆಂದು ಹೇಳಿದ್ದಾರೆ. ಆದ್ದರಿಂದ ನೀವು ಈ ರೀತಿ ಮಾಡುವುದರಿಂದ ಅಲ್ಲಿ ಚಿತ್ತವನ್ನು ಕೊಡಲಿಕ್ಕೆ ಪ್ರಯತ್ನ ಮಾಡುವುದರ ಬದಲು ಹಾಳು ಮಾಡುತ್ತಿದ್ದೀರಿ?

**ಶ್ರೀ ಎನ್. ಹುಚ್ಚಮಾಸ್ತಿಗೌಡ** – ಮಾನ್ಯ ಪಾಟೀಲರು ಈ ರೀತಿ ಮಾತನಾಡಿ ಪರಿಸ್ಥಿತಿಯನ್ನು ಹದಗೆಡಿಸಿದರೂ, ಯಾರೇ ಹದಗೆಡಿಸಿದರೂ ಯಾರ ದಾಕ್ಷಿಣ್ಯಕ್ಕೂ ಒಳಪಡದೆ ಆಗಬೇಕಾದಂತಹ ಸೇವೆ ಮಾಡುವುದಕ್ಕೆ ನಾವು ಹಿಂದೆ ಮುಂದೆ ನೋಡುವುದಿಲ್ಲವೆಂದು ಹೇಳುವುದಕ್ಕೆ ಇಷ್ಟಪಡುತ್ತೇನೆ.

ಯಾವ ಯಾವ ತಾಲ್ಲೂಕುಗಳಲ್ಲಿ ಅಗತ್ಯವಾಗಿ ಏನೇನು ಕೆಲಸ ಆಗಬೇಕೋ ಅವನ್ನೆಲ್ಲಾ ಕೂಡಲೇ ಪರಿಶೀಲನೆ ಮಾಡಿ ಅಲ್ಲಿ ಕೆಲಸಗಳನ್ನು ಕೈಗೊಳ್ಳಬೇಕೆಂದು ಸಂಬಂಧಪಟ್ಟ ಅಧಿಕಾರಿಗಳಿಗೆ ತಿಳಿಸುತ್ತೇನೆಂಬ ಭರವಸೆಯನ್ನು ಮಾನ್ಯ ಸದಸ್ಯರಿಗೆ ಈ ಸಭೆಯಲ್ಲಿ ಕೊಡುವುದಕ್ಕೆ ಇಷ್ಟಪಡುತ್ತೇನೆ.

## ರಾಜ್ಯಪಾಲರ ಭಾಷಣದ ಮೇಲಿನ ಚರ್ಚೆ

1ನೇ ಏಪ್ರಿಲ್ 1977

**ಶ್ರೀ ಎಸ್.ವೈ. ಪಾಟೀಲ** – ಮಾನ್ಯ ಸಭಾಧ್ಯಕ್ಷಿಣಿಯವರೆ, ಈಗ ನಾನು ರಾಜ್ಯಪಾಲರ ಭಾಷಣದ ಮೇಲಿನ ಚರ್ಚೆ ಪ್ರಾರಂಭ ಮಾಡುವುದಕ್ಕೆ ಮುಂಚೆ, ಈ ಪೂರ್ವದಲ್ಲಿ ಮಾನ್ಯ ಬಸವಲಿಂಗಪ್ಪನವರು ಕೆಲವೊಂದು ವಿಷಯಗಳ ಬಗ್ಗೆ ಏನು ಸೂಚನೆ ಮಾಡಿದ್ದಾರೆ ಅದರ ಬಗ್ಗೆ ಕೆಲವು ಮಾತುಗಳನ್ನು ಹೇಳ ಬಯಸುತ್ತೇನೆ. ಈಗಿನ ಮುಖ್ಯಮಂತ್ರಿಗಳು ಹಿಂದುಳಿದ ವರ್ಗದವರಿಗೆ ಬಹಳ ಪ್ರಾತಿನಿಧ್ಯ ಕೊಟ್ಟಿದ್ದಾರೆ ಎಂದು ಹೇಳಿದ್ದಾರೆ. ಆ ರೀತಿ ಪ್ರಾತಿನಿಧ್ಯ ದೊರಕಿರುವುದು ಬಹಳ ಸೂಕ್ತವಾದ ಕಾರ್ಯ ಎಂದು ಹೇಳುತ್ತೇನೆ. ಈ ದೃಷ್ಟಿಯಿಂದ ಹೇಳುವುದಾದರೆ ಡಾ. ಅಂಬೇಡ್ಕರ್‌ರವರು ಯಾವ ಹರಿಜನರ ಮೇಲೆ ಕನಿಕರ ಇಟ್ಟಿದ್ದರೋ, ಅದೇ ಹರಿಜನರಲ್ಲದ ಮಹಾತ್ಮಾ ಗಾಂಧಿಯವರು ಅದಕ್ಕಿಂತ ಕಡಿಮೆ ಅನುಕೂಲ ಇಟ್ಟಿರಲಿಲ್ಲ ಎಂದು ಹೇಳುತ್ತೇನೆ. ನಮ್ಮ ಈಗಿನ ಮಂತ್ರಿಗಳಾದ ಶ್ರೀಮಾನ್ ಕೆ.ಟಿ. ರಾಥೋಡ್‌ರವರು ಹರಿಜನರ ಬಂಧುಗಳು ಲಂಬಾಣಿಗಳ ಮುಖಂಡರಾಗಿದ್ದರೆ, ಅವರನ್ನು ನಾನು ಕೇಳುತ್ತೇನೆ. ಅವರ ಹಿತಸಾಧನೆ ಮಾಡುವವರು ಈವೊತ್ತು ಹಳ್ಳಿಗಳಲ್ಲಿ ಗುಡಿಸಲುಗಳಲ್ಲಿ ವಾಸಮಾಡುವಂಥಾ ಜನರೊಂದಿಗ ಎಷ್ಟು

ಮಂದಿ ವಾಸವಾಗಿದ್ದಾರೆ. ಅವರ ಕಷ್ಟ ಸುಖಗಳ ಬಗ್ಗೆ ವಿಚಾರಿಸಿ ಅವನ್ನು ಬಗೆಹರಿಸತಕ್ಕಂಥವರು ಎಷ್ಟು ಜನಗಳು ಇದ್ದಾರೆ ಎಂದು ಕೇಳುತ್ತೇನೆ. ಇದರಲ್ಲಿ ಎರಡು ಪ್ರಶ್ನೆ ಬರುತ್ತದೆ ಹರಿಜನ ಮುಖಂಡರಾಗಲಿ ಯಾರೇ ಆಗಲಿ ಈ ಪ್ರಶ್ನೆಯನ್ನು ಬಗೆಹರಿಸಬೇಕಾಗುತ್ತದೆ. ಈ ಪ್ರಶ್ನೆಯನ್ನು ಒಂದು ತಾತ್ತ್ವಿಕ ಸಿದ್ಧಾಂತದ ಮೇಲೆ ಬಿಡಿಸಬೇಕಾಗಿದೆ ಉಳ್ಳವರು ಇಲ್ಲದವರು ಎಲ್ಲರೂ ಕೂಡಿಕೊಂಡು ಈ ದೇಶದಲ್ಲಿ ಕೆಲಸ ಮಾಡಿಕೊಂಡು ಬಂದಿರುವುದನ್ನು ನಾವು ನೋಡಿದ್ದೇವೆ ಸಮಾಜದ ಪ್ರಶ್ನೆಯನ್ನು, ಜಾತಿಯ ಪ್ರಶ್ನೆಯ ಮೇಲೆ ಬಗೆಹರಿಸಲು ಸಾಧ್ಯವಿಲ್ಲ. ಈ ಸರ್ಕಾರದವರು ಹಾವನೂರು ಕಮೀಷನ್ ವರದಿ ಪ್ರಕಾರ ಹಿಂದುಳಿದ ವರ್ಗದವರಿಗೆ ದುರ್ಬಲವರ್ಗದವರಿಗೆ ಕೆಲವು ಮೀಸಲಾತಿಗಳನ್ನು ಜಾರಿಗೆ ಕೊಟ್ಟಿದ್ದಾರೆ. ಎಂದು ಹೇಳುತ್ತೀರಿ. ಏನೇ ಆಗಲಿ ದೇಶದಲ್ಲಿ ನಿರುದ್ಯೋಗ ಸಮಸ್ಯೆ, ಇರುವಾಗ ಹಾವನೂರು ಕಮೀಷನ್ ವರದಿ ಪ್ರಕಾರ ಈ ನಿರುದ್ಯೋಗ ಸಮಸ್ಯೆಯನ್ನು ಬಿಡಿಸುವುದಕ್ಕೆ ಬರುವುದಿಲ್ಲ. ದೇಶದಲ್ಲಿ ದೊಡ್ಡ ದೊಡ್ಡ ಕೈಗಾರಿಕೆಗಳ ಕಡೆಗೆ ಗಮನ ಕೊಟ್ಟರೆ ಎಲ್ಲರಿಗೂ ಉದ್ಯೋಗ ಕೊಡುವುದಕ್ಕೆ ಸಾಧ್ಯವಾಗುತ್ತದೆ. ಈ ರೀತಿಯಾಗಿ ನಿರುದ್ಯೋಗ ಸಮಸ್ಯೆಯನ್ನು ಬಿಡಿಸುವುದು ಒಳ್ಳೆಯದು ಎಂದು ಹೇಳುತ್ತೇನೆ.

ಇನ್ನು ಹ್ಯಾಂಡ್‌ಲೂಮ್ ಅಭಿವೃದ್ಧಿ ಬಗ್ಗೆ ಹೇಳುವುದಾದರೆ ಇದು ಒಂದು ತಾತ್ತ್ವಿಕವಾದ ಪ್ರಶ್ನೆ ಇದರಲ್ಲಿ ಜಾತಿ ಪ್ರಶ್ನೆ ಬರುವುದಿಲ್ಲ. ಇದರಲ್ಲಿ ಹರಿಜನ ಮುಸ್ಲಿಂ ಕ್ರಿಶ್ಚಿಯನ್ ಅನ್ನುವ ಪ್ರಶ್ನೆ ಬರುವುದಿಲ್ಲ. ಮಾನ್ಯ ನಿಜಲಿಂಗಪ್ಪನವರೇ ಇರಲಿ ಮತ್ತೊಬ್ಬರೇ ಇರಲಿ ಈ ಪ್ರಶ್ನೆಯನ್ನು ತಾತ್ತ್ವಿಕ ಸಿದ್ಧಾಂತದ ಮೇಲೆ ಬಿಡಿಸಬೇಕೆ ವಿನಾ ಇನ್ನಾವುದರಿಂದಲೂ ಈ ಪ್ರಶ್ನೆಯನ್ನು ಬಿಡಿಸುವುದಕ್ಕೆ ಬರುವುದಿಲ್ಲ. ಮಾನ್ಯ ಕೆ.ಟಿ. ರಾಥೋಡ್‌ರವರು ಲಂಬಾಣಿಗರಾಗಿದ್ದಾರೆ ಇವರು 4 ವರ್ಷದಿಂದಲೂ ಈ ಸರ್ಕಾರದಲ್ಲಿ ಮಂತ್ರಿಗಳಾಗಿದ್ದಾರೆ. ಇವರು 4 ವರ್ಷದಿಂದಲೂ ನಮ್ಮ ಸಿಂದಗಿ ತಾಲ್ಲೂಕಿನಲ್ಲಿರುವ ಹಿಂದುಳಿದ ವರ್ಗದವರಿಗೆ ಏನು ಕೆಲಸ ಮಾಡಿಕೊಟ್ಟಿದ್ದಾರೆ, ಹೇಳಿ. ಮಾನ್ಯ ಜತ್ತಿಯವರ ಸರ್ಕಾರದಲ್ಲಿ ಮಾನ್ಯ ಎನ್. ರಾಚಯ್ಯನವರು ಮಂತ್ರಿಗಳಾಗಿದ್ದರು. ಮಾನ್ಯ ಬಸವಲಿಂಗಪ್ಪನವರು ಉಪಮಂತ್ರಿಗಳಾಗಿದ್ದರು. ಆವಾಗ ಎಡಗೈ ಬಲಗೈ ಎಂದು ಹೇಳಿದ್ದು ನನಗೆ ಜ್ಞಾಪಕ ಇದೆ.

**ಶ್ರೀ ಬಿ. ಬಸವಲಿಂಗಪ್ಪ** – ನಾನು ಹೇಳದೇ ಇದ್ದುದನ್ನು ನನ್ನ ಬಾಯಿಯಲ್ಲಿ ಇಡುತ್ತಿದ್ದೀರಲ್ಲಾ ಅದು ನನಗೆ ಸಲ್ಲದ ಮಾತು. ಹಾಗೆ ಮಾಡಬೇಡಿ ಜಾತಿ ಪ್ರಶ್ನೆ ಹೋಗಬೇಕೆಂಬುದೇ ನನ್ನ ಉದ್ದೇಶ.ಈ ಸದನದಲ್ಲಿ ಎಡಗೈ ಬಲಗೈ ಅನ್ನುವುದನ್ನು ಕೇಳಿ ನನ್ನ ಮನಸ್ಸನ್ನು ಕಡಿಸಬೇಡಿ. ಈ ದೇಶದಲ್ಲಿ ಸಾವಿರಾರು ಜಾತಿಗಳು ಇದೆ. ಜಾತಿಯನ್ನು ತೆಗೆಯಬೇಕೆಂಬ ಅನ್ನುವ ಉದ್ದೇಶದಿಂದಲೇ ನಾನು ಆ ಕೆಲಸವನ್ನು ಪ್ರಾರಂಭ ಮಾಡಿದೆ. ಅದು ಸಾಧ್ಯವಾಗಲಿಲ್ಲ. ಜಾತಿಯನ್ನು ತೆಗೆಯಲಿಕ್ಕೆ ಪ್ರಯತ್ನ ಮಾಡೋಣ ಇದಕ್ಕೆ ಎಷ್ಟು ದಿವಸ ಹಿಡಿಯುತ್ತದೋ ನೋಡೋಣ. ಆದರೆ ನಾನು ಏನು ಮಾಡಬೇಕೆಂದು ಹೇಳುತ್ತೇನೋ ಅದನ್ನೇ ನೀವೂ ಹೇಳುತ್ತೀರಿ. ಆದರೆ ನೀವು ಈ ಕೆಲಸವನ್ನು ಮಾಡುತ್ತೀರೋ ಇಲ್ಲವೋ, ಆದುದರಿಂದ ಆ ಕೆಲಸವನ್ನು ನಮಗೆ ಬಿಡಿರಿ ಎಂದು ಹೇಳುತ್ತೇನೆ.

**ಶ್ರೀ ಎಸ್.ವೈ. ಪಾಟೀಲ** – ಈ ಪ್ರಶ್ನೆ ರಾಷ್ಟ್ರೀಯ ವಿಷಯದಲ್ಲಿ ಬರುವುದಿಲ್ಲ ಜಾತಿ ಪ್ರಶ್ನೆಯಲ್ಲಿ ಬರುವುದಿಲ್ಲ. ಈಗ ಇರತಕ್ಕಂಥಾ ಪ್ರಶ್ನೆ, ಉಳ್ಳವರು, ಇಲ್ಲದವರು, ಅನ್ನುವ ಪ್ರಶ್ನೆಯಲ್ಲಿ ಬರುತ್ತದೆ ಅದನ್ನು ಬಗೆಹರಿಸಬೇಕು.

ಇನ್ನು ಮಾನ್ಯ ರಾಜ್ಯಪಾಲರ ಭಾಷಣದ ಮೇಲೆ ಮಾತನಾಡಲಿಕ್ಕೆ ಇಚ್ಛಿಸುತ್ತೇನೆ. ನಾನು ಈ ಚುನಾವಣೆಯಲ್ಲಿ ಜನರನ್ನು ಸಂದರ್ಶನ ಮಾಡಿಕೊಂಡು ಬಂದಿದ್ದೇನೆ. ನಾನು ಈ ಸದನಕ್ಕೆ ಈವೊತ್ತೇ ಬಂದಿಲ್ಲ ನಾನು ಪ್ರತಿ ಚುನಾವಣೆಯಲ್ಲಿ ಗೆದ್ದು ಬಂದಿದ್ದೇನೆ. ಈವೊತ್ತು, 20 ಅಂಶದ ಕಾರ್ಯಕ್ರಮ ಏನು ಇದೆ ಅದು ರಾಷ್ಟ್ರೀಯ ಪ್ರಶ್ನೆಯಾಗಿದೆ. ಯಾವ 20 ಅಂಶವೇ ಇರಲಿ ಅದು ರಾಷ್ಟ್ರೀಯ ಕಾರ್ಯಕ್ಕೆ ಪೂರಕವಾಗಿರಬೇಕು ಆ ಕೆಲಸ ಅಲ್ಲೊಂದಷ್ಟು ಇಲ್ಲೊಂದಷ್ಟು ಕೆಲಸವಾಗಬಾರದು ಆ ಕೆಲಸವನ್ನು ಸಂಪೂರ್ಣವಾಗಿ ಪೂರೈಸಬೇಕು. ಇಂದು ನಮ್ಮ ಸಿಂಧಗಿ ಕ್ಷೇತ್ರಕ್ಕೆ ಸೇರಿದ ನಾನು, ದೇವರಹಿಪ್ಪರಗಿ, ಬೇಗೂರು, ರಾಂಪುರದಲ್ಲಿ ಕುಡಿಯುವದಕ್ಕೆ ನೀರು ಇಲ್ಲವಾಗಿದೆ ಮಾನ್ಯ ಕೆ. ಪ್ರಭಾಕರ ಅವರು ಇದರ ಕಡೆಗೆ ಹೆಚ್ಚು ಗಮನ ಕೊಡದ ಕಾರಣ ಅಲ್ಲಿಯ ಜನರು ಕಳೆದ 15 ದಿವಸಗಳಿಂದ ಸ್ನಾನ ಮಾಡಿಲ್ಲ . ಹರಿಜನರು ವಾಸ ಮಾಡತಕ್ಕಂಥ ಮತ್ತು ಲಮಾಣಿ ತಾಂಡಗಳು ವಾಸ ಮಾಡತಕ್ಕಂಥ ಸ್ಥಳಗಳಲ್ಲಿ ಕುಡಿಯುವ ನೀರಿನ ವ್ಯವಸ್ಥೆ ಮಾಡಬೇಕು. ಅವರಿಂದ ಅಪ್ಲಿಕೇಷನ್ ಬರುವವರೆಗೆ ಕಾಯದೆ, ಇದು ಜನರಲ್ ಪ್ರಾಬ್ಲಮ್ ಎಂದು ತಿಳಿದುಕೊಂಡು ಈ ಕೆಲಸ ಮಾಡಬೇಕು. 20 ಅಂಶಗಳ ಕಾರ್ಯಕ್ರಮ ಒಳ್ಳೆಯದಿದ್ದರೂ ಸಹ ಅದರ ಜೊತೆಗೆ 5 ಅಂಶಗಳ ಕಾರ್ಯಕ್ರಮವನ್ನು ಸೇರಿಸಿದ್ದು ಸರಿಯಲ್ಲ. ಶ್ರೀ ಸಂಜಯಗಾಂಧಿಯವರು ಯಾವ ಹಕ್ಕಿನ ಮೇಲೆ ಇದನ್ನು ಜಾರಿಗೆ ಕೊಡಲು ಬಯಸಿದರೆಂದು ನಾನು ಕೇಳುತ್ತೇನೆ. ಈ 5 ಅಂಶದ ಕಾರ್ಯಕ್ರಮಗಳು ಶ್ರೀ ಸಿ.ಡಿ. ದೇಶಮುಖ್ ಅವರ ಕಾಲದಿಂದಲೂ ಜಾರಿಯಲ್ಲಿವೆ. ಅವರು ನಮ್ಮ ಭಾಗಕ್ಕೆ ಬಂದಾಗ ನಾನು ಅವರನ್ನು ಭೇಟಿಮಾಡಲೂ ಹೋಗಲಿಲ್ಲ. ಅದೇ ರೀತಿ ಅವರು ಒರಿಸ್ಸಾಕ್ಕೆ ಭೇಟಿಕೊಟ್ಟಾಗ ಅವರನ್ನು ಶ್ರೀಮತಿ ನಂದಿನಿ ಸತ್‌ಪತಿಯವರು ಸ್ವಾಗತಿಸಲಿಲ್ಲವೆಂಬ ಕಾರಣದಿಂದ ಅವರು ಅಧಿಕಾರವನ್ನು ಕಳೆದುಕೊಳ್ಳಬೇಕಾಯಿತು. ನಮ್ಮದು ಸುಖೀರಾಜ್ಯವೆಂದು ಹೇಳುತ್ತಾರೆ. ಆದರೆ ಜನರಿಗೆ ಕುಡಿಯಲು ನೀರು ಇಲ್ಲ. ನಾನು ನನ್ನ ಕ್ಷೇತ್ರದಲ್ಲಿ ಸಂಚಾರ ಮಾಡಲು ಹೊರಟರೆ ಜನರು ಎಂ.ಎಲ್.ಎ ಗಿರಿಗೆ ರಾಜೀನಾಮೆ ಕೊಡಬೇಕೆಂದು ಕೇಳುತ್ತಿದ್ದಾರೆ. ಬಾವಿ ತೆಗೆಸಬೇಕೆಂದು ಅಪ್ಲಿಕೇಷನ್ ಕೊಟ್ಟರೆ ಎನ್.ಆರ್.ಡಬ್ಲ್ಯು.ಯು. ಸ್ಕೀಮು ಪ್ರಕಾರ ಪಂಚಾಯತಿಯವರು ತಮ್ಮ ಭಾಗದ ಹಣ ಕೊಟ್ಟಿಲ್ಲವೆಂದು ಅಧಿಕಾರಿಗಳು ಅಪ್ಲಿಕೇಷನ್ ಬರೆಯುತ್ತಾರೆ. ಪಂಚಾಯಿತಿ ಸದಸ್ಯರು ಮತ್ತು ಸರಪಂಚರು ಏನಿದ್ದಾರೆ. ಅವರುಗಳಿಗೆ ಬಡವರ ಬಗ್ಗೆ ಕನಿಕರವಿರುತ್ತದೆ. ಆದರೆ ಪಂಚಾಯಿತಿಯಲ್ಲಿ ಹಣವೇ ಇಲ್ಲದಿದ್ದರೆ ಅವರು ಯಾವ ರೀತಿ ಹಣ ಕೊಡುತ್ತಾರೆ. ಆದಕಾರಣ ಈ ಬಗ್ಗೆ ಸ್ಪೆಷಲ್‌ಸೆಸ್ ಎಂದು ಹಾಕಿ, ಆ ಅರ್ಹತೆಯಿಂದ ಈ ಕುಡಿಯುವ ನೀರಿನ ಸಮಸ್ಯೆಯನ್ನು ಬಿಡಿಸಬೇಕು. ಈಗ ಕೆಲವು ಕಡೆ ರಿಗ್ ಯಂತ್ರಗಳ ಸಹಾಯದಿಂದ ಕೊಳವೆ ಬಾವಿಗಳನ್ನು ತೆಗೆಸಿದ್ದರೂ ಸಹ ಅವು ಕೆಟ್ಟಿವೆ ಎಂದು ಜನರು ಹೇಳುತ್ತಾರೆ. ಇವುಗಳನ್ನು ಕೂಡಲೇ ರಿಪೇರಿ ಮಾಡಿಸಬೇಕು.

ಇನ್ನು ಸರ್ಕಾರದವರು ಮೆಡಿಕಲ್ ಬಗ್ಗೆ ಹೆಚ್ಚು ಹಣ ಖರ್ಚು ಮಾಡುತ್ತೇವೆಂದು ಹೇಳುತ್ತಾರೆ. ಆದರೆ ಶೇಕಡಾ 80 ರಷ್ಟು ಹಳ್ಳಿಗಳಲ್ಲಿ ವಾಸ ಮಾಡುತ್ತಿರುವ ಜನರಿಗೆ ಈ ಮೆಡಿಕಲ ಸೌಲಭ್ಯ ಸಿಗುತ್ತಿಲ್ಲ. ಈ ಶೇಕಡಾ 80 ರಷ್ಟು ಜನರ ಪೈಕಿ ಶೇಕಡಾ 40 ರಷ್ಟು ಜನರು ಅತ್ಯಂತ ಸಣ್ಣ ಹಳ್ಳಿಗಳಲ್ಲಿ ವಾಸ ಮಾಡುತ್ತಿದ್ದಾರೆ. ಈ ಹಳ್ಳಿಗಳಲ್ಲಿರುವ ಜನರಿಗೆ ಸರಿಯಾದ ಮೆಡಿಕಲ ಸೌಲಭ್ಯವಿಲ್ಲ. ಯಾರಿಗಾದರೂ ಪ್ರಸವ ವೇದನೆಯಾದರೆ ಹತ್ತಿರದ ಆಸ್ಪತ್ರೆಗೆ ಕರೆದುಕೊಂಡು ಹೋಗಲು ಸರಿಯಾದ ರಸ್ತೆಗಳ ಸೌಲಭ್ಯವಿಲ್ಲ. ಜೊತೆಗೆ ಬಸ್ಸಿನ ವ್ಯವಸ್ಥೆಯೂ ಇಲ್ಲ ನೀರಿನ ವ್ಯವಸ್ಥೆ ಸಹ ಇಲ್ಲ. ಕೆಲವು ಕಡೆ ನೀರಿಗೆ ತೊಂದರೆಯಾಗಿ ಮೈಲಿಗಟ್ಟಲೆ ದೂರದಿಂದ ನೀರನ್ನು ತರಬೇಕಾಗಿದೆ. ಅದೇ ಕಾವೇರಿ ನೀರನ್ನು ಬೆಂಗಳೂರಿಗೆ ತರಲು ಕೋಟಿಗಟ್ಟಲೆ ಹಣ ಖರ್ಚು ಮಾಡುತ್ತಾರೆ. ಆದರೆ ನಮ್ಮ ಭಾಗದಲ್ಲಿ ಲಮಾಣಿ ತಾಂಡವಿರುವ ಕಡೆ ನೀರಿನ ಸೌಲಭ್ಯ ಒದಗಿಸಲು 2 ಲಕ್ಷ ರೂ. ಗಳ ಯೋಜನೆಯನ್ನು ಕೈಕೊಂಡು 5 ವರ್ಷಗಳಾಯಿತು. ಅದು ಇನ್ನೂ ಪೂರ್ತಿಯಾಗಿಲ್ಲ. ರಸ್ತೆಗಳು ರಿಪೇರಿ ಮಾಡಿಸಲು ತಾಲ್ಲೂಕು ಬೋರ್ಡಿನ್ ಫಂಡ್‌ನಲ್ಲಿ ಹಣ ಇಲ್ಲ. ಆದಕಾರಣಕ್ಕಾಗಿ 112 ಕೋಟಿ ರೂ.ಗಳನ್ನು ಖರ್ಚು ಮಾಡುತ್ತೇವೆಂದು ಹೇಳುತ್ತಾರೆ. ಆದರೆ ಹಳ್ಳಿಗಳಲ್ಲಿ ಇಂದು ಸರಿಯಾದ ಶಿಕ್ಷಣದ ವ್ಯವಸ್ಥೆ ಇಲ್ಲ. ಪ್ರೈಮರಿ ವಿದ್ಯಾಭ್ಯಾಸವನ್ನು ಮುಗಿಸಿದವರಿಗೆ ಬರೆಯಲು ಮತ್ತು ಓದಲು ಬರುವುದಿಲ್ಲ. ಇದಕ್ಕೆ ಕಾರಣ ಅಲ್ಲಿಯ ಉಪಾಧ್ಯಾಯರುಗಳ ಪೈಕಿ ಎಷ್ಟೋ ಮಂದಿ ಶಾಲೆಗಳಲ್ಲಿರುವುದೇ ಇಲ್ಲ. ಯಾವಾಗಲೂ ರಾಜಕೀಯ ಮುಖಂಡರ ಮನೆಗಳಲ್ಲಿಯೇ ಇರುತ್ತಾರೆ. ಇವರುಗಳು ರಾಜಕೀಯ ಮಾಡುವುದನ್ನು ತಪ್ಪಿಸಬೇಕು. ಅದಕ್ಕಾಗಿ ಸರ್‌ಪ್ರೈಜ್‌ವಿಜಿಟ್ ಕೊಟ್ಟು ಯಾರು ಶಾಲೆಗಳಲ್ಲಿರುವುದಿಲ್ಲ ಅಂತಹವರ ಮೇಲೆ ಕ್ರಮ ಕೈಕೊಳ್ಳಬೇಕು. ಪ್ರೈಮರಿ ವಿದ್ಯಾಭ್ಯಾಸದ ನಂತರ ಸೆಕೆಂಡರಿ ವಿದ್ಯಾಭ್ಯಾಸ ಪ್ರಾರಂಭವಾಗುತ್ತದೆ. ಅದು ಮುಗಿದ ಮೇಲೆ ಯೂನಿವರ್ಸಿಟಿ ಎಜುಕೇಷನ್‌ಗೆ ಬರಬೇಕು. ಇಲ್ಲಿ 4 ವರ್ಷಗಳ ಕಾಲ ವಿದ್ಯಾಭ್ಯಾಸ ಮಾಡಿದರೆ ಬಿ.ಎ. ಡಿಗ್ರಿಯನ್ನು ಪಡೆದುಕೊಳ್ಳಬಹುದು. 2 ವರ್ಷಗಳ ಕಾಲ ವಿದ್ಯಾಭ್ಯಾಸ ಮಾಡಿದರೆ ಎಂ.ಎ. ಡಿಗ್ರಿಯನ್ನು ಪಡೆದುಕೊಳ್ಳಬಹುದು. ಈ ರೀತಿ ಡಿಗ್ರಿ ಪಡೆದುಕೊಂಡವರಿಗೆ ಇಂದು ನೌಕರಿ ಸಿಗುತ್ತಿಲ್ಲವಾದ ಕಾರಣ ಈಗಿನ ವಿದ್ಯಾಭ್ಯಾಸದ ಸಿಲಬಸ್‌ನ್ನು ಬದಲಾವಣೆ ಮಾಡಬೇಕೆಂದು ಹೇಳುತ್ತೇನೆ. ಪಟ್ಟಣಗಳಲ್ಲಿರುವವರು ತಮ್ಮ ಮಕ್ಕಳನ್ನು ಕಾನ್‌ವೆಂಟ್‌ಗೆ ಕಳುಹಿಸುತ್ತಾರೆ. ಆದರೆ ಹಳ್ಳಿಗಳಲ್ಲಿರುವವರು ತಮ್ಮ ಮಕ್ಕಳನ್ನು ಸರ್ಕಾರದ ಶಾಲೆಗಳಿಗೇ ಕಳುಹಿಸಬೇಕಾಗುತ್ತದೆ. ಈ ಮಕ್ಕಳಿಗೂ ಸಹ ಒಳ್ಳೆಯ ವಿದ್ಯಾಭ್ಯಾಸ ಸಿಗಬೇಕೆಂಬುದು ಸರ್ಕಾರದ ಇಚ್ಛೆಯಾಗಿದ್ದರೆ ಬಿ.ಎ., ಬಿ.ಟಿ. ಆದವರನ್ನೇ ಉಪಾಧ್ಯಾಯರನ್ನಾಗಿ ನೇಮಕ ಮಾಡಬೇಕು ಇದರಿಂದ ಮಕ್ಕಳು ಚೆನ್ನಾಗಿ ಕಲಿಯಲು ಅವಕಾಶವಾಗುತ್ತದೆ. ಇದಕ್ಕೆ ಸೂಕ್ತ ವ್ಯವಸ್ಥೆ ಮಾಡಿ ಎಂದು ನಾನು ಹೇಳುತ್ತಿದ್ದೇನೆ. ಹಿಂದೆ ಶಿವಾಜಿ ಮಹಾರಾಜನು ಸಹ ಒಳ್ಳೆಯ ಬುದ್ಧಿವಂತರಾದ ಬ್ರಾಹ್ಮಣರನ್ನೇ ಉಪಾಧ್ಯಾಯರ ಕೆಲಸಕ್ಕೆ ನೇಮಕ ಮಾಡುತ್ತಿದ್ದ. ಇಲ್ಲಿ ಜಾತಿವಾದ ಬರುವುದಿಲ್ಲ ಮಕ್ಕಳ ವಿದ್ಯಾಭ್ಯಾಸ ಮುಖ್ಯ. ಮಗುವಿಗೆ ತಾಯಿಯ ಹಾಲು ಎಷ್ಟು ಮುಖ್ಯವೋ ಅಷ್ಟೇ ಈ ಪ್ರೈಮರಿ ವಿದ್ಯಾಭ್ಯಾಸ ಎನ್ನುವುದು ಮಕ್ಕಳಿಗೆ ಮುಖ್ಯವಾದುದು. ಇದೇ ರೀತಿ ಪ್ರತಿಯೊಂದು ಊರಿಗೂ

ಒಕ್ಕಲಿಯ ರಸ್ತೆಗಳಾಗಬೇಕು. ಒಕ್ಕಲಿಯ ರಸ್ತೆಗಳಿಲ್ಲದಿದ್ದರೆ ಹಳ್ಳಿಗಳು ಮುಂದೆ ಬರುವುದಿಲ್ಲ. ಶ್ರೀ ಢೇಬರ್ ಅವರು ಕಾಂಗ್ರೆಸ್ ಅಧ್ಯಕ್ಷರಾಗಿದ್ದಾಗ ಹರಿಜನ ಕೇರಿಗಳಲ್ಲಿದ್ದುಕೊಂಡು ಅವರ ಕಷ್ಟಸುಖಗಳನ್ನು ತಿಳಿದುಕೊಳ್ಳುತ್ತಿದ್ದರು. ಅದೇ ರೀತಿ ಹಿಂದೆ ಶ್ರೀರಾಮನು ಕಿಷ್ಕಿಂದದಲ್ಲಿ ವಾಸ ಮಾಡುತ್ತಿದ್ದ ಎಂಬುದನ್ನು ನಾವು ಚರಿತ್ರೆಯಿಂದ ತಿಳಿಯುತ್ತೇವೆ. ಅದೇ ರೀತಿ ಮಾನ್ಯ ಮಂತ್ರಿಗಳು ನಮ್ಮನ್ನು ಜೊತೆಗೆ ಕರೆದುಕೊಂಡು ಹರಿಜನಕೇರಿಯಲ್ಲಿ ಕೆಲವು ಕಾಲ ವಾಸ ಮಾಡಿ ಅವರ ಕಷ್ಟಗಳನ್ನು ತಿಳಿದುಕೊಂಡು ನಂತರ ಅದನ್ನೆಲ್ಲಾ ಸುಧಾರಣೆ ಮಾಡಬೇಕೆಂದು ಹೇಳುತ್ತೇನೆ.

ಚಾಂದಕೌಟೆ ಪ್ರಾಜೆಕ್ಟಿನ ಕಾರ್ಯವನ್ನು ಇನ್ನೂ ತೆಗೆದುಕೊಂಡಿಲ್ಲ. ಸರ್ಕಾರದವರು ಮೈನರ್ ಇರಿಗೇಷನ್‌ಗೆ ಪ್ರಾಧಾನ್ಯತೆ ಕೊಡುತ್ತೇವೆಂದು ಹೇಳುತ್ತಿದ್ದಾರೆ. ಆದರೆ ಇದರ ಬಗ್ಗೆ ಸರ್ಕಾರದವರ ಕಡೆಯಿಂದ ಉತ್ತರವಿಲ್ಲ. ಮಾನ್ಯ ಮುಖ್ಯ ಮಂತ್ರಿಗಳು 1974 ನೇ ಇಸವಿ ಎಂಟನೆಯ ತಿಂಗಳು ಆರನೆಯ ತಾರೀಖು ಅಪ್ಪರ್ ಕೃಷ್ಣ ಪ್ರಾಜೆಕ್ಟಿನ ಕೆಲಸವನ್ನು ತೆಗೆದುಕೊಳ್ಳುತ್ತೇವೆ. ಇದರಿಂದ ಮೂರನೆಯ ಒಂದು ಭಾಗ ಸಿಂದಗಿ ತಾಲ್ಲೂಕಿಗೆ ಬೆನಿಫಿಟ್ ಆಗುತ್ತದೆ ಎಂದೂ, ವೆಲ ಇರಿಗೇಷನ್‌ನಿಂದ ಮೂರನೆಯ ಎರಡು ಭಾಗ ಬೆನಿಫಿಟ್ ಆಗುತ್ತದೆ ಎಂದು ಹೇಳಿ ಇದಕ್ಕೆ ದುಡ್ಡನ್ನು ಕೊಡುತ್ತೇವೆಂದು ಹೇಳಿದ್ದರು. ದುಡ್ಡು ಇಲ್ಲದೆ ಇರಿಗೇಷನ್ ಪ್ರಾಜೆಕ್ಟುಗಳನ್ನು ಹೇಗೆ ಮಾಡುವುದು? ವೆಲ ಇರಿಗೇಷನ್ ಬಗ್ಗೆ ತಕರಾರು ಬರುವುದಿಲ್ಲ. ಇವತ್ತು ಮಾನ್ಯ ಮುಖ್ಯಮಂತ್ರಿಗಳಿಗೆ ಹೃದಯ ಇದ್ದರೆ ಈ ಪ್ರಾಜೆಕ್ಟಿಗೆ ಹಣ ಕೊಡಬೇಕು. ಹಣ ಕೊಡುತ್ತೇವೆಂದು ಹೇಳಿ ಹೇಳಿ ಫೇಲ ಆಗಿದ್ದಾರೆ. ಕೇವಲ 5-6 ಸಾವಿರ ರೂಪಾಯಿಗಳಿಂದ ಪ್ರಾಜೆಕ್ಟ ಆಗುವುದಕ್ಕೆ ಸಾಧ್ಯವೇ? ಇದಕ್ಕೆ ಸುಮಾರು 95 ಲಕ್ಷ ರೂಪಾಯಿಗಳ ಗಣನೀಯವಾದ ಹಣ ಬೇಕಾಗಿರುವಾಗ ಕೇವಲ ಎರಡು ಲಕ್ಷ ರೂಪಾಯಿಗಳನ್ನು ಕೊಟ್ಟಿದ್ದಾರೆ. ಆದ್ದರಿಂದ ಸರ್ಕಾರದವರು ಇದಕ್ಕೆ ಈ ವರ್ಷ ಎಷ್ಟು ಹಣ ಕೊಡುತ್ತಾರೆ. ಮುಂದಿನ ವರ್ಷ ಎಷ್ಟು ಕೊಡುತ್ತಾರೆ. ಎನ್ನುವುದನ್ನು ಸ್ಪೆಸಿಫಿಕ್ ಆಗಿ ಹೇಳಬೇಕು. ನಾನು ಹಿಂದೆ ಮೊರಾರಜಿಯವರ ಜೊತೆಗೆ ಎಂ.ಎಲ್.ಎ. ಆಗಿದ್ದೆ. ಈಗ ಅವರು ನಮ್ಮ ದೇಶದ ಪ್ರಧಾನಿಗಳಾಗಿದ್ದಾರೆ. ಈಗ ನಾನು ನಮಗೆ ಅನ್ಯಾಯವಾಗಿದೆ ಎಂದು ನಿಮ್ಮನ್ನೂ ಇದರ ಸಲುವಾಗಿ ಕೇಂದ್ರಕ್ಕೆ ಕರೆದುಕೊಂಡು ಹೋಗುವುದಕ್ಕೆ ಸಿದ್ಧನಾಗಿದ್ದೇನೆ.

ಪಿ.ಎಲ್.ಡಿ. ಬ್ಯಾಂಕಿಗೆ ಸರ್ಕಾರದವರು ಎಷ್ಟೋ ಹಣವನ್ನು ಕೊಟ್ಟರು ಆದರೆ ಇದನ್ನು ಪಡೆದ ಜನರು, ಕುಡಿದು ಹಣವನ್ನು ಹಾಳು ಮಾಡಿದರು. ಅವರ ಸಲುವಾಗಿ ಏನಾದರೂ ಉಪಯೋಗವಾಗುವಂಥ ಕೆಲಸಗಳನ್ನು ಮಾಡಿರಿ. ಬಜೆಟಿನೊಳಗೆ ಇದಕ್ಕೋಸ್ಕರ ಸುಮಾರು 20 ಲಕ್ಷ ರೂಪಾಯಿಗಳನ್ನು ಇಟ್ಟಿದ್ದಾರೆ. ನಾನು ಸ್ಪಷ್ಟವಾಗಿ ಹೇಳುತ್ತೇನೆ, ತಾವು ಮುಖ್ಯ ಮಂತ್ರಿಗಳಾಗಿ ಮುಂದೆ ಇರುತ್ತೀರೋ ಇಲ್ಲವೋ, ನಾವು ಈಗ ನಿಮ್ಮನ್ನು ಬಿಡುವುದಿಲ್ಲ. ನೀವು ಯಾವ ಕೆಲಸವನ್ನು ಮಾಡುವುದಕ್ಕೆ ಸಾಧ್ಯ ಇದೆ ಅದನ್ನು ಮಾಡಿರಿ, ಸಾಧ್ಯವಿಲ್ಲದಿದ್ದರೆ ನಾವು ಮೊರಾರಜಿ ದೇಸಾಯಿಯವರ ಹತ್ತಿರ ಹೋಗಿ ನಮ್ಮ ಸಮಸ್ಯೆಯನ್ನು ಇಡುತ್ತೇವೆ. ನಮ್ಮ ಏನೇನು ಸಮಸ್ಯೆಗಳು ಇವೆ ಅವೆಲ್ಲವನ್ನು ಮಂಜೂರು ಮಾಡಿಸಿಕೊಂಡು ಬರುತ್ತೇವೆ.

ನಮ್ಮ ಸರ್ಕಾರದವರು, ನಮ್ಮಲ್ಲಿ ನಾಲ್ಕು ಲಕ್ಷ ರೂಪಾಯಿಗಳನ್ನು ಖರ್ಚು ಮಾಡಿ ರಸ್ತೆಗಳನ್ನು ಮಾಡಿದರು. ಈ ರಸ್ತೆಗಳಲ್ಲಿ ಮಳೆ ಬಂದು ಇವರು ಮಾಡಿದಂಥ ಕೆಲಸ ಹಾಳಾಗಿ, ಆ ರಸ್ತೆಗಳಲ್ಲಿ ದನಗಳೂ ಸಹ ನಡೆಯಲಿಕ್ಕೆ ಬರುವದಿಲ್ಲ, ಇದರ ಅನುಭವಸ್ಥರು ಕೊಟ್ಟ ಸಲಹೆಗಳನ್ನು ಸರ್ಕಾರದವರು ತೆಗೆದುಕೊಳ್ಳಬೇಕು. ಅವರು ಮೆಜಾರಿಟಿ ಪಾರ್ಟಿಯಲ್ಲಿರಲಿ, ಮೈನಾರಟಿ ಪಾರ್ಟಿಯಲ್ಲಿರಲಿ ಅದು ಪ್ರಶ್ನೆಯಲ್ಲ. ನಾವು ಕೊಟ್ಟ ಸಲಹೆ, ನೀವು ಕೊಟ್ಟ ಸಲಹೆ ಎಂದು ಕೆಲಸಗಳನ್ನು ಸರ್ಕಾರದವರು ಮಾಡಬಾರದು. ಉತ್ತಮ ಕಾರ್ಯವನ್ನು ಮಾಡಲಿಕ್ಕೆ ಯಾರು ಉತ್ತಮ ಸಲಹೆ ಕೊಟ್ಟರೂ ಸರಿ, ಅದನ್ನು ಸರ್ಕಾರದವರು ಅನುಸರಿಸಬೇಕು ಎಂದು ನಾನು ಹೇಳುತ್ತೇನೆ. ಈಗ ನಮ್ಮ ತಾಲ್ಲೂಕಿನಲ್ಲಿ ರಸ್ತೆಗಳ ಅನುಕೂಲ ಇಲ್ಲ, ಕೋಟಿಗಟ್ಟಲೆ ಹಣವನ್ನು ಇದಕ್ಕಾಗಿ ಸರ್ಕಾರದವರು ಹಾಳು ಮಾಡಿದ್ದಾರೆ. ಸ್ಕೇರ್ ಸಿಟಿಯಲ್ಲಿಯೂ ಇದರ ಬಗ್ಗೆ ಹಣವನ್ನು ಖರ್ಚು ಮಾಡಿದ್ದಾರೆ. ಆದರೂ ಇದರ ಬಗ್ಗೆ ಒಳ್ಳೆಯ ಕೆಲಸಗಳು ಆಗಿಲ್ಲ. ನೀವು ಕೆಲಸಗಳನ್ನು ಮಾಡದಿದ್ದರೆ ಯಾರು ಮಾಡಬೇಕು ಎಂದು ನಾನು ಕೇಳಬೇಕಾಗುತ್ತದೆ. ಇದು ನಿಮ್ಮ ಪ್ರೈವೇಟ್ ಹೋಂ ಅಫೇರ್ಸ್ ಅಲ್ಲ. ನೀವು ಸರ್ಕಾರದ ಹಣವನ್ನು ಖರ್ಚು ಮಾಡುತ್ತಿದ್ದೀರಿ. ಅದನ್ನೂ ಸಹ ನಿಮ್ಮ ಮಾಲೀಕರಿಗಾಗಿ ಖರ್ಚು ಮಾಡುತ್ತಿದ್ದೀರಿ. ಆದ್ದರಿಂದ ನಾನು ನಿಮ್ಮಿಂದ ಖಚಿತವಾದ ಉತ್ತರ ಕೇಳುತ್ತಿದ್ದೇನೆ. ಅಪ್ಪರ್ ಕೃಷ್ಣಾ ಪ್ರಾಜೆಕ್ಟಿಗೆ ಈ ವರ್ಷ ಎಷ್ಟು ಹಣವನ್ನು ಕೊಡುತ್ತೀರಿ? ಎಂಡಂಚಿಕೆರೆ ಪ್ರಾಜೆಕ್ಟಗೆ ಎಷ್ಟು ಹಣವನ್ನು ಕೊಡುತ್ತೀರಿ, ನೀರಾವರಿ ಬಾವಿಗಳು ಎಲ್ಲೆಲ್ಲಿ ಇವೆ ಅವುಗಳನ್ನು ಮಾಡುವುದಕ್ಕೆ ಪ್ರತಿಯೊಂದು ಊರಿಗೂ ರಸ್ತೆಗಳನ್ನು ಮಾಡುವುದಕ್ಕೆ ಎಷ್ಟು ಹಣವನ್ನು ಕೊಡುತ್ತೀರಿ ಎನ್ನುವುದನ್ನು ಹೇಳಬೇಕು. ನಮ್ಮ ತಾಲ್ಲೂಕಿನಲ್ಲಿ ಎಷ್ಟು ಕೆರೆಗಳು ಇವೆ, ಅವೆಲ್ಲವನ್ನೂ ಮಂಜೂರು ಮಾಡಬೇಕು. ಇದಕ್ಕೆ ಜನರಿಂದ ಕಾಂಟ್ರಿಬ್ಯೂಷನ್ ಅನ್ನು ಕೇಳಬಾರದು. ಮಾನ್ಯ ಚೆನ್ನಬಸಪ್ಪನವರ ಪರಿಯಾಪಟ್ಟಣದಲ್ಲಿ ರಸ್ತೆಗಳು ಆಗಿಲ್ಲವೇ? ಇದನ್ನು ನೀವು ಮಾಡುವುದಿಲ್ಲವೇ? ಈ ವಿಷಯದಲ್ಲಿ ಸರ್ಕಾರದವರು ರಚನಾತ್ಮಕವಾದ ಕೆಲಸವನ್ನು ತೆಗೆದುಕೊಳ್ಳಬೇಕು ಎಂದು ನಾನು ಮತ್ತೊಮ್ಮೆ ಪ್ರಾರ್ಥನೆ ಮಾಡುತ್ತೇನೆ.

ಎಲ್ಲದಕ್ಕಿಂತ ಮೊದಲು ಅಪ್ಪರ್ ಕೃಷ್ಣಾ ಪ್ರಾಜೆಕ್ಟಗೆ ಹಣ ಬೇಕು. ಮತ್ತು ಟಿ.ಡಿ.ಬಿ.ಗೆ ಹಣವನ್ನು ಕೊಡಬೇಕು ನಮ್ಮ ತಾಲ್ಲೂಕಿನಲ್ಲಿ ವೆಲ ಇರಿಗೇಷನ್ ಪ್ರಾಜೆಕ್ಟಗಳನ್ನು ಮತ್ತು ಕುಡಿಯುವ ನೀರಿನ ಬಾವಿಗಳನ್ನು ಮಾಡಬೇಕು. ಆ ಸಮಸ್ಯೆ ಬಹಳ ದಿವಸಗಳಿಂದ ನಮ್ಮ ತಾಲ್ಲೂಕಿನಲ್ಲಿದೆ. ಇದನ್ನು ಒಂದು ದೊಡ್ಡ ಸಮಸ್ಯೆಯಾಗಿ ತೆಗೆದುಕೊಂಡು ಈ ಸಮಸ್ಯೆಯನ್ನು ಬಗೆಹರಿಸಬೇಕು.

ಪ್ರೈಮರಿ ಎಜುಕೇಷನ್ ಬಗ್ಗೆ ಎರಡು ಮಾತುಗಳನ್ನು ಹೇಳುತ್ತೇನೆ. ಮಾನ್ಯ ಯಾಪ್ಯಾ ಅವರು ನುರಿತ ಮಂತ್ರಿಗಳು ಇದ್ದಾರೆ. ಇವರು ನಮ್ಮ ಹಂಗನೂರು ತಾಂಡಾ ಮತ್ತು ಕುಕ್ಕಟನೂರು ತಾಂಡಾ ಇವುಗಳ ಬಗ್ಗೆ ಗಮನ ಕೊಡಬೇಕು. ಈ ಎರಡು ತಾಂಡಾಗಳು ಅಭಿವೃದ್ಧಿ ಆಗಿಲ್ಲ. ಇಂಥ ಒಳ್ಳೆಯ ಕೆಲಸಗಳನ್ನು ಸರ್ಕಾರದವರು ಮಾಡಬೇಕು. ಇದೂ ಕೂಡ ಒಂದು ತರಹ ಅನುಕೂಲ ಎಂದು ತಿಳಿದುಕೊಂಡು ಜನಗಳಿಗೆ ಅನುಕೂಲ ಮಾಡಬೇಕು ಎಂದು ಹೇಳಿ, ಅಧ್ಯಕ್ಷರು ಮಾತನಾಡಲಿಕ್ಕೆ ಅವಕಾಶ ಕೊಟ್ಟಿದ್ದಕ್ಕಾಗಿ ವಂದಿಸಿ ನನ್ನ ಮಾತುಗಳನ್ನು ಮುಗಿಸುತ್ತೇನೆ.

# ಮಾಡುವದಕ್ಕೆ ಖರ್ಚು ಮಾಡಿ

21ನೇ ಜೂನ್ 1977

**ಶ್ರೀ ಎಸ್.ವೈ. ಪಾಟೀಲ** – ಮಲೆನಾಡು ಪ್ರದೇಶಗಳಲ್ಲಿ ಕಡಿಮೆ ಖರ್ಚಿನಲ್ಲಿ ಹೆಚ್ಚು ಮೀನು ಮರಿಗಳ ಉತ್ಪನ್ನ ಮಾಡಬಹುದು ಆದರೆ, ಅದು ಬಿಟ್ಟು ಜಾಸ್ತಿ ಹಣ ಖರ್ಚು ಮಾಡಿದರೂ ಉತ್ಪತ್ತಿ ಹೆಚ್ಚಿಗೆ ಬರದ ಬಿಜಾಪುರದ ಕಡೆ ಏತಕ್ಕೆ ಬರುತ್ತೀರಿ? ಮಲೆನಾಡಿನಲ್ಲಿ ಮೀನುಗಳು ಯಾವ ಪ್ರಯತ್ನವೂ ಇಲ್ಲದೆ ನೈಸರ್ಗಿಕವಾಗಿ ನಿರ್ಮಾಣವಾಗುತ್ತಿದೆ ಅಂಥಾ ಕಡೆ ಇನ್ನೂ ಹೆಚ್ಚು ಕಾರ್ಯಕ್ರಮಗಳನ್ನು ಹಾಕಿಕೊಂಡು ಅಧಿಕವಾಗಿ ಮೀನುಗಳ ಉತ್ಪಾದನೆ ಮಾಡಿ, ಬೇಕಾದರೆ ವಿದೇಶಿ ವಿನಿಯಮಗಳಿಸಲೂ ಪ್ರಯತ್ನ ಮಾಡಿ, ಅದು ಬಿಟ್ಟು ನಾವು ಜಿಲ್ಲಾವಾರು ಮೀನುಗಳ ಅಭಿವೃದ್ಧಿ ಮಾಡುತ್ತೇವೆಂದು ಹೊರಡಬೇಡಿ. ನಮ್ಮ ಬಿಜಾಪುರದಲ್ಲಿ ಮೀನು ಅಭಿವೃದ್ಧಿ ಮಾಡುವ ಅವಶ್ಯಕತೆ ಇಲ್ಲ ನಮಗೆ ಹೊಟ್ಟೆಗೆ ಅನ್ನ ಕೊಡಿ ಸಾಕು.

**ಶ್ರೀ ಕೆ.ಟಿ. ರಾಥೋಡ್** – ಮಾನ್ಯ ಸದಸ್ಯರಿಗೆ ಮೀನಿನ ರುಚಿ ಗೊತ್ತಿಲ್ಲದಿರುವುದಿಂದ, ಹಾಗೆ ಹೇಳುತ್ತಿದ್ದಾರೆ ಅಷ್ಟೆ. ನಾರಾಯಣಪುರದಲ್ಲಿ ವಿಶ್ವಬ್ಯಾಂಕಿನ ಸಹಾಯದಿಂದ ಲಕ್ಷಾಂತರ ಮೀನು ಮರಿಗಳನ್ನು ಉತ್ಪಾದನೆ ಮಾಡುವ ವ್ಯವಸ್ಥೆಯಿದೆ. ಎಲ್ಲೆಲ್ಲಿ ನೀರಿನ ಅನುಕೂಲವಿದೆ, ಅಲ್ಲೆಲ್ಲಿ ಮೀನುಮರಿಗಳ ಉತ್ಪನ್ನ ಅಧಿಕವಾಗಿ ಆಗುತ್ತಿದೆ ಅಲ್ಲೆಲ್ಲಾ ನಾವು ಕಾರ್ಯಕ್ರಮಗಳನ್ನು ಕೈಗೊಂಡಿಗಿದೆ.

ಇನ್ನು ತೋಟಗಾರಿಕೆ ಇಲಾಖೆ ಕುರಿತು ಮಾನ್ಯ ಸದಸ್ಯರುಗಳು ಅನೇಕ ಸಲಹೆ ಸೂಚನೆಗಳನ್ನು ಕೊಟ್ಟಿದ್ದಾರೆ. ತೋಟಗಾರಿಕೆ ಇಲಾಖೆ ಬಹಳ ಚೆನ್ನಾಗಿ ಕೆಲಸ ಮಾಡುತ್ತಿದೆ.

**ಶ್ರೀ ಎಸ್.ವೈ. ಪಾಟೀಲ** – ಆದಿತ್ಯವಾರ ಇಲ್ಲದೇ ಇದ್ದರೆ, ಸೋಮವಾರ ಬರುತ್ತಾರೆ. ಈ ರೀತಿ ಬರುತ್ತಿರುವುದರಿಂದ ಮೀನು ಜಾಸ್ತಿಯಾಗುತದೆಯೇ?

**ಶ್ರೀ ಕೆ.ಟಿ. ರಾಥೋಡ್**– ಬೇರೆ ಬೇರೆ ಕಾರ್ಯಕ್ರಮ ಇರುವುದರಿಂದ ಬರುತ್ತೇವೆ. ಬರಬೇಕಾಗುತ್ತದೆ.

**ಶ್ರೀ ಎಸ್.ವೈ. ಪಾಟೀಲ** – ಸರ್ಕಾರಿ ಬಜೆಟ್‌ನ್ನು ಖರ್ಚುಮಾಡಿ 15 ದಿವಸಕ್ಕೆ ಒಂದಾವರ್ತಿ ಏತಕ್ಕೆ ಬರುತ್ತೀರಿ? ನಮಗೆ ನೀರಾವರಿ ಯೋಜನೆಗೆ ದುಡ್ಡಿಲ್ಲ, ಬಾವಿಗಳಿಗೆ ದುಡ್ಡಿಲ್ಲ. ನೀವು ಪ್ರವಾಸಕ್ಕಾಗಿ ಖರ್ಚು ಮಾಡುವ ಹಣದಲ್ಲಿ 50 ಬಾವಿಗಳಾದರೂ ಆಗುತ್ತವೆ. ಈ ರೀತಿ ಪದೇ ಪದೇ ಬರುವುದರಿಂದ ಸರ್ಕಾರದ ಡಿಗ್ನಿಟಿ ಎಲ್ಲಿ ಉಳಿಯುತ್ತದೆ. ಡೆಪ್ಯೂಟಿ ಕಮೀಷನರ್‌ರವರು ಮೂರು ವರ್ಷಕ್ಕೆ ಒಂದು ಸಾರಿ ಡಿವಿಜನಲ್ ಕಮೀಷನರ್‌ರವರು ಆರು ವರ್ಷಕ್ಕೆ ಒಂದು ಸಾರಿ, ವಿಸಿಟ್ ಕೊಡುತ್ತಾರೆ ಇವರು ವಾರಕ್ಕೊಂದು ಸಾರಿ ಕಂಪಲ್‌ಸರಿ ಬಂದು ಹೋಗುವುದರಿಂದ ಸರ್ಕಾರಿ ಬಜೆಟ್ ಹಾಳಾಗುತ್ತಿದೆ. 15 ದಿವಸಕ್ಕೆ 8 ದಿವಸಕ್ಕೆ ಒಂದು ಸಾರಿ ಬರುವ ಕಾರಣ ಏನು? ಇದಕ್ಕೆ ಉತ್ತರಬೇಕು.

**ಅಧ್ಯಕ್ಷರು** – ಕೂತ ಕೊಳ್ಳಿ ಪಾಟೀಲ್‌ರೇ ಹೇಳುತ್ತಾರೆ.

**ಶ್ರೀ ಎಸ್.ವೈ. ಪಾಟೀಲ** – ದುಡ್ಡು ಯಾವರೀತಿ ಹಾಳಾಗುತ್ತಿದೆ ಪ್ರತಿ ಸಂಜೆ ಬರುತ್ತಾರೆ. ತಪ್ಪಿದರೆ ಸೋಮವಾರ ಬರುತ್ತಾರೆ. ನಂಗೆ ಸೋಡಿ ಹುಚ್ಚು ಹಿಡಿದಿದೆ, ನಾನು ಹುಚ್ಚಾಸ್ಪತ್ರೆ ಸೇರೋಣ ಎಂದರೆ ಅಲ್ಲಿ ಜಾಗ ಇಲ್ಲದಕ್ಕೆ ಸುಮ್ಮನೆ ಆಗಿದ್ದೇನೆ, ಇನ್ನೊಂದು ಸಾರಿ ಬಂದರೆ ನಾನು ಸತ್ಯಾಗ್ರಹ ಮಾಡುತ್ತೇನೆ.

**ಅಧ್ಯಕ್ಷರು** – ಸಾಕು, ಮಾನ್ಯ ಪಾಟೀಲರು ಸುಮ್ಮನೇ ಇರಬೇಕು.

## ಲೋಕೋಪಯೋಗಿ ಇಲಾಖೆಯ ಬೇಡಿಕೆ

23ನೇ ಜೂನ್ 1977

**ಶ್ರೀ ಎಸ್.ವೈ. ಪಾಟೀಲ** – ಮಾನ್ಯ ಉಪಾಧ್ಯಕ್ಷರೇ, ಇವೊತ್ತು ಲೋಕೋಯೋಗಿ ಇಲಾಖೆಯ ಬೇಡಿಕೆಗಳ ಮೇಲೆ ಮಾತನಾಡುವಾಗ ಬರಗಾಲದ ಬಗ್ಗೆ ಮಾತನಾಡುವುದಕ್ಕೆ ನಾನು ಹೋಗುವುದಿಲ್ಲ. ನಾನೇನು ಅಷ್ಟು ದಡ್ಡನಲ್ಲ. ಇವೊತ್ತು ರಾಜ್ಯದ ಎಲ್ಲ ಕಡೆಗಳಲ್ಲಿ ರಸ್ತೆ ಕೆಲಸಗಳನ್ನು ಮಾಡಿಲು ಹಣ ಬೇಕಾಗಿದೆ ಈ ಹಣ ಬೇಕಾದರೆ, ಜನರ ಮೇಲೆ ತೆರಿಗೆ ಹಾಕಬೇಕಾಗುತ್ತದೆ. ಇವೊತ್ತು ನಮ್ಮಲ್ಲಿ ಮೆಜಾರಿಟಿ ರಸ್ತೆ ತಾಲ್ಲೂಕ್ ಬೋರ್ಡಿನ ಕಡೆ ಇವೆ ಅವುಗಳನ್ನು ದುರಸ್ತಿ ಮಾಡಲು ಅವರ ಕಡೆ ಹಣವಿಲ್ಲ. ಉದಾಹರಣೆಗೆ ಹೇಳಬೇಕೆಂದರೆ ನಮ್ಮ ಸಿಂದಗಿ ತಾಲ್ಲೂಕ ಬೋರ್ಡಿಗೆ ಸೇರಿದಂತೆ 303 ಮೈಲು ರಸ್ತೆ ಇದೆ ತಾಲ್ಲೂಕ್ ಬೋರ್ಡಿನ್‌ವರಿಗೆ ಒಂದು ಫರ್ಲಾಂಗ್ ರಸ್ತೆಯನ್ನು ರಿಪೇರಿ ಮಾಡಿಸಲು ಹಣವಿಲ್ಲ. ಇಂತಹ ರಸ್ತೆಗಳನ್ನು ಲೋಕೋಪಯೋಗಿ ಇಲಾಖೆಯವರು ಸಹ ವಹಿಸಿಕೊಳ್ಳುವುದಿಲ್ಲ. ಅಂದರೆ ಆ ರಸ್ತೆಗಳನ್ನು ತಾಲ್ಲೂಕ್ ಬೋರ್ಡಿನವರು ವಹಿಸಿಕೊಂಡಿದ್ದೇ ಅಪರಾಧವೋ ಏನೋ ಎಂಬುದು ನನಗೆ ಗೊತ್ತಿಲ್ಲ. ಇವೊತ್ತು ಸರ್ಕಾರದವರು ಮುಖ್ಯವಾಗಿ ಆಹಾರ ಸಮಸ್ಯೆ ನೀರಿನ ಸಮಸ್ಯೆ ಮತ್ತು ಈ ರಸ್ತೆಗಳ ಸಮಸ್ಯೆಯನ್ನು ಬಗೆಹರಿಸಬೇಕು ಈ ಬಗ್ಗೆ ರಾಜ್ಯದ ಯಾವ ಯಾವ ಭಾಗಗಳಲ್ಲಿ ಎಷ್ಟೆಷ್ಟು ಕೆಲಸಗಳಾಗಬೇಕಾಗಿದೆ ಎಂಬ ಬಗ್ಗೆ ಅಂದಾಜು ಮಾಡಿ ಯಾವ ಹೆಡ್ಡಿನಿಂದಲಾದರೂ ಹಣ ಒದಗಿಸಿ ಈ ಕೆಲಸಗಳನ್ನು ಮುಗಿಸಬೇಕೆಂದು ಹೇಳುತ್ತೇವೆ. ಹೈದರಾಬಾದನ ನವಾಬ ಕೆಟ್ಟ ರೀತಿಯಿಂದ ರಾಜ್ಯಭಾರ ಮಾಡಿದ ಎಂದು ನಾವುಗಳು ಹೇಳುತ್ತೇವೆ. ಆದರೆ ಆ ರಸ್ತೆಗಳನ್ನು ಮಾಡಿಸಲು ಸೇತುವೆಗಳನ್ನು ಕಟ್ಟಿಸಲು ಯಾರಿಂದಲೂ ಕಾಂಟ್ರಿಬ್ಯೂಷನ್ ಕೇಳಲಿಲ್ಲ. ಆದರೂ ಅಗತ್ಯವಿರುವ ಕಡೆಗಳಲ್ಲಿ ಈ ರಸ್ತೆ ಮತ್ತು ಸೇತುವೆಗಳ ಕೆಲಸಗಳನ್ನು ಆತ ಮಾಡಿಸಿದ. ಅದರಂತೆ ಈಗಲೂ ನಮ್ಮ ಸರ್ಕಾರದವರು ಅಗತ್ಯವಿರುವ ಕಡೆಗಳಲ್ಲಿ ರಸ್ತೆಗಳನ್ನು ಮಾಡಿಸದಿದ್ದರೆ ಮತ್ತು ಸೇತುವೆಗಳನ್ನು ಕಟ್ಟದಿದ್ದರೆ, ನಮ್ಮದು ಸುಖೀರಾಜ್ಯವಾಗುವುದಿಲ್ಲ. ನಮ್ಮಲ್ಲಿ ಬಸ್‌ಗಳು ಹೋಗುವಷ್ಟು ಸಹ ರಸ್ತೆಗಳು ಚೆನ್ನಾಗಿಲ್ಲ. ಆದರೆ ಪಟ್ಟಣಗಳಲ್ಲಿ ಎಲ್ಲ ಅನುಕೂಲಗಳೂ ಇವೆ. ಅಧಿಕಾರಿಗಳು, ಅಧಿಕಾರೇತರರು ಮತ್ತು ವ್ಯಾಪಾರಸ್ಥರು ಮೊದಲುಗೊಂಡು ಎಲ್ಲರೂ ಸುಖವಾಗಿದ್ದಾರೆ. ಅದೇ ನಮ್ಮ ಭಾಗದ ಹಳ್ಳಿಗಳಲ್ಲಿ ಯಾವ ಅನುಕೂಲವು ಇಲ್ಲ.

1739-13

ರಸ್ತೆಗಳು ಸರಿಯಿಲ್ಲದ ಕಾರಣ ಗರ್ಭಿಣಿಯರು ಹೇಗೆ ಆಸ್ಪತ್ರೆಗೆ ಹೋಗಲು ಸಾಧ್ಯವಾಗುತ್ತಿಲ್ಲ. ಏನಾದರೂ ಹೋದರೆ ಗರ್ಭಪಾತವಾಗುತ್ತದೆ. ಆದಕಾರಣ ಗರ್ಭಿಣಿಯವರು ಆಸ್ಪತ್ರೆಗಳಿಗೆ ಹೋಗುವುದಿಲ್ಲ. ಅತ್ಯಂತ ಹಿಂದುಳಿದಿರತಕ್ಕಂಥ ನಮ್ಮ ಭಾಗದ ಹಳ್ಳಿಗಳಲ್ಲಿ ವಾಸಮಾಡುತ್ತಿರುವ ಬಡವರು ಕೂಲಿಗಾರರು ಮತ್ತು ಹೆಣ್ಣು ಮಕ್ಕಳು ಒಂದು ಹಳ್ಳಿಯಲ್ಲಿ ವಾಸ ಮಾಡುತ್ತಿರುವ ಬಡವರು ಕೂಲಿಗಾರರು ಮತ್ತು ಹೆಣ್ಣು ಮಕ್ಕಳು ಇನ್ನೊಂದು ಹಳ್ಳಿಗೆ ಹೋಗಲು ಸರಿಯಾದಂಥ ರಸ್ತೆಗಳಿಲ್ಲ ಬಸ್ ಸೌಕರ್ಯವಿಲ್ಲ ಹಳ್ಳಿಗಳಿಂದ ಆಸ್ಪತ್ರೆಗೆ ಇರುವ ಸ್ಥಳಕ್ಕೆ ಹೋಗಲು 20–30 ಮೈಲಿ ದೂರವಾಗುತ್ತದೆ. ಹತ್ತಿರದಲ್ಲಿ ಆಸ್ಪತ್ರೆ ಸೌಕರ್ಯವಿಲ್ಲ ದೂರದಲ್ಲಿರುವ ಆಸ್ಪತ್ರೆಗಳಿಗೆ ಹೋಗಲು ರಸ್ತೆ ಸೌಕರ್ಯವಿಲ್ಲ ಇದನ್ನೆಲ್ಲಾ ಸರ್ಕಾರದವರು ಸರಿಪಡಿಸಬೇಕು. ಇದಕ್ಕೆಲ್ಲಾ ಹಣವಿಲ್ಲ ಎಂದು ಹೇಳುವುದು ಸರಿಯಲ್ಲ. ಮಂತ್ರಿಗಳ ಟೂರ್ ಪ್ರೋಗ್ರಾಮ್ ಗೆ ದುಡ್ಡು ಇರುತ್ತದೆ. ಆದರೆ ಇದಕ್ಕೆ ದುಡ್ಡು ಇರುವುದಿಲ್ಲವೇನು?

**ಉಪಾಧ್ಯಕ್ಷರು** – ತಾವು ಜನರಲ ಆಗಿ ಹೇಳುವುದು ಬೇಡ, ನಿರ್ದಿಷ್ಟವಾಗಿ ಹೇಳಿ.

**ಶ್ರೀ ಬಿ. ಪುಟ್ಟಸ್ವಾಮಯ್ಯ** – ಆ ಭಾಗದಲ್ಲಿ ಸರಿಯಾದ ರಸ್ತೆ ಸೌಕರ್ಯವಿಲ್ಲದ ಕಾರಣ ಗರ್ಭಿಣಿಯರು ಆಸ್ಪತ್ರೆಗೆ ಹೋಗಲು ಸಾಧ್ಯವಾಗುತ್ತಿಲ್ಲ, ಆದಕಾರಣ ಶಿಶು ಹತ್ಯೆಗೆ ಈ ಸರ್ಕಾರವೇ ಕಾರಣವೆಂದು ಅವರು ಹೇಳುತ್ತಿದ್ದಾರೆ.

**ಶ್ರೀ ಎಸ್.ವೈ. ಪಾಟೀಲ** – ಮುಖ್ಯವಾಗಿ ಬೇರೆ ಹೆಡ್‌ನಿಂದ ಹಣವನ್ನು ಒದಗಿಸಿಯಾದರೂ ರಸ್ತೆಗಳನ್ನು ರಿಪೇರಿ ಮಾಡಿಸಬೇಕು. ರಸ್ತೆಗಳು ಸರಿಯಿಲ್ಲದ ಕಾರಣ, 15 ದಿವಸಗಳ ಕೆಳಗೆ ಕೊಂಡಗೊಳಿ ರಸ್ತೆ ಬಳಿ ಒಂದು ಕೆ.ಎಸ್.ಆರ್.ಟಿ.ಸಿ. ಬಸ್ ನಡುಹಳ್ಳದಲ್ಲಿ 6 ತಾಸುಗಳ ಕಾಲ ಸಿಕ್ಕಿ ಹಾಕಿಕೊಂಡಿತ್ತು. ಆ ಬಸ್‌ನಲ್ಲಿ ನಾನು ಸಹ ಇದ್ದೆ. ತೆರಿಗೆ ಹಾಕಿಯಾದರೂ ಈ ರಸ್ತೆಗಳನ್ನೆಲ್ಲಾ ರಿಪೇರಿ ಮಾಡಿಸಬೇಕು. ಪೆಟ್ರೋಲ ಇಲ್ಲದೆ ಕಾರು ಹೇಗೆ ಓಡುವುದಿಲ್ಲವೋ ಹಾಗೆಯೇ ಟ್ಯಾಕ್ಸ್ ಹಾಕದೆ ಸರ್ಕಾರಕ್ಕೆ ಹಣ ಬರುವುದಿಲ್ಲ. ಬಜೆಟ್ಟಿನಲ್ಲಿ ನಮ್ಮ ಭಾಗದ ರಸ್ತೆಗಳನ್ನು ರಿಪೇರಿ ಮಾಡಿಸಿಕೊಡಬೇಕೆಂದು ಕೇಳಿಕೊಳ್ಳುತ್ತೇನೆ.

ಇನ್ನು ಇರಿಗೇಷನ್ ಬಗ್ಗೆ ಹೇಳಬೇಕೆಂದರೆ ಅಪ್ಪರ್ ಕೃಷ್ಣಾ ಯೋಜನೆಯ ಕೆಲಸ 1985 ರಲ್ಲಿ ಮುಗಿಯುವ ಕಾರಣ ಕಾಲುವೆ ಕೆಲಸ ಬಂದು ಮಾಡುವ ವಿಚಾರ ನಡೆದಿದೆ. ಆದ್ದರಿಂದ ಯಂಕಂಚಿಯ ಕೆಲಸವನ್ನು ತೀವ್ರವಾಗಿ ತೆಗೆದುಕೊಂಡು ಮುಗಿಸಬೇಕು ಮತ್ತು ಸಮಾಜದಲ್ಲಿ ಹಿಂದುಳಿದವರು, ಮತ್ತು ಮುಂದುವರೆದವರು ಎಂದು ಹೇಗೆ ಇರುತ್ತಾರೋ ಅದೇ ರೀತಿ ಜಿಲ್ಲೆಗಳ ಪೈಕಿಯೂ ಹಿಂದುಳಿದ ಜಿಲ್ಲೆ ಮತ್ತು ಮುಂದುವರೆದ ಜಿಲ್ಲೆ ಎಂಬುದಾಗಿ ನಮ್ಮ ರಾಜ್ಯದಲ್ಲಿವೆ. ಹಾಸನ ಜಿಲ್ಲೆಯನ್ನು ನೋಡಿದರೆ ನಾನೇಕೆ ಅಲ್ಲಿ ಹುಟ್ಟಲಿಲ್ಲ, ಬಿಜಾಪುರದಲ್ಲಿ ಏತಕ್ಕೆ ಹುಟ್ಟಿದೆ ಎಂದು ಅನಿಸುತ್ತದೆ. ಈ ದೃಷ್ಟಿಯಿಂದಲಾದರೂ ಸರ್ಕಾರದವರು ನಿಧಾನ ಮಾಡದೆ ಯಂಕಂಚಿ ಟ್ಯಾಂಕ್ ಕೆಲಸವನ್ನು ಒಂದು ಒಂದು ವರ್ಷದಲ್ಲೇ ಮುಗಿಸಬೇಕು. ಇಲ್ಲಿ ಹೊಸ ಮೈಸೂರು, ಹಳೆಯ ಮೈಸೂರು ಎಂಬ ಪ್ರಶ್ನೆ ಇಲ್ಲ. ನೀವು ಹಿಡಿದು ಏನು ಮಾಡುತ್ತೀರಿ? ನೀರಾವರಿ ಸೌಕರ್ಯವನ್ನು ಮೊದಲು ಮಾಡಿಕೊಡಿ, ಚಾಂದಕವಟೆ ಬ್ರಿಡ್ಜ್ ಕೆಲಸವನ್ನು ಮಾಡಿ ಮುಗಿಸಿ,

ಇಲ್ಲವೇ ತಮ್ಮ ಇಲಾಖೆಯ ಮೂಲಕವಾದರೂ ಮಾಡಿ ಮುಗಿಸಬೇಕು, ಇದು 7 ಲಕ್ಷ ರೂ.ಗಳ ಯೋಜನೆಯಾಗಿದೆ. ತಮ್ಮ ಕಾರ್ಪೋರೇಷನ್ ಮೂಲಕವಾದರೂ ಮಾಡಿ ಮುಗಿಸಬೇಕೆಂದು ಹೇಳುತ್ತೇನೆ. ಮುಖ್ಯವಾಗಿ ರಸ್ತೆಗಳ ಮತ್ತು ಸೇತುವೆಗಳ ಕೆಲಸ ಆಗಬೇಕು. ಇದಕ್ಕೆ ಹಣವನ್ನು ಯಾವ ರೀತಿ ಒದಗಿಸಿಕೊಳ್ಳಬೇಕೆಂಬುದನ್ನು ಸರ್ಕಾರದವರೇ ವಿಚಾರ ಮಾಡಿ ಒಂದು ಕಾರ್ಯಕ್ರಮವನ್ನು ಹಾಕಿಕೊಳ್ಳುವುದರ ಮೂಲಕ ಅದರಂತೆ ಮಾಡಿಸಬೇಕು. ನಮ್ಮಲ್ಲಿ ಕೆಲವು ಭಾಗಗಳಿಗೆ ಹೋಗಲು ಬಳಸಿಕೊಂಡು ಹೋಗಬೇಕಾಗಿದೆ. ಉದಾಹರಣೆಗೆ ಸಿಂದಗಿ ತಾಲ್ಲೂಕಿನ ಹಿಟ್ನಳ್ಳಿಗೆ ವಾಯಾ ದೇವರ ಹಿಪ್ಪರಗಿ ಮೂಲಕ ಹೋದರೆ ಮೈಲಿಗಟ್ಟಲೆ ದೂರ ಆಗುತ್ತದೆ ಜಂಬಗಿ ರಸ್ತೆಯಿಂದ ಹೋದರೆ ಕೇವಲ ಹದಿನಾಲ್ಕುವರೆ ಮೈಲಿ ಆಗುತ್ತದೆ. ಆದರೆ ಆ ರಸ್ತೆ ಸರಿಯಿಲ್ಲ. ಇಂತಹ ಎಷ್ಟೋ ಉದಾಹರಣೆಗಳಿವೆ. ಜಲಪುರ, ಮುರಡಿ ಮುಂತಾದ ಹಳ್ಳಿಗಳಿಗೆ ಹೋಗಲು ಸರಿಯಾದ ರಸ್ತೆಗಳಿಲ್ಲ, ಅಂದರೆ ಇವು ಭಾರತ ದೇಶದಲ್ಲಿವೆಯೋ ಅಥವಾ ಪಾಕಿಸ್ತಾನದಲ್ಲಿವೆಯೋ ಗೊತ್ತಿಲ್ಲ. ಅರ್ಬನ್ ಏರಿಯಾದೊಳಗೆ ಎಲ್ಲ ಅನುಕೂಲಗಳೂ ಇವೆ. ಜನರು ದೊಡ್ಡ ದೊಡ್ಡ ಬಂಗಲೆಗಳಲ್ಲಿ ಸುಖವಾಗಿ ಜೀವನ ಮಾಡುತ್ತಿರುವುದನ್ನು ನಾನು ನೋಡಿದ್ದೇನೆ ಆದೇ ಸಣ್ಣ ಸಣ್ಣ ಹಳ್ಳಿಗಳಲ್ಲಿ ವಾಸ ಮಾಡುತ್ತಿರುವ ಹಳ್ಳಿ ಜನರಿಗೆ ಓಡಾಡಲು ಒಳ್ಳೆಯ ರಸ್ತೆಗಳಿಲ್ಲ.

ಇವೊತ್ತು ನಾನು ಮೇಜರ್ ಇರಿಗೇಷನ್ ಬಗ್ಗೆ ಮಾತನಾಡುವ ಸಂದರ್ಭದಲ್ಲಿ ಮಾನ್ಯ ಅಧ್ಯಕ್ಷರು ಗಂಟೆ ಹೊಡೆಯುತ್ತಿದ್ದಾರೆ. ಅದ್ದಕಾಗಿ ನಾನು ಇನ್ನು ಮೈನರ್ ಇರಿಗೇಷನ್ ಬಗ್ಗೆ ಮಾತನಾಡುತ್ತೇನೆ. ಎಲ್ಲಿಯಾದರೂ ಸಾಲ ಮಾಡಿದರೂ ಚಿಂತೆ ಇಲ್ಲ 300–400 ಕೋಟಿ ರೂಪಾಯಿಗಳನ್ನು ಖರ್ಚು ಮಾಡಿ ನಮ್ಮ ತಾಲ್ಲೂಕಿನಲ್ಲಿ ಮೈನರ್ ಇರಿಗೇಷನ್ ಕೆಲಸ ಕಾರ್ಯಗಳನ್ನು ಮಾಡಿಕೊಡಬೇಕೆಂದು ನಾನು ವಿನಂತಿ ಮಾಡಿಕೊಳ್ಳುತ್ತೇನೆ. ಈ ಸರ್ಕಾರಕ್ಕೆ ನಾವು ಜರ್ಮನಿ ಭಾಷೆಯಲ್ಲಿ ಹೇಳಬೇಕೋ, ಕನ್ನಡ ಭಾಷೆಯಲ್ಲಿ ಹೇಳಬೇಕೋ ಅಥವಾ ಇನ್ನು ಯಾವ ಭಾಷೆಯಲ್ಲಿ ಹೇಳಬೇಕೋ ನನಗಂತೂ ಅರ್ಥವಾಗುವುದಿಲ್ಲ. ಇವರಿಗೆ ಹೃದಯ ಇಲ್ಲವೆ? ಶ್ರೀಮಾನ್ ಮಲ್ಲಿಕಾರ್ಜುನ ಸ್ವಾಮಿಯವರು ದೇವರೇ ಇರಬಹುದು. ಈ ದೇವರನ್ನು ತೆಗೆದುಕೊಂಡು ನಾವು ಏನು ಮಾಡೋಣ. ಇವರು ನಮ ಕಷ್ಟಗಳನ್ನು ಬಗೆಹರಿಸುವುದಕ್ಕೆ ಪ್ರಯತ್ನ ಮಾಡಲಿ, ಇವರನ್ನು ಬೇಕಾದರೆ ತಲೆಯ ಮೇಲೆ ಹೊತ್ತು ಕೊಂಡು ಪೂಜೆ ಮಾಡುತ್ತೇವೆ. ನಾನು ಅತ್ಯಂತ ವಿನಯದಿಂದ ಪ್ರಾರ್ಥನೆ ಮಾಡುತ್ತೇನೆ. ನಮ್ಮ ಬಿಜಾಪುರ ಜಿಲ್ಲೆ ಬರಗಾಲಕ್ಕೆ ಹೆಸರು ವಾಸಿಯಾದ ಜಿಲ್ಲೆ. ಆದ್ದರಿಂದ ನಮ್ಮ ಬಿಜಾಪ್ರುರ ಜಿಲ್ಲೆಯಲ್ಲಿ ಯಾವ ಯಾವ ಮೈನರ್ ಇರಿಗೇಷನ್ ಕೆಲಸಗಳನ್ನು ತೆಗೆದುಕೊಳ್ಳವುದಕ್ಕೆ ಸಾಧ್ಯವಿದೆ, ಯಾವ ಯಾವ ಲಿಫ್ಟ್ ಇರಿಗೇಷನ್ ಕೆಲಸಗಳನ್ನು ತೆಗೆದುಕೊಳ್ಳುವುದಕ್ಕೆ ಸಾಧ್ಯವಿದೆ, ಅವೆಲ್ಲವನ್ನೂ ಕೂಡಲೇ ತೆಗೆದುಕೊಂಡು ನಮ್ಮ ಬಿಜಾಪುರ ಜಿಲ್ಲೆಯ ರೈತರಿಗೆ, ನಮ್ಮ ಸಿಂದಗಿ ತಾಲ್ಲೂಕಿನ ರೈತರಿಗೆ ನೀರಾವರಿ ಸೌಲಭ್ಯವನ್ನು ಒದಗಿಸಿಕೊಡಬೇಕೆಂದು ನಾನು ವಿನಂತಿ ಮಾಡಿಕೊಳ್ಳುತ್ತೇನೆ. ನಮ್ಮ ಜಿಲ್ಲೆ 100ಕ್ಕೆ 80 ರಷ್ಟು ಜನ ಬಡವರು ಇರತಕ್ಕ ಪ್ರದೇಶ. ಅವರಿಗೆ ಸಾಕಷ್ಟು ಸೌಲಭ್ಯಗಳು ಇಲ್ಲ. ಆದ್ದರಿಂದ ಅವರಿಗೆ ನೀರಾವರಿ ಸೌಲಭ್ಯವನ್ನು ಒದಗಿಸಿಕೊಡುವರ ಜೊತೆಗೆ ಒಂದು ಕಡೆಯಿಂದ ಮತ್ತೊಂದು ಕಡೆಗೆ ಜನಗಳು

ಸಂಚಾರ ಮಾಡುವುದಕ್ಕೆ ಸರಿಯಾದ ರಸ್ತೆಗಳನ್ನು ಮಾಡಿಸಿಕೊಡಬೇಕು ಬಿಟ್ಟನಹಳ್ಳಿ, ಜಲಪುರ ಸಿಂದಗಿ ವಯಾ ದೇವರ ಹಿಪ್ಪರಗಿ ಈ ರಸ್ತೆಗಳನ್ನು ಮಾಡಿಸಿಕೊಡಬೇಕು. ನಮ್ಮ ಸಿಂದಗಿ ತಾಲ್ಲೂಕಿನಲ್ಲಿ ನಾದುರಸ್ತಾಗಿರತಕ್ಕ ರಸ್ತೆ ರಿಪೇರಿ ಕೆಲಸವನ್ನು ಮಾಡಿಕೊಡಬೇಕೆಂದು ನಾನು ವಿನಂತಿ ಮಾಡಿಕೊಳ್ಳುತ್ತೇನೆ. ನಾನು ಅಧ್ಯಕ್ಷರ ಮುಖಾಂತರ ಸರ್ಕಾರದವರನ್ನು ಪ್ರಾರ್ಥನೆ ಮಾಡಿಕೊಳ್ಳುವುದೇನೆಂದರೆ ಜನರನ್ನು ಗೋಳಾಡಿಸುವುದಕ್ಕೆ ಹೋಗಬೇಡಿ, ರಸ್ತೆಗಳನ್ನು ದುರಸ್ತಿ ಮಾಡುವ ಬಗ್ಗೆ ಮೈನರ್ ಇರಿಗೇಷನ್ ಕೆಲಸಕಾರ್ಯಗಳನ್ನು ಮಾಡಿಸಿಕೊಡುವ ಬಗ್ಗೆ, ಒಂದು ಕೋಟಿ ರೂಪಾಯಿಗಳನ್ನು ಖರ್ಚು ಮಾಡಿ ಈ ಕೆಲಸವನ್ನು ಮಾಡಿಸಿಕೊಟ್ಟು ಜನತೆಯ ಕಲ್ಯಾಣದ ಸಾಧನೆ ಮಾಡಿಕೊಡಿ. ಮಾನ್ಯ ಶ್ರೀ ದೇವೇಗೌಡರು ಲಂಚದ ಬಗ್ಗೆ ಮಾತನಾಡಿದ್ದಾರೆ. ಕಳೆದ 30 ವರ್ಷದಲ್ಲಿ ಲಂಚದ ಹಾವಳಿ ಹೆಚ್ಚಾಗಿದೆ, ಲಂಚದ ವ್ಯವಹಾರ ಇಂದು ಕ್ರಮಬದ್ಧ ಕಾರ್ಯವಾಗಿದೆ. ಆ ಬಗ್ಗೆ ದೂಷಿಸುವುದು ವ್ಯರ್ಥ.

**ನಮ್ಮ ಸಿಂದಗಿ ತಾಲ್ಲೂಕಿನಲ್ಲಿ –**

1. ಆಲಮೇಲ– ದೇವಣಗಾಂವ
2. ಸಿಂದಗಿ – ಆಸ್ಕಿ
3. ಬೇವಿ ಇಂಗಳಗಿ – ಕಲಕೇರಿ ಮತ್ತು ಕೆಸರಟ್ಟಿ
4. ದೇವರ ಹಿಪ್ಪರಗಿ – ತಾಳಿಕೋಟಿ
5. ಗಬಸಾವಳಗಿ – ಗೊರವಗುಂಡಗಿ
6. ಮನ್ನಾಪುರ – ದನೂರ
7. ಕನ್ನೊಳ್ಳಿ – ಕೊಂಡಗೂಳಿ
8. ಜೇವೂರ – ಬಿಮ್ಮ ದೋವನಮಡು
9. ಯಂಕಂಚಿ – ಸುಂಗಠಾಣ ಮತ್ತು ಬೈನೂರ
10. ಚಾಂದಕವಟೆ – ವರನಾಳ

ಇತ್ಯಾದಿ ಯಾವ ರಸ್ತೆಗಳು ಚೆನ್ನಾಗಿಲ್ಲ ಜಲಪುರ, ಮುರಡಿ, ನೀರಲಗಿ, ಪುರದಾಳ, ಗತ್ತರಗಿ ಇತ್ಯಾದಿ ಸಣ್ಣ ಊರುಗಳಿಗೆ ರಸ್ತೆ ಇಲ್ಲದ ಮೂಲಕ ಬಸ್ಸಿನ ಅನುಕೂಲತೆ ಇಲ್ಲ, ಹಿಂದುಳಿದ ಯಾವ ತಾಂಡಾಗಳಿಗೂ ರಸ್ತೆ ಇಲ್ಲ. ಬೂದಿಹಾಳದಿಂದ ಬಂದಾಳದವರೆಗೆ ಬಂದ ರಸ್ತೆ ತಾಲ್ಲೂಕು ಸ್ಥಳವಾದ ಸಿಂದಗಿವರೆಗೆ ಬಂದಿಲ್ಲ. ಹಿಪ್ಪರಗಿ, ತಾಳಿಕೋಟಿ ರಸ್ತೆ ಬೆಂಗಳೂರು ಹಾದಿಯಲ್ಲಿರುವ ರಸ್ತೆ ಡಾಂಬರ ರಸ್ತೆ ಆಗಿಲ್ಲ.

ನನ್ನ ತಾಲ್ಲೂಕಿನಲ್ಲಿ ವಂದಾಲ, ಹೊನ್ನಳ್ಳಿ, ಸೈಟ್ಟ ಬಿಟ್ಟಳ್ಳಿಹಳ್ಳ ಚಟ್ಟರಕಿ ಇತ್ಯಾದಿ ಹಳ್ಳಗಳಿಗೆ ಬ್ರಿಡ್ಜ್ ಆಗಬೇಕು. 15 ವರ್ಷಗಳಿಂದ ಅಲಕ್ಷ್ಯ ಮಾಡಿದ ಚಂದಕವಟೆ ಬ್ರಿಡ್ಜ್ ಈ ವರ್ಷ ಆಗಬೇಕು. ಯಂಕಂಚಿ ಕೆರೆ ವಿಷಯ ಮರೆಬಾರದು. ಚಾಂದಕವಟೆ ಬ್ರಿಡ್ಜ್ ಮತ್ತು ಯಂಕಂಚಿ ಕೆರೆ ಮಾಡದಿದ್ದರೆ ನಾನು ಕೇಳುವುದಿಲ್ಲ. ಡಂಬಳ ಕಲಕೇರಿ ರಸ್ತೆ ಸರಿ ಇರದ್ದರಿಂದ 40 ಹಳ್ಳಿಗಳ ಜನರಿಗೆ ಬಸ್ಸಿನ ಸೌಕರ್ಯ ಇಲ್ಲ.

ಮಾನ್ಯ ಶ್ರೀ ಮಲ್ಲಿಕಾರ್ಜುನ ಸ್ವಾಮಿಯವರು ಒಳ್ಳೆಯವರು ಮತ್ತು ನನ್ನ ಪರಮಮಿತ್ರರು. ಈ ಅಸೆಂಬ್ಲಿ ಮುಗಿದಕೂಡಲೇ ಸಿಂದಗಿ ತಾಲ್ಲೂಕಕ್ಕೆ ಆಗಮಿಸಿ ಎಲ್ಲ ರಸ್ತೆಗಳನ್ನು ಅವಲೋಕಿಸಿ ರಸ್ತೆಗಳನ್ನು ದುರಸ್ತಿ ಮಾಡಿಸಿಕೊಡಬೇಕು.

ಹಣಪಿಲ್ಲವೆಂಬ ಕುಂಟುನೆವ ಹೇಳಬಾರದು, ದಯಮಾಡಿ ತೀವ್ರವೇ ಸಿಂದಗಿ ತಾಲ್ಲೂಕು ಸಂದರ್ಶಿಸಬೇಕೆಂದು ಶ್ರೀ ಮಲ್ಲಿಕಾರ್ಜುನ ಸ್ವಾಮಿಗಳಿಗೆ ಪ್ರಾರ್ಥಿಸಿ, ಅಧ್ಯಕ್ಷರಿಗೆ ವಂದಿಸಿ ನನ್ನ ಮಾತು ಮುಗಿಸುವೆನು.

## ಆಯವ್ಯಯದ ಮೇಲಿನ ಭಾಷಣ

5ನೇ ಜುಲೈ 1977

**ಶ್ರೀ ಎಸ್.ವೈ. ಪಾಟೀಲ** (ಸಿಂದಗಿ) – ಮಾನ್ಯ ಉಪಾಧ್ಯಕ್ಷರೇ ಇವೊತ್ತು ಸರ್ಕಾರದವರು ಈ ಸಭೆಯ ಮುಂದಿಟ್ಟಿರತಕ್ಕ ಬೇಡಿಕೆಗಳು ಏನಿವೆ ಬಹಳ ಇವೆ. ಆದಕಾರಣ ಸಮಯದ ಅಭಾವ ಇರುವುದರಿಂದ ಅಡ್ಮಿನಿಸ್ಟ್ರೇಷನ್ ಬಗ್ಗೆ ಬಹಳ ಮುಖ್ಯವಾದ ವಿಷಯಗಳನ್ನು ಮಾತ್ರ ನಾನು ಮಾತನಾಡುವುದಕ್ಕೆ ಅಪೇಕ್ಷಪಡುತ್ತೇನೆ. ರಾಜ್ಯದ ಆಡಳಿತದಲ್ಲಿ ಪರ್ಸೆಂಟೇಜ್ ಪ್ರಕಾರ ಹಿಂದುಳಿದವರು ಮತ್ತು ಮುಂದುವರಿದವರೂ ಇರಬೇಕು. ಈ ವಿಚಾರವನ್ನು ತುಲನಾತ್ಮಕ ದೃಷ್ಟಿಯಿಂದ ಪರಿಶೀಲನೆ ಮಾಡಬೇಕು. ಹಿಂದೆ ಯಾರೋ ತಪ್ಪು ಮಾಡಿದ್ದಾರೆ. ಎನ್ನತಕ್ಕಂಥಾ ದೃಷ್ಟಿಯನ್ನು ಮುಂದೆ ಇಟ್ಟುಕೊಳ್ಳುವುದಕ್ಕಿಂತ ಸಮಾನ ದೃಷ್ಟಿಯಿಂದ ಎಲ್ಲರನ್ನೂ ನೋಡಬೇಕು. ಉಳ್ಳವರು ಮತ್ತು ಏನೂ ಇಲ್ಲದೇ ಇರುವವರು ಎಂದು ಎರಡು ಭಾಗ ಮಾಡಿ ಇದ್ದವರಿಗೆ ಎಂದರೆ ಉಳ್ಳವರಿಗೆ ಇಷ್ಟು, ಇಲ್ಲದೇ ಇರುವವರಿಗೆ ಇಷ್ಟು ಭಾಗ ಎಂದು ತಜ್ಞರೊಡನೆ ಸಮಾಲೋಚನೆ ಮಾಡಿ ಸರ್ವರಿಗೂ ಸಮನಾಗಿ ಸವಲತ್ತುಗಳು ಸಿಕ್ಕುವಂತೆ ವ್ಯವಸ್ಥೆ ಮಾಡಬೇಕು. ಹಾವನೂರು ಕಮಿಟಿಯವರ ರಿಪೋರ್ಟ್ ಇರಲಿ, ಮತ್ತೆ ಯಾವುದೇ ಇರಲಿ, ತಪ್ಪು ಇದ್ದರೆ ಸರಿಮಾಡೋಣ. ಈ ದೃಷ್ಟಿಯಿಂದ ಸ್ಪಷ್ಟವಾದ ರೀತಿಯಿಂದ ಇದ್ದವರು ಮತ್ತು ಇಲ್ಲದೇ ಇರುವವರು ಎಂದು ಎರಡು ಭಾಗ ಮಾಡಿಕೊಂಡು ಅವರು ಯಾವ ಜಾತಿಯವವರೇ ಆಗಲೀ ಯಾವ ಕೋಮಿನವರೇ ಆಗಲೀ ನಾನು ಹೇಳಿದ ಹಾಗೆ ಎರಡು ಭಾಗ ಮಾಡಿ ಎಲ್ಲರಿಗೂ ಸಮನಾದ ಸವಲತ್ತುಗಳು ಸಿಕ್ಕುವ ಹಾಗೆ ವ್ಯವಸ್ಥೆ ಮಾಡಬೇಕು ಎಂದು ನಾನು ಈ ಸದನದಲ್ಲಿ ನಮ್ರತೆಯಿಂದ ಸರ್ಕಾರಕ್ಕೆ ಸೂಚಿಸಬಯಸುತ್ತೇನೆ.

ಇನ್ನೊಂದು ವಿಷಯವೇನೆಂದರೆ ಹಳ್ಳಿಗಾಡಿನವರಿಗೂ ಪಟ್ಟಣದವರಿಗೂ ವಿದ್ಯಾ ಯೋಗ್ಯತೆಯ ಬಗ್ಗೆ ಅಂತರ ಇದೆ. ಗ್ರಾಮಾಂತರ ಪ್ರದೇಶಗಳಲ್ಲಿ ಶೀರ ಬಡವರಿದ್ದಾರೆ. ಅಲ್ಲಿ ಅವರಿಗೆ ಸಾಕಷ್ಟು ಸೌಲಭ್ಯಗಳಿಲ್ಲ. ಪಟ್ಟಣಗಳಲ್ಲಿ ಮಕ್ಕಳಿಗೆ ಸಿಕ್ಕತಕ್ಕಂಥಾ ಶಿಕ್ಷಣಕ್ಕೂ ಗ್ರಾಮಾಂತರ ಪ್ರದೇಶದ ಮಕ್ಕಳಿಗೆ ಸಿಕ್ಕತಕ್ಕಂಥಾ ಶಿಕ್ಷಣಕ್ಕೂ ಬಹಳ ವ್ಯತ್ಯಾಸ ಇದೆ. ಗ್ರಾಮಾಂತರ ಪ್ರದೇಶದಲ್ಲಿತಕ್ಕ ಮಕ್ಕಳಿಗೆ ಷಹರಗಳಲ್ಲಿರತಕ್ಕ ಮಕ್ಕಳಿಗೆ ಸಿಕ್ಕುವಂತಹ ಉತ್ತಮವಾದ ಶಿಕ್ಷಣ ಸಿಕ್ಕುವುದಿಲ್ಲ. ಆದ್ದರಿಂದ

ಯಾವುದೇ ಒಂದು ಹೈಯರ್ ಎಜುಕೇಷನ್ನಿಗೆ ಸೀಟು ತೆಗೆದುಕೊಳ್ಳುವ ವಿಷಯದಲ್ಲಾಗಲಿ ಯಾವುದೇ ಒಂದು ಕೆಲಸಕ್ಕೆ ಸೇರುವಾಗ ಇಂಟರ್‌ವ್ಯೂ ನಲ್ಲಿಯಾಗಲೀ ಪರ್ಸೆಂಟೇಜ್ ಆಫ್ ಮಾರ್ಕ್ಸ್ ಜಾಸ್ತಿ ಬರುವುದಿಲ್ಲ. ಆದ್ದರಿಂದ ಗ್ರಾಮಾಂತರ ಪ್ರದೇಶದ ಮಕ್ಕಳಿಗೆ ಪರ್ಸೆಂಟೇಜ್ ಆಫ್ ಮಾರ್ಕ್ಸ್ ಕಡಿಮೆ ಬಂದಿದ್ದರೂ ಕೂಡ ಅವರಿಗೆ ಮುಂದಿನ ವಿದ್ಯಾಭ್ಯಾಸಕ್ಕೆ ಕಾಲೇಜುಗಳಲ್ಲಿ ಸೀಟು ಕೊಡುವ ವಿಷಯಕ್ಕಾಗಲೀ ಕೆಲಸಕ್ಕೆ ಸೇರುವ ಸಂದರ್ಭದಲ್ಲಾಗಲೀ ಪರ್ಸೆಂಟ್ ಆಫ್ ಮಾರ್ಕ್ಸ್ ಹಳ್ಳಿಯ ಮಕ್ಕಳಿಗೆ ಕಡಿಮೆ ಇದ್ದರೂ ಸಹ ಅವರಿಗೆ ಅವಕಾಶವನ್ನು ಕೊಡಬೇಕು ಎಂದು ನಾನು ಬಹಳ ನಮ್ರತೆಯಿಂದ ಅಧ್ಯಕ್ಷರ ಮುಖಾಂತರ ಸರ್ಕಾರಕ್ಕೆ ವಿನಂತಿ ಮಾಡಿಕೊಳ್ಳುತ್ತೇನೆ.

ಇನ್ನು ಜೈಲು ಬಗ್ಗೆ ಒಂದೆರಡು ಮಾತುಗಳನ್ನು ಹೇಳುವುದಕ್ಕೆ ಇಚ್ಛೆ ಪಡುತ್ತೇನೆ. ಜೈಲುಗಳನ್ನು ಸುಧಾರಿಸಬೇಕಾದರೆ ಮಾನ್ಯ ಮುಖ್ಯಮಂತ್ರಿಗಳು ಜೈಲಿನಲ್ಲಿ 3 ದಿವಸ ಕ್ಯಾಂಪು ಮಾಡಿ ಇದ್ದು, ಜೈಲುಗಳನ್ನು ವಿಲೇವಾರಿ ಮಾಡಿದರೆ ಅಲ್ಲಿನ ಸ್ಥಿತಿಯನ್ನು ಅರಿತುಕೊಂಡು ಜೈಲನ್ನು ಸುಧಾರಿಸಬಹುದು ಎಂದು ನಾನು ಸೂಚಿಸಬಯಸುತ್ತೇನೆ.

ಈಗ ಈ ಸದನದಲ್ಲಿ ಅನೇಕರು ಅಧಿಕಾರಿಗಳು ಸರಿಯಾಗಿ ಕೆಲಸ ಮಾಡುವುದಿಲ್ಲ ಎಂದು ಟೀಕೆ ಮಾಡುತ್ತಾರೆ. ಆದರೆ ಆ ಅಧಿಕಾರಿಗಳಿಂದ ತೊಂದರೆಯೇನು ಎಂಬುದನ್ನು ವಿಚಾರ ಮಾಡುವುದಿಲ್ಲ. ನಮ್ಮ ಅಧಿಕಾರಿಗಳಿಗೆ ಬಹಳ ಇಂಟರ್‌ಫಿಯರೆನ್ಸ್ ಇದೆ ಎಂದು ನಾನು ಸ್ಪಷ್ಟವಾಗಿ ಮಾನ್ಯ ಮುಖ್ಯಮಂತ್ರಿಗಳಿಗೆ ತಿಳಿಸಬಯಸುತ್ತೇನೆ. ಇದರಿಂದಾಗಿ ಅವರು ಹೆಲ್ಪ್‌ಲೆಸ್ ಆಗಿದ್ದಾರೆ. ಅಧಿಕಾರಿಗಳಿಗೆ ಯಾವ ಸ್ವತಂತ್ರವಾದ ವ್ಯಕ್ತಿತ್ವವೂ ಉಳಿದಿಲ್ಲ ಡಿವಿಜನಲ್ ಕಮಿಷನರಾಗಲೀ ಡೆಪ್ಯುಟಿ ಕಮಿಷನರಾಗಲೀ ತಹಶೀಲದಾರರಾಗಲಿ ನಮ್ಮಲ್ಲಿ ಮ್ಯಾಗ್ಸಿಮಮ್ ಇಂಟರ್‌ಫಿಯರೆನ್ಸ್ ಆಗಿದೆ. ಆದ್ದರಿಂದ ಇಂಟರ್‌ಫಿಯರೆನ್ಸ್ ಕಡಿಮೆ ಮಾಡುವುದಕ್ಕೆ ಪ್ರಯತ್ನ ಮಾಡಬೇಕು ಎಂದು ನಾನು ಸ್ಪಷ್ಟವಾಗಿ ಹೇಳಬಯಸುತ್ತೇನೆ.

ನಮಗೆ ಸ್ವಾತಂತ್ರ್ಯ ಬಂದು 30 ವರ್ಷಗಳಾಗಿದ್ದರೂ ಕೂಡ ನಮ್ಮ ಸ್ವತಂತ್ರ ಭಾರತದಲ್ಲಿ ಮಹಾತ್ಮಾ ಗಾಂಧೀಜಿಯವರ ಫೋಟೋವನ್ನು ಎಲ್ಲಾ ಕಛೇರಿಗಳಲ್ಲಿ ಹಾಕಿಕೊಂಡು ಅವರ ಆದರ್ಶಗಳನ್ನು ಪರಿಪಾಲನೆ ಮಾಡುತ್ತೇವೆ ಎಂದು ಹೇಳುತ್ತಿದ್ದರೂ ಕೂಡ ಜನರ ಹೆಸರಿನಲ್ಲಿ ರಾಜ್ಯದ ಕಾರುಬಾರು ಮಾಡುತ್ತಿದ್ದರೂ ಕೂಡ ಈ ದೇಶದಲ್ಲಿ ನಾವು ಆಹಾರದ ಬಗ್ಗೆ ಪರಿಪೂರ್ಣರಾಗಿಲ್ಲ. ಇವೊತ್ತು ನಮ್ಮ ದೇಶದಲ್ಲಿ ಅನೇಕ ಜನ ಬಡವರು ಎರಡು ಹೊತ್ತಿನ ಊಟ ಸಿಕ್ಕದೆ ಪರಿತಪಿಸುತ್ತಿದ್ದಾರೆ. ನಮ್ಮ ಬಡತನದ ಬಗ್ಗೆ ನಮಗೆ ಹೇಳಿಕೊಳ್ಳುವದಕ್ಕೆ ಅವಮಾನವಾಗುತ್ತಿದೆ. ಆದಕ್ಕಾಗಿ ನಾನು ಬಹಳ ನಮ್ರತೆಯಿಂದ ವಿನಂತಿ ಮಾಡಿಕೊಳ್ಳುತ್ತೇನೆ. ನಮ್ಮ ರೈತರಿಗೆ ನೀರಾವರಿ ಸೌಲಭ್ಯವನ್ನು ಒದಗಿಸಿಕೊಡುವ ಬಗ್ಗೆ ಸಾಕಷ್ಟು ಪ್ರಯತ್ನ ಮಾಡಬೇಕು. ನಮ್ಮ ಮಾನ್ಯ ಮುಖ್ಯಮಂತ್ರಿಗಳಾಗಲೀ ಶ್ರೀಮತಿ ಇಂದಿರಾಗಾಂಧಿಯವರಾಗಲೀ ಶ್ರೀಮಾನ್ ಮೊರಾರ್ಜಿ ದೇಸಾಯಿಯವರಾಗಲೀ ಯಾರಾದರೂ ಆಗಲೀ ದೊಡ್ಡ ಮನಸ್ಸು ಮಾಡಿ ನಮಗೆ ನೀರಾವರಿ ಸೌಲಭ್ಯವನ್ನು ಒದಗಿಸುವ ಕಡೆ ಗಮನ ಕೊಡಬೇಕು ತುಂಗಭದ್ರ ಪಿಚಿಜಿಡಿ ಇಚ್ಛೆ ಮತ್ತು

ಖ್ಯಾಡಿ ಇಫೆಕ್ಟ್ ಗಳಿಗೆ 50 ಕೋಟಿ ಪೈಕಿ 45 ಕೋಟಿ ಖರ್ಚು ಮಾಡಿರುವಿರಿ. ಘಟಪ್ರಭಾ ಸ್ಟೇಜ್ 1–3 ಮುಗಿಯುತ್ತಾ ಬಂದಿದೆ. ಮಲಪ್ರಭಾ ಕಾಂಜುನಾ ಕಬಿನಿ, ಹಾರಂಗಿ ಮತ್ತು ಹೇಮಾವತಿ ಮುಗಿಯುತ್ತಾ ಬಂದಿವೆ. ಆದರೆ ಕೃಷ್ಣಾ ಯೋಜನೆಗೆ 300 ಕೋಟಿಯಲ್ಲಿ ಈಗ ಕೇವಲ 33 ಕೋಟಿ ಖರ್ಚು ಮಾಡಿರುವಿರಿ. ನಮಗೇಕೆ ಮಲತಾಯಿ ಧೋರಣೆ? ಕೃಷ್ಣಾ ಯೋಜನೆ 1985 ರಲ್ಲಿ ಮುಗಿಯುವ ಕಾರಣ ಕಾಲುವೆ ಕೆಲಸ ಬಂದು ಇಡುವ ಯೋಜನೆ ಮಾಡಹತ್ತಿರುವರು ಸರಕಾರದ ಅಂಕೆ–ಸಂಖ್ಯೆ ನೋಡಿದರೆ ಈ ಕೆಲಸ ಮುಗಿಯುವದೋ ಇಲ್ಲವೋ ಸಂಶಯ ಬರುವುದು. ಆಂದ್ರ ಪ್ರದೇಶದಲ್ಲಿ ನಾಗಾರ್ಜುನ ಸಾಗರ ಪ್ರಾಜೆಕ್ಟನ್ನು ತೆಗೆದುಕೊಂಡಾಗ ಅವರು ಉಳಿದ್ದೆಲ್ಲ ಕೆಲಸಗಳನ್ನು ಬಂದ್ ಮಾಡಿ ಆ ಕೆಲಸವನ್ನು ಜಾಗ್ರತೆ ಪೂರೈಸಿದರು. ನಮ್ಮ ಪ್ರಾಂತ್ಯ, ಮುಂಬಯಿ ಸರ್ಕಾರದಲ್ಲಿದ್ದಾಗ ಹಾಗೂ ಹೈದರಾಬಾದ್ ಸರ್ಕಾರದ ಕೈಯಲ್ಲಿದ್ದಾಗ ಇದೇ ಪ್ರಶ್ನೆ ಇತ್ತು. ಸಿಂದಗಿ ಮತ್ತು ಇಂಡಿ ಈ ಎರಡು ಪ್ರಾಂತ್ಯಗಳಲ್ಲಿ ಹರಿಜನ–ಗಿರಿಜನ ಹಾಗೂ ಲಂಬಾಣಿ ಜನಾಂಗಕ್ಕೆ ಸೇರಿದವರೇ ಜಾಸ್ತಿ ಇದ್ದಾರೆ. ಅವರಿಗೆ ಹೊಟ್ಟೆಗೆ ವ್ಯವಸ್ಥೆ ಮಾಡದಿದ್ದರೂ ಚಿಂತೆ ಇಲ್ಲ, ಮಾನ್ಯ ಉಪಾಧ್ಯಕ್ಷರು ಗಂಟೆ ಹೊಡೆಯುತ್ತಿದ್ದಾರೆ. ಆದರೆ ಎಂ.ಎಲ್.ಎ. ಆದ ನಾನು ಏನು ಮಾಡಬೇಕು? ಅಪ್ಪರ್ ಕೃಷ್ಣ ಆಗದಿದ್ದರೂ ಪರವಾಯಿಲ್ಲ. ಅಳಲಿಕ್ಕಾದರೂ ದಯಮಾಡಿ ಅವಕಾಶ ಮಾಡಿಕೊಡಿ. ನಮ್ಮ ಭಾಗದ ಜನಗಳ ಕಷ್ಟ ಸುಖಗಳನ್ನು ಹೇಳದಿದ್ದರೆ, ಶಾಸಕರಾದ ನಾವು 609 ರೂಪಾಯಿಗಳ ಪಗಾರವನ್ನು ತೆಗೆದುಕೊಂಡು ಏನು ಮಾಡಬೇಕು. ಕಳೆದ 5 ವರ್ಷಗಳಿಂದಲೂ ಇದೇ ಪ್ರಶ್ನೆಗಳನ್ನು ಹೇಳುತ್ತಲೇ ಬರುತ್ತಿದ್ದೇನೆ. ಸರ್ಕಾರದವರು ಆ ಅಂಕಿ ಅಂಶಗಳನ್ನು ನೋಡಿದರೆ ಈ ಪ್ರಾಜೆಕ್ಟನ್ನು ಮುಗಿಸುವುದಕ್ಕಾಗಿ ಜಾಗತಿಕ ಬ್ಯಾಂಕಿನಿಂದ ಹಣ ತರುತ್ತೇವೆಂದು ಹೇಳುತ್ತಿದ್ದಾರೆ. ಸಾಯುವ ಸ್ಥಿತಿಯಲ್ಲಿರತಕ್ಕಂಥ ರೋಗಿಗೆ ಮೆಡಿಷನ್‌ಗೋಸ್ಕರವಾಗಿ ಅಮೇರಿಕಾಯಿಂದ ತರಿಸಲು ಲೆಟರ್ ಬರೆದಿದ್ದೇವೆಂದು ಹೇಳಿದ ಹಾಗಾಗುತ್ತದೆ. ಅಂದರೆ ಸಾಯುವ ಸ್ಥಿತಿಯಲ್ಲಿರುವ ರೋಗಿಯ ಸ್ಥಿತಿ ಏನು? ಇಡೀ ಭಾರತದಲ್ಲಿ ಇಂಡಿ ಹಾಗೂ ಸಿಂದಗಿಯಂತಹ ಪ್ರದೇಶಗಳು ಬೇರೆ ಯಾವುವು ಇಲ್ಲ. ಅಂತಹ ಭಾಗದಲ್ಲಿ ಅಪ್ಪರ್ ಕೃಷ್ಣ ಪ್ರಾಜೆಕ್ಟನ್ನು ಮಾಡಲು ಲಾಲ್‌ಬಹದ್ದೂರ್ ಶಾಸ್ತ್ರಿಯವರು ಫೌಂಡೇಷನ್ ಹಾಕಿದರು. ಅವರು ಫೌಂಡೇಷನ್ ಹಾಕಿ ಇಂದಿಗೆ 25 ವರ್ಷಗಳಾದವು. ನೀವು ಏನಾದರೂ ಫೌಂಡೇಷನ್‌ಗೆ 25 ವರ್ಷದ ವಜ್ರಮಹೋತ್ಸವ ಮಾಡುತ್ತೀರಾ? ಅಲ್ಲಿನ ಜನರು ಹೇಳುತ್ತಿದ್ದಾರೆ. ಇನ್ನು ಮಂತ್ರಿಗಳು ಫೌಂಡೇಷನ್ ಹಾಕುವುದು ಬೇಡ, ಎಂ.ಎಲ್.ಎ.ಗಳು ಫೌಂಡೇಷನ್ ಹಾಕಬೇಕು ಎಂದು ಹೇಳುತ್ತಿದ್ದಾರೆ. ಮಾನ್ಯ ಮುಖ್ಯಮಂತ್ರಿಗಳಿಗೆ ಬಡವರ ಬಗ್ಗೆ ಅನುಕಂಪ ಇದೆ ಎಂಬುದಾಗಿ ಅನೇಕ ಜನರು ಹೇಳುತ್ತಿದ್ದಾರೆ. ಈ ರೀತಿಯ ಬರೀ ಸಮಾದಾನ ಹೇಳಿದರೆ ಸಮಸ್ಯೆ ಬಗೆಹರಿಯುವುದಿಲ್ಲ. ಅಲ್ಲಿರುವ ಅಪ್ಪರ್ ಕೃಷ್ಣ ಪ್ರಾಜೆಕ್ಟನ್ನು ಬೇಗ ಮಾಡಿಸಬೇಕು. ನೀವು ಸೆಕ್ಷನ್ 42 ನ್ನು ಬೇಕಾದರೆ ತಿದ್ದುಪಡಿ ಮಾಡಿಕೊಂಡು ಇನ್ನೂ 2 ವರ್ಷ ಬೇಕಾದರೆ ಇರಿ, ಅಥವಾ ಇನ್ನೂ 8 ವರ್ಷ ಬೇಕಾದರೂ ಇರಿ ಮುಂದೆ ಬಂದವರ ಬಗ್ಗೆ ನಮಗೆ ಆನಂದವಿಲ್ಲ ಹೂವು ಒಣಗಿದರೂ ಅದರ ಸುವಾಸನೆ ನಮಗೆ ಬೇಕಾಗಿದೆ. ಅಂಧ್ರ ಪ್ರದೇಶದವರು ನಾಗಾರ್ಜುನ ಸಾಗರದ ಪ್ರಾಜೆಕ್ಟನ್ನು ಕಟ್ಟುವಾಗ ಅವರು ಜಾಗತಿಕ ಬ್ಯಾಂಕನ್ನು ನಂಬಿಕೊಂಡಿರಲಿಲ್ಲ. ಅಲ್ಲಿರುವ ಉಳಿದ ಎಲ್ಲ ಕೆಲಸಗಳನ್ನು ಬಂದ್

ಮಾಡಿ ಆ ಪ್ರಾಜೆಕ್ಟನ್ನು ಬೇಗ ಮಾಡಿದರು. ಅದೇ ರೀತಿ ನೀವು ಅಪ್ಪರ್ ಕೃಷ್ಣ ಪ್ರಾಜೆಕ್ಟನ್ನು ಮಾಡುವುದಕ್ಕೋಸ್ಕರ ಎಲ್ಲ ಕೆಲಸಗಳನ್ನು ಬಂದ್ ಮಾಡಿ. ನಾನು ಹಣಕಾಸು ಅಥವಾ ಲೋಕೋಪಯೋಗಿ ಮಂತ್ರಿಯಾಗಿದ್ದರೆ ಮಾಡಿ ತೋರಿಸುತ್ತಿದ್ದೆ. ಡೆವಲಪ್‌ಮೆಂಟ್ ಬಗ್ಗೆ ಪ್ರಾಥಮಿಕ–ಭೂ–ಅಭಿವೃದ್ಧಿ ಬ್ಯಾಂಕಿನಿಂದ ಹಣವನ್ನು ತೆಗೆದುಕೊಳ್ಳುವುದರ ಜೊತೆಗೆ ಈ ಅಪ್ಪರ್ ಕೃಷ್ಣ ಪ್ರಾಜೆಕ್ಟ ಕೆಲಸ ಮುಗಿಸುವುದಕ್ಕೋಸ್ಕರ ಅದರ ಸಹಾಯವನ್ನು ತೆಗೆದುಕೊಳ್ಳಿ. ರಸ್ತೆ ಮಾಡುವುದರಿಂದ ಉತ್ಪತ್ತಿ ಇಲ್ಲ. ಟಿ.ಬಿ. ಪೇಷಂಟ್‌ಗೆ ಉಪಚಾರ ಮಾಡುವುದರಲ್ಲಿ ಅರ್ಥವಿಲ್ಲ. ಬದುಕುವ ಮಗನಿಗೆ ಎಷ್ಟು ಖರ್ಚಾದರೂ ಚಿಂತೆ ಇಲ್ಲ. ಬೇಕಾದರೆ ನಮ್ಮ ಎಂ.ಎಲ್.ಎ. ಪಗಾರವೂ ಬೇಡ. ಯಾರ ಮನೆಯಲ್ಲಿ ಮಕ್ಕಳು ಸತ್ತರೆ ಆ ಮನೆಯಲ್ಲಿರುವ ತಂದೆ ತಾಯಿಗಳಿಗೆ ಯಾವ ರೀತಿ ದುಃಖವಾಗುತ್ತದೋ, ಯಾರ ಮನೆಯಲ್ಲಿ ಹೆಂಡತಿ ಸತ್ತರೆ ಆಕೆಯ ಗಂಡನಿಗೆ ಯಾವ ರೀತಿ ದುಃಖವಾಗುತ್ತದೋ, ಆ ರೀತಿ ನಿಮ್ಮ ಮನಸ್ಸಿನಲ್ಲೂ ಮೃದು ಹೃದಯ ಏನಾದರೂ ಇದ್ದರೆ, ಈ ಅಪ್ಪರ್ ಕೃಷ್ಣ ಪ್ರಾಜೆಕ್ಟನ್ನು ಬೇಗ ಮಾಡಿ. ನಾನು ಪ್ರತಿಯೊಂದು ಬಜೆಟ್ ಅಧಿವೇಶದಲ್ಲೂ ಈ ಅಪ್ಪರ್ ಕೃಷ್ಣ ಪ್ರಾಜೆಕ್ಟ್ ಬಗ್ಗೆ ಬಗ್ಗೆ ಭಾಷಣ ಮಾತಾಡುವುದೇ ಆಗಿದೆ. ಆದುದರಿಂದ ಮಾನ್ಯ ಮುಖ್ಯಮಂತ್ರಿಗಳಿಗೆ ಮನವಿ ಮಾಡಿಕೊಳ್ಳುವುದು ಇದೆ. ಅಪ್ಪರ್ ಕೃಷ್ಣ ಪ್ರಾಜೆಕ್ಟ ಮಾಡುವುದಕ್ಕೆ ಸಾಧ್ಯವಿದ್ದರೆ ಬೇಗ ಮಾಡಿ, ಇಲ್ಲದಿದ್ದರೆ ಸಾಧ್ಯವಿಲ್ಲವೆಂದು ಹೇಳಿದರೆ ನಾವು ಜನತೆಗೆ ಅದನ್ನೇ ಹೇಳುತ್ತೇವೆ. ಅದನ್ನು ಬಿಟ್ಟು 1995 ಅಥವಾ 20 ನೇ ಶತಮಾನಕ್ಕೆ ಮುಗಿಯುತ್ತದೆ ಎಂದು ಹೇಳಿದರೆ ಹೇಗೆ?

5 ವರ್ಷಗಳಿಂದ ಎಷ್ಟು ಹೇಳಿದರೂ ಅವರು ಮಾಡಲಿಲ್ಲ. ಮಾನ್ಯ ಉಪಾಧ್ಯಕ್ಷರು ಮಾತನಾಡಲಿಕ್ಕೂ ಅವಕಾಶ ಕೊಡಲಿಲ್ಲವೆಂದು ನಮ್ಮ ಜನಗಳಿಗೆ ಹೇಳುತ್ತೇನೆ. ಮಾನ್ಯ ದೇವೇಗೌಡರವರು ಅನೇಕ ದೋಷಗಳನ್ನು ಹೇಳಿ ತಿದ್ದಿಕೊಳ್ಳಿರಿ ಎಂದು ಹೇಳಿದಾಗ್ಯೂ ತಾವು ಕೇಳುತ್ತಿಲ್ಲ. ಇವತ್ತು ಅಪ್ಪರ್ ಕೃಷ್ಣಾ ಬಗ್ಗೆ ವಿರೋಧ ಪಕ್ಷದವರ ನಾಯಕರಾದ ಶ್ರೀ ದೇವೇಗೌಡರವರ ನಿಲುವಾದರೂ ಏನು ಎಂದು ಕೇಳಬಯಸುತ್ತೇವೆ. ಟ್ರೆಜರಿ ಬೆಂಚಿನವರು ವಿರೋಧ ಪಕ್ಷದ ನಾಯಕರು ನೀವೆಲ್ಲರೂ ಸೇರಿ ಏನು ವ್ಯವಸ್ಥೆ ಮಾಡಿದ್ದೀರಿ ಎಂದು ಕೇಳ ಬಯಸುತ್ತೇನೆ. ತಮ್ಮ ಗಂಟೆಯನ್ನು ಮಾತ್ರ ತೆಗೆದುಕೊಂಡೆ ಹೋಗುತ್ತೇನೆ ಬೆಂಗಳೂರಿನಲ್ಲಿ ಇಡುವುದಿಲ್ಲ. ಇನ್ನು ಹಲವಾರು ವಿಷಯಗಳ ಬಗ್ಗೆ ಪ್ರಸ್ತಾಪ ಮಾಡಬೇಕಾಗಿದ್ದರೂ ಕಾಲದ ಅಭಾವ ವಿರುವುದರಿಂದ ನನ್ನ ಭಾಷಣವನ್ನು ಮುಗಿಸುವ ಪೂರ್ವದಲ್ಲಿ ನನಗೆ ಇಷ್ಟು ಮಾತನಾಡಲು ಅವಕಾಶ ಕೊಟ್ಟಿದ್ದಕ್ಕಾಗಿ ತಮಗೆ ವಂದನೆಗಳನ್ನು ಅರ್ಪಿಸುತ್ತಾ ತಾವು ಅಲ್ಲಿ ಅಪ್ಪರ್ ಕೃಷ್ಣಾ ಪ್ರಾಜೆಕ್ಟ್‌ನ್ನು ಮಾಡದಿದ್ದರೂ ಅಷ್ಟಿಯಿಲ್ಲ ಕೇಳುವ ಪ್ರಯತ್ನವನ್ನಾದರೂ ಮಾಡಿದ್ದಕ್ಕಾಗಿ ಮುಖ್ಯಮಂತ್ರಿಗಳವರಿಗೆ ಅಭಿನಂದನೆಗಳನ್ನು ಅರ್ಪಿಸಿ ನನ್ನ ದುರ್ದೈವ ಭಾಷಣವನ್ನು ಮುಗಿಸುತ್ತೇನೆ.

## ದೇಶಿ ಸಂಸ್ಕೃತಿ ನಾಯಕ

ಪಡಗಾನೂರಿನ ಶಂಕರಗೌಡರು ಸರಳ ಜೀವಿಗಳಾಗಿದ್ದರು. ಶ್ರೀ ಎಸ್. ನಿಜಲಿಂಗಪ್ಪನವರ ಕಾಲದ ಗ್ರಾಮೀಣ ಜನಪ್ರತಿನಿಧಿಗಳಾಗಿದ್ದರು. 'ಗೌಡಿಕೆ'ಯ ಜಂಬ-ಡಂಬಗಳಿರಲಿಲ್ಲ. ದೇಶಿ ವೇಷ ಭೂಷಣ, ದೇಶಿ ಮಾತುಗಾರಿಕೆ ಅವರ ವಿಶೇಷವಾಗಿತ್ತು.

ಒಂದು ಸಲ ಪಡಗಾನೂರಿನಂತಹ ಸಣ್ಣ ಹಳ್ಳಿಯಲ್ಲಿ ಸರ್ವಧರ್ಮ ಸಮ್ಮೇಳನದಂತಹ ಬೃಹತ್ ಕಾರ್ಯಕ್ರಮ ಹಮ್ಮಿಕೊಂಡಿದ್ದರು. ಆ ಸಮಾರಂಭಕ್ಕೆ ನಾಡಿನ ಸುಪ್ರಸಿದ್ಧ ತುಮಕೂರಿನ ಸಿದ್ಧಗಂಗಾ ಮಠದ ಡಾ. ಶಿವಕುಮಾರ ಸ್ವಾಮಿಗಳು ಹಾಗೂ ನಾಡಿನ ಪ್ರತಿಷ್ಠಿತ ಸ್ವಾಮಿಗಳು, ಸಾಧು -ಸಂತರು ಆಗಮಿಸಿದ್ದರೆಂದರೆ ಶ್ರೀ ಶಂಕರಗೌಡರ ಪ್ರಭಾವೀ ವ್ಯಕ್ತಿತ್ವವನ್ನು ಗುರುತಿಸಬಹುದಾಗಿದೆ. ಅವರು ನಮ್ಮ ಗ್ರಾಮಭಾರತದ ದೇಶೀ ಸಂಸ್ಕೃತಿಯ ನಾಯಕರಾಗಿದ್ದರು.

**ತೋಂಟದ ಸಿದ್ಧಲಿಂಗ ಮಹಾಸ್ವಾಮಿಗಳು.**

## ಮಾದರಿ ಶಾಸಕರು

'ದೊಡ್ಡವರು ದೊಡ್ಡವರೇ ಆಗಿರುತ್ತಾರೆ. ಯಾಕೆಂದರೆ ತಾವು ದೊಡ್ಡವರೆಂದು ಅವರೆಂದೂ ವಿಚಾರಿಸುವದಿಲ್ಲ. ಸಣ್ಣವರು ಸಣ್ಣವರೇ ಆಗಿರುತ್ತಾರೆ ಯಾಕೆಂದರೆ ತಾವು ಸಣ್ಣವರೆಂದು ಅವರೆಂದೂ ವಿಚಾರಿಸುವದಿಲ್ಲ'. ದೊಡ್ಡವರೆನಿಸಿದರೂ ಸರಳ ಸಾದಾ ಜೀವನದ ಪ್ರತಿರೂಪದಂತಿದ್ದ ಸಿಂದಗಿ ತಾಲೂಕಿನ ಕೊನೆಯ ಗ್ರಾಮ ಪಡಗಾನೂರದ ಶಂಕರಗೌಡ ಯಶವಂತರಾಯ ಗೌಡ ಪಾಟೀಲ, ತಮ್ಮ ಹೆಸರಿನೊಂದಿಗೆ ಊರ ಹೆಸರನ್ನೂ ಶಾಶ್ವತವಾಗಿ ಉಳಿಸಿಕೊಂಡು ಬಂದ ಖ್ಯಾತರು.

ಸ್ವಾತಂತ್ರ್ಯ ಹೋರಾಟಗಾರರಾದ ಶಂಕರಗೌಡರು ಖಾದೀ ವೇಷಧಾರಿಗಳು. ಯಾವಾಗಲೂ ಖಾದಿ ಜೊತೆಗೆ ಖಾದೀ ಜಾಕೀಟು ಧರಿಸುತ್ತಿದ್ದರು. ಪದವಿಧರರಲ್ಲದಿದ್ದರೂ ಪದವಿ ಪಡೆಯಲೇಬೇಕೆಂಬ ಛಲದಿಂದ ತಮ್ಮ 55ನೇ ವಯಸ್ಸಿನಲ್ಲಿ ಬಿ.ಎ. ಪರೀಕ್ಷೆಗೆ ಕುಳಿತು ಪಾಸಾದರು. ಶಂಕರಗೌಡರು ತಮ್ಮ ಮಗ ಡಾ. ಸಾಹೇಬಗೌಡರೊಂದಿಗೆ 1958 ರಲ್ಲಿ ಎಸ್.ಎಸ್.ಸಿ. ಪರೀಕ್ಷೆಗೆ ಕುಳಿತು ಪಾಸಾದವರು. ರಾಜಕೀಯದಲ್ಲಿ ಶೈಕ್ಷಣಿಕ ಅರ್ಹತೆ ಅಡ್ಡಿಯಾಗಬಾರದೆಂಬ ಮುಂದಾಲೋಚನೆಯೊಂದಿಗೆ ಎಸ್.ಎಸ್.ಎಲ್.ಸಿ. ಮತ್ತು ಬಿ.ಎ.

ಪಾಸಾದವರು. ಇವರ ಮುಂದಾಲೋಚನೆಗೆ ಇನ್ನೊಂದು ನಿದರ್ಶನವೆಂದರೆ, ಸಿಂದಗಿ ಮತಕ್ಷೇತ್ರವನ್ನು ಮಹಿಳೆಯರಿಗಾಗಿ ಮೀಸಲಾಗಿಸುತ್ತದೆ ಎಂದು ರಾಷ್ಟ್ರೀಯ ಕಾಂಗ್ರೆಸ್ಸ ಅಧ್ಯಕ್ಷೆಯಾಗಿದ್ದ ಶ್ರೀಮತಿ ಇಂದಿರಾಗಾಂಧಿಯವರಿಂದ ತಿಳಿದು ಬಂದದ್ದರಿಂದ, ತಮ್ಮ ಧರ್ಮಪತ್ನಿಯ ನಾಮಪತ್ರ ಕೊಡಿಸಿ, ತಾವು ಡೆಮ್ಮಿ ಅಂತಾ ನಾಮಪತ್ರಸಲ್ಲಿಸಿ, ಆ ನಂತರ ಮೆಡಿಕಲ್ ಆಧಾರದ ಮೇಲೆ ತಮ್ಮ ಧರ್ಮಪತ್ನಿಯ ನಾಮಪತ್ರ ತಿರಸ್ಕೃತವಾಗುವಂತೆ ನೋಡಿಕೊಂಡು ತಾವು ಸ್ಪರ್ಧಿಸಿದ್ದರು.

1952–1957 ರ ಅವಧಿಯಲ್ಲಿ ಬಾಂಬೆ ಅಸೆಂಬ್ಲಿಯ ಸದಸ್ಯರಾಗಿದ್ದರೆ, 1957–1962 ರಲ್ಲಿ ಮೈಸೂರು ಅಸೆಂಬ್ಲಿಯ ಸದಸ್ಯರಾಗಿದ್ದರು. 1967 ರಲ್ಲಿ ಅಸೆಂಬ್ಲಿಯ ಟಿಕೇಟು ದೊರೆಯದೇ ಇದ್ದಾಗ ಸ್ವತಂತ್ರ ಅಭ್ಯರ್ಥಿಯಾಗಿ ನಿಂತು ಸೋತರು. 1969 ರಲ್ಲಿ ವಿಜಾಪುರ ಲೋಕಸಭೆಗೆ ಸ್ವತಂತ್ರ ಅಭ್ಯರ್ಥಿಯಾಗಿ ಸ್ಪರ್ಧಿಸಿ ಸೋತರು. 1972 ರಲ್ಲಿ ತಾಲೂಕಾ ಬೋರ್ಡಿಗೆ ಸ್ವತಂತ್ರ ಅಭ್ಯರ್ಥಿಯಾಗಿ ಸ್ಪರ್ಧಿಸಿ ಜಯಶೀಲರಾದರು. ತಾಲೂಕಾ ಬೋರ್ಡಿಗೆ ಸ್ಪರ್ಧಿಸುವ ಸಂದರ್ಭದಲ್ಲಿ ದೇವರ ಹಿಪ್ಪರಗಿ (ಸಿಂದಗಿಯಿಂದ 20 ಕಿ.ಮೀ.) ಯಿಂದ ಕಲ್ಲಿನ ಟ್ರಕ್ಕದಲ್ಲಿ ಬಂದು ಕೊನೆಯ ಗಳಿಗೆಯಲ್ಲಿ ನಾಮಪತ್ರ ಸಲ್ಲಿಸಿದ್ದರು.

1977 ರಲ್ಲಿ ಜರುಗಿದ ಲೋಕಸಭಾ ಚುನಾವಣೆಯ ಸಂದರ್ಭದಲ್ಲಿ, ವಿಜಾಪುರದಲ್ಲಿ ಜನತಾ ಪಕ್ಷದ ವೇದಿಕೆಯ ಮೇಲಿಂದ ಮಾತನಾಡುತ್ತಾ, ಕಾಂಗ್ರೆಸ್ಸ ಪಕ್ಷ ಧೂಳಿಪಟವಾಗಿ ಶ್ರೀಮಾನ ಮುರಾರ್ಜಿ ದೇಸಾಯಿಯವರ ನೇತೃತ್ವದಲ್ಲಿ ಜನತಾಪಕ್ಷ ಕೇಂದ್ರದಲ್ಲಿ ಅಧಿಕಾರಕ್ಕೆ ಬರುತ್ತದೆ ಎಂದು ಅತ್ಯಂತ ಆತ್ಮವಿಶ್ವಾಸದಿಂದ ಹೇಳಿದ್ದು ಇನ್ನೂ ನನ್ನಲ್ಲಿ ನೆನಪಿದೆ.

ಮಾನವನ ಸಾಧನೆಯೇನೋ ಅಪರಿಮಿತ. ರೆಕ್ಕೆಗಳಿಲ್ಲದಿದ್ದರೂ ಪಕ್ಷಿಗಳಿಗಿಂತ ಮೇಲೆ ಈತ ಹಾರಬಲ್ಲ. ಮೀನಿನಂತೆ ನೀರಿನಲ್ಲಿ ಈಸಬಲ್ಲ. ತನ್ನದಲ್ಲದ ಲೋಕದಲ್ಲಿ ವಿಹರಿಸಿಬರಬಲ್ಲ. ಇವೆಲ್ಲವುಗಳು ಅಸಾಧಾರಣ ಸಾಧನೆಗಳೇ ಹೌದು. ಆದರೆ ಎಲ್ಲಕ್ಕಿಂತ ಮಿಗಿಲಾಗಿ ಮಾನವೀಯ ಮೌಲ್ಯಗಳ ಅಂತರಂಗೀಕರಣವೂ ಅವಶ್ಯಕವೆನಿಸಿದೆ. ಶಂಕರಗೌಡರು ಅಂತಃಕರಣವುಳ್ಳವರಾಗಿದ್ದರು. ಯಾರದೋ ಹಣ ಖರ್ಚು ಮಾಡಬೇಕೆಂಬ ಭಾವನೆಯೇ ಅವರಲ್ಲಿರಲಿಲ್ಲ. ತುಮಕೂರಿನ ಸಿದ್ಧಗಂಗಾಮಠದ ಇಂಜನಿಯರಿಂಗ್ ಕಾಲೇಜದಲ್ಲಿ ಒಂದು ಪ್ರವೇಶ ಬೇಕಾಗಿತ್ತು. ಅದಕ್ಕಾಗಿ ಗೌಡರನ್ನು (ಶಾಸಕರನ್ನು) ಕಾಣಲು ಪಡಗಾನೂರಿಗೆ ಹೋಗಿದ್ದೆ. ಗೌಡರು ಊರಲ್ಲಿ ಇರಲಿಲ್ಲ. ಸಾಯಂಕಾಲ ಬರುವರೆಂದು ತಿಳಿದದ್ದರಿಂದ ಬರುವವರೆಗೆ ಕಾಯಬೇಕಾಯಿತು. ರಾತ್ರಿ ಎಂಟು ಗಂಟೆಯ ಬಳಿಗೆ ಬಂದು ಮನೆ ಪ್ರವೇಶ ಮಾಡಿದಾಗ ಅವರ ಕೋಣೆಯಲ್ಲಿಯೇ ಕುಳಿತಿದ್ದ ನನ್ನನ್ನು ಬಂದಿರುವ ಕಾರಣ ಕೇಳಿದರು. ವಿಷಯ ಪ್ರಸ್ತಾಪಿಸಿದೆ. ತಟ್ಟನೇ ನೀನು ಬರುವದು ಬೇಡ ಕಾರ್ ತರುವದೂ ಬೇಡ ನನಗೆ ತುಮಕೂರಿಗೆ ಹೋಗಿ ಬರಲು ರೂ. 200/– ಕೊಟ್ಟರೆ ಸಾಕು, ನಾನು ನಿಮ್ಮ ಕೆಲಸ ಮಾಡಿಕೊಡುವೆ ಎಂದು ಹೇಳಿ ಮುಗಿಸಿಬಿಟ್ಟರು. ಯಾರದೋ ದುಡ್ಡಿನಲ್ಲಿ ಜಾತ್ರೆ ಮಾಡಬೇಕೆನ್ನುವ ಸ್ವಭಾವ ಅವರಲ್ಲಿರಲಿಲ್ಲ.

ಅಂದಿನ ಕೆಲಸವನ್ನು ಅಂದೇ ಮಾಡಬೇಕೆಂಬುದರಲ್ಲಿ ನಂಬಿಕೆ ಇಟ್ಟವರು. ಅವರವರ ಹೊರೆಯನ್ನು ಅವರವರೇ ಹೊರಬೇಕು ನಿಮ್ಮ ಪಾಲಿನ ಕೆಲಸವನ್ನು ನೀವೇ ಅನುದಿನವೂ ಮಾಡಿಕೊಂಡು ಹೋಗುತಿದ್ದರೆ ಯಶಸ್ಸು ನಮ್ಮ ಅಡಿಯಾಳಾಗುವದು ಎಂದು ತಿಳಿದವರು. ಜಾತಿ, ಮತಗಳ ಭೇದ ಎಂದೂ ಮಾಡಿದವರಲ್ಲ. ಸಣ್ಣವರಿರಲಿ, ದೊಡ್ಡವರಿರಲಿ ಪ್ರೀತಿ – ಅನುಕಂಪ ದಯೆ ದಾಕ್ಷಿಣ್ಯದಿಂದ ಕಾಣುತ್ತಿದ್ದರು.

ನಂಬಿದುದನ್ನು ಮಾಡುತ್ತಿದ್ದರು. ಮಾಡಿದುದನ್ನು ನಂಬುತ್ತಿದ್ದರು. ಚುನಾವಣೆಗೆ ಸ್ಪರ್ಧಿಸುವದರಿಂದ ಮಾತ್ರ ಹಿಂದೆ ಸರಿಯುತ್ತಿರಲಿಲ್ಲ. ಸಾಮಾಜಿಕ ಕಳಕಳಿಯುಳ್ಳವರಾಗಿದ್ದು, ರಾಷ್ಟ್ರಾಭಿಮಾನ, ದೇಶಾಭಿಮಾನ, ಭಾಷಾಭಿಮಾನ ವಿಪರೀತವಾಗಿದ್ದು. ಕನ್ನಡದ ಏಳ್ಗೆಗಾಗಿ ಶ್ರಮಿಸಿದರು. ಕರ್ನಾಟಕ ಏಕೀಕರಣಕ್ಕಾಗಿ ಹೋರಾಡಿದರು. ನಿರಾಶಾವಾದಿ, ಮೋಡಗಳನ್ನು ನೋಡಿ ತುಫಾನು ಬರುತ್ತದೇನೋ ಎಂದುಕೊಳ್ಳುತ್ತಾನೆ. ಆಶಾವಾದಿ ಮಳೆ ಬರುತ್ತದೆಂದು ಸಂಭ್ರಮ ಪಡುತ್ತಾನೆ. ಪರಿಪೂರ್ಣ ವ್ಯಕ್ತಿ ಆ ಮೋಡಗಳ ಮೇಲೆ ನಡೆಯುತ್ತಾನೆ ಎಂಬ ಚೈನಿಗಾದೆ ಹೇಳುವಂತೆ, ಶಂಕರಗೌಡರು ಆಶಾವಾದಿಯಾಗಿದ್ದರು. ಏನನ್ನಾದರೂ ಹಿಡಿದರೆ ಬಿಡದೆ ಸಾಧಿಸಲು ಪ್ರಯತ್ನಿಸುತ್ತಿದ್ದರು.

ಒಮ್ಮೊಮ್ಮೆ ವರ್ತಮಾನ ಪತ್ರಿಕೆಯನ್ನು ಬಸ್ಸು ನಿಲ್ದಾಣದಲ್ಲಿ ಓದುತ್ತಾ ನಿಂತಿರುವವರ ಕಡೆಯಿಂದ ಪಡೆದು ಓದುತ್ತಾ ಹಾಗೆಯೇ ಮುಂದೆ ಮುಂದೆ ಹೋಗಿ ಬಿಡುತ್ತಿದ್ದರು. ಯಾವಾಗಲೂ ಒಂದೇ ಸ್ಥಳದಲ್ಲಿ, ನಿಂತು ಮಾತನಾಡಿದವರಲ್ಲ ಮಾತನಾಡಿಸುತ್ತಲೇ ಮುಂದೆ ಸಾಗುತ್ತಿದ್ದರು.
ಪಡಗಾನೂರ ಹೊಲದಲ್ಲಿ 'ಸೀತನಿ' ಕಾರ್ಯಕ್ರಮದಲ್ಲಿ ಪಾಲ್ಗೊಳ್ಳಲು ಪಂಚ ಪೀಠಾಧೀಶ್ವರನ್ನು ಬರಮಾಡಿಕೊಂಡಿದ್ದರು. ಜೀವನದ ಸಂಪೂರ್ಣ ಅವಧಿಯನ್ನು ಜನಸೇವೆಗಾಗಿ ಸವೆಸಿದರು. ಹಣ ಗಳಿಸಬೇಕು ಕೂಡಿಡಬೇಕೆಂಬ ಹಂಬಲವೇ ಇರಲಿಲ್ಲ. ಆ ದಿಸೆಯಲ್ಲಿ ಪ್ರಯತ್ನಿಸಲೇ ಇಲ್ಲ. ಚುನಾವಣೆಗೆ ಸ್ಪರ್ಧಿಸಿದಾಗೊಮ್ಮೆ ಒಂದೊಂದು ಹೊಲ ಮಾರಾಟ ಮಾಡಿದ್ದಾರೆ. ಯಾರಿಗಾದರೂ, ಏನಾದರೂ ತಿಳಿಸಬೇಕಾದರೆ ನೇರವಾಗಿ, ನಿಷ್ಠುರವಾಗಿ ತಿಳಿಸಿಬಿಡುತ್ತಿದ್ದರು.

ಇತ್ತೀಚೆಗೆ ಅವರು ಒಂದು ಕಾರ್ ಖರೀದಿಸಿದ್ದರು. ಮತ್ತೊಬ್ಬರ ಅಭಿಪ್ರಾಯದಲ್ಲಿ ಕಾರ್‌ನ್ನು ಯಾರೋ ಕೊಡಿಸಿದ್ದರು. ಏನೇ ಇರಲಿ, ಅವರ ಸರಳತನ, ನಿರಾಡಂಬರತೆ ಬಗ್ಗೆ ಉಲ್ಲೇಖಿಸುವೆ. ನಾನು ಮತ್ತು ನನ್ನ ಇನ್ನೊಬ್ಬ ಗೆಳೆಯ ದೇವರ ಹಿಪ್ಪರಗಿ ಬಸ್ಸು ನಿಲ್ದಾಣದಲ್ಲಿ ಸಿಂದಗಿಗೆ ಹೋಗುವದಕ್ಕಾಗಿ ಕಾಯುತ್ತಿದ್ದೇವು. ಅಷ್ಟರಲ್ಲಿ ಶಂಕರಗೌಡರ ಕಾರ್ ಬಂದಿತು. ಖಾಲೀ ಇತ್ತು. ಕೈ ಮಾಡಿದಾಗ ನಿಲ್ಲಿಸಿ ನಮ್ಮೀಬ್ಬರನ್ನು ಕೂಡ್ರಿಸಿಕೊಂಡು ಹೊರಟರು. ದಾರಿಯಲ್ಲಿ ಕೆ.ಎಸ್. ಪಾಟೀಲರೇ ನೀವು ನಮ್ಮವರೆ, ಆದರೆ ಕಾರ್‌ಗೆ ಡಿಸೇಲ್ ಹಾಕಲೇಬೇಕಲ್ಲ. ಅದಕ್ಕಾಗಿ ಬಸ್ಸು ಚಾರ್ಜನಷ್ಟು ಹಣ ಕೊಟ್ಟು ಬಿಡಿ ಅಂತಾ ಸ್ಪಷ್ಟವಾಗಿ ಹೇಳಿಯೇ ಬಿಟ್ಟರು. ಹೆಚ್ಚಿನದನ್ನು ಬಯಸಿದವರಲ್ಲ. ಕಡಿಮೆ ಪಡೆದವರಲ್ಲ. ನಾನು ಶಾಸಕನಾಗಿದ್ದು ಹಣ ಬೇಡಲೇಬಾರದೆಂಬ ಅಭಿಮಾನವು ಅವರಲ್ಲಿರಲಿಲ್ಲ.

ನಿಷ್ಠುರ ಸ್ವಭಾವದ, ಸರಳ ಹೃದಯದ, ವಿಶಾಲ ಮನಸ್ಸಿನ ಗೌಡರು ಯಾವುದಕ್ಕೂ ಮುಲಾಜು ಕಾಯುತ್ತಿರಲಿಲ್ಲ. ಚುನಾವಣೆ ಪ್ರಚಾರಕ್ಕಾಗಿ ನಮ್ಮೂರಿಗೆ (ಕೋರವಾರಕ್ಕೆ) ಬಂದಾಗ ನಮ್ಮ ಮನೆಗೆ ಬಂದೇ ಬರುತ್ತಿದ್ದರು. ನಾನಿನ್ನೂ ಚಿಕ್ಕವನಾಗಿದ್ದೆ. ನೇರವಾಗಿ ಅಡುಗೆ ಮನೆಗೆ ಪ್ರವೇಶಿಸಿ ಗೌಡ್ತಿಯವರೇ ನನಗಂತೂ ಹಸಿವೆಯಾಗಿದೆ. ಏನೇ ಇರಲಿ ಕೊಡಬೇಕು ಅಂತಾ ತಾವೇ ಬೇಡಿ ಪಡೆದು ಊಟ ತೀರಿಸಿಕೊಂಡು ಮತ್ತೇ ದಂಡಿನೊಂದಿಗೆ ಹೊರಟೇ ಬಿಡುತ್ತಿದ್ದರು.

ಮಹಿಳೆಯರಿಗೆ ಸ್ವಾವಲಂಬನೆ ಅವಶ್ಯ. ಈ ಸ್ವಾವಲಂಬನೆ ಸಾಕಾರ ರೂಪ ತಳೆಯಬೇಕಾದರೆ ವಿದ್ಯೆ ಅವಶ್ಯ. ವಿದ್ಯಾವಂತ ಮಹಿಳೆ ಸಮಗ್ರ ಸಮಾಜಕ್ಕೆ ವರದಾನವಾಗುತ್ತಾಳೆ ಎಂದು ನಂಬಿದ ಶಂಕರಗೌಡರು ತಮ್ಮ ಮಗಳನ್ನು ಆಗಿನ ಕಾಲದಲ್ಲಿ ಎಂಬಿಬಿಎಸ್ ಮಾಡಿಸಿದರು. ಈಗ ಅವರು ಬೆಳಗಾಂವ ಸರಕಾರಿ ಆಸ್ಪತ್ರೆಯಲ್ಲಿ ಮೆಡಿಕಲ್ ಆಫೀಸರ ಆಗಿದ್ದು, ಗೋಕಾಕದಲ್ಲಿ ಖಾಸಗೀ ನರ್ಸಿಂಗ ಹೋಮ ನಡೆಸುತ್ತಿದ್ದಾರೆ. ಹೆಣ್ಣು ಮಕ್ಕಳ ಬಗ್ಗೆ ಅಪಾರ ಕಳಕಳಿಯುಳ್ಳವರಾಗಿದ್ದರು.

ಗೌಡರು ಎಂದೂ ತನ್ನ ಪ್ರಪಂಚದ ಬಗ್ಗೆ ವಿಚಾರಿಸಿದವರೇ ಅಲ್ಲ. 'ಪರರಿಗಾಗಿ ಯಾರು ಬದುಕುತ್ತಾರೋ ಅವರದೇ ನಿಜವಾದ ಬದುಕು, ಉಳಿದವರು ಜೀವಂತ ಶವಗಳು' ಎಂಬ ಸ್ವಾಮಿ ವಿವೇಕಾನಂದರ ಸಂದೇಶವನ್ನು ಬಿತ್ತರಿಸುತ್ತಾರೋ ಏನೋ ಎಂಬಂತೆ ಬೇಸರವಿಲ್ಲದೆ, ಅವಿಶ್ರಾಂತವಾಗಿ ತಿರುಗಾಡುತ್ತಿದ್ದರು.

ಪಡಗಾನೂರ ಗೌಡರು, ಮೇಲಾಗಿ ಶಾಸಕರು ಎಂದು ಖ್ಯಾತನಾಮರಾಗಿದ್ದರೂ, ಎಂದಿಗೂ ಆಡಂಬರದ ಬದುಕನ್ನು ಬದುಕಿದವರಲ್ಲ. ಬೆಂಗಳೂರು, ವಿಜಾಪುರ, ಸಿಂದಗಿ ಎಲ್ಲ ಕಡೆಗೂ ಸೈಕಲ್ ಮೇಲೆ ಸಂಚರಿಸುತ್ತಿದ್ದರು. ಸೈಕಲ್ ಮೇಲಿಂದಲೇ ಬಿದ್ದು ಗಾಯಗೊಂಡು ಸಾವನ್ನಪ್ಪಿದರು. ಸತ್ತ ನಂತರವೂ ಜೀವನದ ಮೌಲ್ಯಗಳನ್ನು, ಆದರ್ಶಗಳನ್ನು ಬಿಟ್ಟು ಹೋಗಿದ್ದಾರೆ. ಬಹುಸಂಖ್ಯಾತ ಜನರು ಬದುಕಿ ಸತ್ತಂತಿದ್ದರೆ, ಪಡಗಾನೂರ ಗೌಡರು ಸತ್ತು ಬದುಕಿದ್ದಾರೆ.

**– ಕೆ.ಎಸ್. ಪಾಟೀಲ**

ಪ್ರಿನ್ಸಿಪಾಲರು

ಸಿ.ಎಂ. ಮನಗೂಳಿ ಕಾಲೇಜು, ಸಿಂದಗಿ.

# ಪಡಗಾನೂರಿನ ಕೀರ್ತಿ

ಬ್ರಿಟಿಷರ ಕಪಿಮುಷ್ಟಿಯಲ್ಲಿ ಸಿಲುಕಿ ವಿಲಿ ವಿಲಿ ಒದ್ದಾಡುತ್ತಿದ್ದ ಭಾರತಾಂಬೆಯನ್ನು ಬಿಡುಗಡೆ ಮಾಡಬೇಕೆಂದು ಕಂಕಣಬದ್ಧರಾಗಿ, ಹೋರಾಟದ ಮುಂಚೂಣಿಯಲ್ಲಿದ್ದ ಮಹಾತ್ಮಾ ಗಾಂಧೀಜಿಯವರ ಸ್ವಾತಂತ್ರ್ಯ ಚಳುವಳಿಯಲ್ಲಿ ಅಂದು ಸಹಸ್ರಾರು ಯುವಕರು ದೇಶಾಭಿಮಾನದಿಂದ ಪ್ರೇರಿತರಾಗಿ ನಾಮುಂದು ತಾಮುಂದು ಎಂದು ಧುಮುಕಿದರು. ಅಂಥ ಚಿಂತನಶೀಲ ಯುವಕರಲ್ಲಿ, ಪಡಗಾನೂರಿನ ಶಂಕರಗೌಡ ಪಾಟೀಲರೂ ಒಬ್ಬರು.

ಕಡುಬಡತನದಲ್ಲಿ ಬಾಳಿದ ಶಂಕರಗೌಡರು, ಜೀವನದುದ್ದಕ್ಕೂ ಸಾದಾಜೀವನ, ಉಚ್ಚ ವಿಚಾರದಿಂದ ಪ್ರಭಾವಿತರಾಗಿ ಬಡವರ ಬದುಕಿಗೆ ಬೆಳಕಾದರು. ಚಿಕ್ಕವಯಸ್ಸಿನಲ್ಲಿಯೇ ಜನ ಸೇವೆಯ ಗೀಳನ್ನು ಅಂಟಿಸಿಕೊಂಡು, ಆಜನ್ಮ ಪರ್ಯಂತ ದೇಶ ಸೇವೆಗೆ ಸಂಪೂರ್ಣವಾಗಿ ತಮ್ಮನ್ನು ತೊಡಗಿಸಿಕೊಂಡಿದ್ದ ಕಟ್ಟಾ ದೇಶಭಕ್ತರಾದ ಪಾಟೀಲರು ವಿಜಾಪೂರ, ಎರವಡಾ ಜೇಲುಗಳಲ್ಲಿ 3 ವರ್ಷ ಸೆರೆಮನೆವಾಸ ಅನುಭೋಗಿಸಿದರು.

ಸ್ವಾತಂತ್ರ್ಯ ದೊರೆತ ನಂತರ ಮುಂಬಯಿ ಕರ್ನಾಟಕದ ಪ್ರಪ್ರಥಮ ಅಸೆಂಬ್ಲಿಯ (1952) ಶಾಸಕರಾಗಿ ಚುನಾಯಿತರಾದ ಶಂಕರಗೌಡರು ಮುಂದೆ ಮೈಸೂರು ರಾಜ್ಯದ ಹಾಗೂ ಕರ್ನಾಟಕ ರಾಜ್ಯದ ಶಾಸಕರಾಗಿ ನಿಸ್ವಾರ್ಥ ಸೇವೆ ಸಲ್ಲಿಸಿ ಜನಪ್ರಿಯರಾದರು. ಚತುರ ರಾಜಕಾರಣಿಯಾದ ಇವರು ರಾಷ್ಟ್ರದ ಹಿರಿಯ ಧುರೀಣರಾದ ಮುರಾರ್ಜಿ ದೇಸಾಯಿ, ಬಾಬು ರಾಜೇಂದ್ರ ಪ್ರಸಾದ, ಪಂ. ಜವಾಹರಲಾಲ ನೆಹರು, ಇಂದಿರಾಗಾಂಧಿ, ಮೈಸೂರು ಚಾಮರಾಜ ಒಡೆಯರ್, ಅಶೋಕ ಮೆಹತಾ, ವಿಜಯರಾಣಿ ಶಿಂಧೆ ಇವರ ನಿಕಟ ಸಂಪರ್ಕ ಹೊಂದಿದ್ದರು.

ವಿಜಾಪುರ ಜಿಲ್ಲೆಯ ಮುಂದಾಳುಗಳಾದ ಚನ್ನಬಸಪ್ಪ ಅಂಬಲಿ, ರಾಜಾರಾಮ ದುಬೆ, ಬಿ.ಡಿ. ಜತ್ತಿ, ಆರ್.ಆರ್. ಬಿದರಿ, ಆಲಮೇಲ ದೇಶಮುಖರು, ಮಲ್ಲಪ್ಪಣ್ಣ ಸುರಪುರ, ಮರಿಗೆಪ್ಪ ಸುಗಂಧಿ, ಎನ್.ಕೆ. ಉಪಾಧ್ಯಾಯ, ಕಾಕಾಕಾರಕಾನೀಸ, ಡಾ. ಫ.ಗು. ಹಳಕಟ್ಟಿ, ಇವರು ಶಂಕರಗೌಡರಿಗೆ ಆತ್ಮೀಯರಾಗಿದ್ದು, ಇವರ ಸೇವಾಕಾಂಕ್ಷೆಗೆ ಪ್ರೇರಕ ಶಕ್ತಿಯಾಗಿದ್ದರು.

ಜಾನಪದ ಸಾಹಿತ್ಯದಲ್ಲಿ ಅಪಾರ ಆಸಕ್ತಿ ತಾಳಿದ್ದ ಶ್ರೀಯುತರು ಹುಕ್ಕೇರಿ ಬಾಳಪ್ಪ, ಬಸವರಾಜ ರಾಜಗುರು, ಗಂಗೂಬಾಯಿ ಹಾನಗಲ್ಲ, ಸುಶೀಲಾಬಾಯಿ ನಿಂಬರಗಿಯಂಥ ಸುಪ್ರಸಿದ್ಧ ಗಾಯಕರನ್ನು ಸ್ವಗ್ರಾಮಕ್ಕೆ ಬರಮಾಡಿಕೊಂಡು, ಸಂಗೀತದ ರಸದೂಟವನ್ನು ಹಳ್ಳಿಗರಿಗೆ ಉಣಬಡಿಸುತ್ತಿದ್ದರು. ವರ್ಷದುದ್ದಕ್ಕೂ ನಾಡು, ನುಡಿಯ ಜಾಗೃತಿಗಾಗಿ ಕೀರ್ತನೆ, ಭಜನೆ, ಸಭೆ–ಸಮಾರಂಭಗಳನ್ನು ಹಮ್ಮಿಕೊಂಡು ಸಾಹಿತ್ಯಕ, ಸಾಂಸ್ಕೃತಿಕ ಪರಿಸರದ ಪರಂಪರೆಯನ್ನು ಪಡಗಾನೂರಿನಲ್ಲಿ ನಿರ್ಮಿಸಿದ ಶ್ರೇಯಸ್ಸು ಇವರಿಗೆ ಸಲ್ಲುತ್ತದೆ.

ಬ್ರಿಟಿಷ ಸರಕಾರದ ಆಡಳಿತದಲ್ಲಿ, ಡೆಪ್ಯೂಟಿ ಕಮೀಷನರರಾಗಿದ್ದ ಮುರಾರ್ಜಿ ದೇಸಾಯಿ ಅವರು ಅಂದು ಸಿಂದಗಿ ಮಾರ್ಗವಾಗಿ ವಿಜಾಪುರಕ್ಕೆ ಹೊರಟಿದ್ದರು. ಇದನ್ನರಿತ ತರುಣ

ಶಂಕರಗೌಡರು ಮುರಾರ್ಜಿ ಅವರ ಕಾರನ್ನು ನಿಲ್ಲಿಸಿ, ಜಹಗೀರದಾರರ ಆಡಳಿತಕ್ಕೆ ಒಳಪಟ್ಟ ತಮ್ಮ ಪಡಗಾನೂರ ಗ್ರಾಮ ಸೌಲಭ್ಯಗಳಿಂದ ವಂಚಿತವಾಗಿದೆ ಎಂಬ ನೈಜ ಸಂಗತಿಯನ್ನು ದಿಟ್ಟತನದಿಂದ ಬಿಂಬಿಸುವಲ್ಲಿ ಯಶಸ್ವಿಯಾದರು. ಈ ಯುವಕನ ಕಳಕಳಿಯನ್ನು ಮುರಾರ್ಜಿಯವರು ಮೆಚ್ಚಿದರು. ಅವರ ಕರೆಯ ಮೇರೆಗೆ ಮುಂಬಯಿಗೆ ಹೋಗಿ ಗ್ರಾಮದ ಸರ್ವಾಂಗೀಣ ಉನ್ನತಿಗೆ ಸರಕಾರದ ಸಹಾಯ ಸೌಲಭ್ಯಗಳನ್ನು ಹಕ್ಕಿನಿಂದ ಪಡೆದು, ಕಾರ್ಯೋನ್ಮುಖರಾಗಿ ಹಳ್ಳಿಗರ ಪ್ರೀತಿಗೆ ಪಾತ್ರರಾದ ಈ ಪಾಟೀಲರು ಸ್ವಹಿತಕ್ಕಾಗಿ ಏನನ್ನೂ ಬಯಸಲಿಲ್ಲ.

ಆಡಂಬರ, ಅಹಂಕಾರ ಅಂದರೆ ಇವರಿಗೆ ಆಗಿ ಬರುತ್ತಿರಲಿಲ್ಲ. ಕಾಲ್ನಡಿಗೆಯಿಂದಲೇ ಸಂಚರಿಸುತ್ತಿದ್ದರು. ಸೈಕಲ್ ಇವರ ಸಂಗಾತಿ. ಕೆಲವೊಮ್ಮೆ ಟಾಂಗಾ ಉಪಯೋಗಿಸುತ್ತಿದ್ದರು. ಖಾದಿಧಾರಿಗಳಾದ ಪಾಟೀಲರು ತಮ್ಮ ಹಿರಿಯ ಪುತ್ರನ ಜೊತೆಗೆ ಎಸ್.ಎಸ್.ಎಲ್.ಸಿ. ಪರೀಕ್ಷೆಗೆ ಕುಳಿತು ಪಾಸಾದರು. ಸ್ವಪ್ರಯತ್ನದಿಂದ ಮುಂದೆ 55ನೆಯ ವಯಸ್ಸಿನಲ್ಲಿ ಬಿ.ಎ. ಪದವಿ ಸಂಪಾದಿಸಿ ಬಹುಭಾಷಾ ಪರಿಣಿತರಾಗಿ, ಜೀವಾನಾನುಭವದಿಂದ ಪರಿಪಕ್ವ ರಾಜಕಾರಣಿಯಾದರು. ಹಗಲಿರುಳು ಹಳ್ಳಿಗರ ಏಳ್ಗೆಗಾಗಿ ಹಂಬಲಿಸುತ್ತಿದ್ದ ಶಂಕರಗೌಡರ ಹೋರಾಟಮಯ ಬದುಕಿಗೆ ಪತ್ನಿ ಪಾರ್ವತಿಭಾಯಿ, ಪುತ್ರರಾದ ಡಾ. ಎಸ್.ಎಸ್. ಪಾಟೀಲ ಹಾಗೂ ರುದ್ರಗೌಡರು ಸೊಸೆ ಕಮಲಾಬಾಯಿ ಅವರು ಸದಾಕಾಲ ಸಕ್ರಿಯವಾಗಿ ಸಹಯೋಗ ನೀಡಿದರು.

ರಂಗುರಂಗಿನ ರಾಜಕೀಯ ಚದುರಂಗದಾಟದಲ್ಲಿ ಶುದ್ಧ ಹಸ್ತದ ಅಪರೂಪದ ಕ್ರಿಯಾಶೀಲ ರಾಜಕಾರಣಿಯೆಂದೇ ಗುರುತಿಸಲ್ಪಡುವ ಶಂಕರಗೌಡ ಯಶವಂತಗೌಡ ಪಾಟೀಲ ಅವರ ಜೀವನಾದರ್ಶ ನಮಗೆಲ್ಲ ದಾರಿದೀಪವಾಗಲಿ.

**– ಕಾಶಿಮಸಾಬ ಹುಸೇನಸಾಬ**

ಗೊಳಸಂಗಿ, ಬಿಜಾಪುರ

## ನಮ್ಮ ತಂದೆ

**ಮುಂದಾಲೋಚನೆ**–ನಮ್ಮ ತಂದೆಯವರಿಗೆ ಯಾವದೇ ಕೆಲ್ಸ ಮಾಡಬೇಕೆಂದಾಗ ಅದರ ಬಗ್ಗೆ ಮುಂದಾಲೋಚನೆ ಮಾಡುತ್ತಿದ್ದರು. 1957 ರಲ್ಲಿ ಕಾಂಗ್ರೆಸ ಟಿಕೇಟ ಸಿಕ್ಕಿತು. ಅದರ ಚಿನ್ಹೆಯನ್ನು ಹುಬ್ಬಳ್ಳಿಗೆ ಹೋಗಿ ತರಬೇಕಿತ್ತು. ಹುಬ್ಬಳ್ಳಿಗೆ ಹೋಗಲು 2 ಅಂಬೆಸಡರ ಕಾರು ತೆಗೆದುಕೊಂಡು ಹೊರಟರು. ಆಗ ಕಾರಿನಲ್ಲಿ ನಾನು ಮತ್ತು ನಮ್ಮ ತಂದೆಯವರು ಇಬ್ಬರೆ. ಆದರೆ ಕಾರು ಮಾತ್ರ ಎರಡು. ನಾನು ನಮ್ಮ ತಂದೆಯವರಿಗೆ ಎರಡು ಕಾರು ಏತಕ್ಕೆ ಎಂದು ಕೇಳಿದಾಗ ಅವರು, ಒಂದು ಗಾಡಿ ಕೆಟ್ಟರೆ ಇನ್ನೊಂದರಲ್ಲಿ ಹೋಗಲು ಬರುವುದು ಕಾಂಗ್ರೆಸ ಚಿನ್ಹೆ ತರಲು ಸಮಯ ತಪ್ಪಬಾರದೆಂಬ ಉದ್ದೇಶಕ್ಕಾಗಿ ಎರಡು ಕಾರು ಬಾಡಿಗೆ ತೆಗೆದುಕೊಂಡಿದೇ ಎಂದು ಹೇಳಿದರು.

ಪೊಟ್ಟ ಮೊದಲು N.R.W. ಸ್ಕೀಮಿನಲ್ಲಿ ನಳದ ಯೋಜನೆ ಬಂದಾಗ ನಮ್ಮ ತಂದೆಯವರು ನಮ್ಮೂರಿಗೆ ನಳದ ಯೋಜನೆ ಮಾಡಿಸಿ ಟ್ಯಾಂಕ ಕಟ್ಟಿಸಿ ನೀರಿನ ವ್ಯವಸ್ಥೆ ಮಾಡಿದರು. ಆಗ ಪಡಗಾನೂರಿನ ಜನ ನಳದ ಯೋಜನೆಯಿಂದ ಓಣಿಯಲ್ಲಿ ನೀರು ಹೆಚ್ಚಾಗಿ ರಾಡಿ ಆಗುತ್ತದೆ ಬೇಡ ಎಂದು ಅನ್ನುತ್ತಿದ್ದರು. ಆದರೆ ನಮ್ಮ ತಂದೆಯವರು ಮುಂದೆ ಎಂದಾದರು ಒಂದು ದಿನ ನೀರಿನ ತೊಂದರೆ ಬರಬಾರದೆಂದು ತಿಳಿದು ನಳದ ಯೋಜನೆ ಮಾಡಿದರು. ಅದನ್ನು ಜನ, ಈಗ ಶ್ರೀ ಶಂಕರಗೌಡ್ರು ಮುಂದಿನದನ್ನು ತಿಳಿದು ಇಡೀ ಗ್ರಾಮಕ್ಕೆ ನೀರಿನ ವ್ಯವಸ್ಥೆ ಮಾಡಿಸಿದರು. ಅವರನ್ನು ಎಷ್ಟು ಕೊಂಡಾಡಿದರು ಕಡಿಮೆ ಎಂದು ಜನ ಮಾತನಾಡುತ್ತಾರೆ.

ನಮ್ಮ ತಂದೆಯವರು 7ನೇ ಕ್ಲಾಸಿನವರೆಗೆ ಮಾತ್ರ ಶಾಲೆ ಕಲಿತಿದ್ದರು. ಅವರಿಗೆ ಎಲ್ಲ ಭಾಷೆಗಳು ಬರುತ್ತಿದ್ದವು. ಮರಾಠಿ ಭಾಷಣ, ಮರಾಠಿ ಕೀರ್ತನ, ಕನ್ನಡದಲ್ಲಿ ಕೀರ್ತನ, ಪ್ರವಚನ, ಭಾಷಣ ಅವರಿಗೆ ಎಲ್ಲವೂ ಲೀಲಾಜಾಲವಾಗಿ ಬರುತ್ತಿದ್ದವು. ಆದರೆ ಅವರಿಗೆ ತಾವು ಒಬ್ಬ B.A. ಪದವೀಧರ ಆಗಬೇಕು ಮತ್ತು M.L.A.ಗೇ ಸ್ಪರ್ಧಿಸಬೇಕಾದರೆ ಅವರಿಗೆ ಕನಿಷ್ಠ B.A. ಪದವಿ ಇರಬೇಕೆಂದು ಸರಕಾರ ಆರ್ಡಿನನ್ಸ್ ಹೊರಡಿಸಿದರೆ ತಮ್ಮ ನಂಬರು ಎಲ್ಲಿ ತಪ್ಪಿ ಹೋಗುತ್ತದೆಂಯೋ ಎಂದು ತಿಳಿದು 1958 ರಲ್ಲಿ ನನ್ನ ಸಂಗಡ S.S.L.C. ಪರೀಕ್ಷೆಗೆ ಕುಳಿತು ಪಾಸಾದರು. ಆಗ ಅವರು M.L.A. ಇದ್ದರು. ಪೇಪರನಲ್ಲಿ ತಂದೆ ಮಗ ಇಬ್ಬರು S.S.L.C. ಪರೀಕ್ಷೆಗೆ ಕುಳಿತಿದ್ದಾರೆ ಸುದ್ದಿ ಬಂತು. ನೋಡಿದವರು ನಕ್ಕಿದ್ದೆ, ನಕ್ಕಿದ್ದು.

1977 ರಲ್ಲಿ ಮುದ್ದೆಬಿಹಾಳ ತಾಲೂಕಿನ ಕಾಂಗ್ರೆಸ ಅಭರ್ಥಿ ಎಂದು ಶ್ರೀ ಭಾಗವತರಿಗೆ ಟಿಕೆಟ ಸಿಕ್ಕಿತ್ತು. ಅವರು 3 ಘಂಟೆಯ ಒಳಗೆ ಬಂದು ಕಾಂಗ್ರೆಸ ಚಿನ್ಹೆ ತೆಗೆದುಕೊಳ್ಳಬೇಕಾಗಿತ್ತು. ಆದರೆ ಅವರಿಗೆ 3 ಘಂಟೆಯ ಒಳಗೆ ಬರುವುದು ಆಗಲಿಲ್ಲ. ಅವರಿಗೆ ಕಾಂಗ್ರೆಸ ಚಿನ್ಹೆ ಸಿಗಲಿಲ್ಲ. ನವಿಲು ಚಿನ್ಹೆ ಸಿಕ್ಕಿತು. ಇಲೆಕ್ಷನಲ್ಲಿ ಸ್ಪರ್ಧಿಸಿ ಸೋತರು. 1957 ರಲ್ಲಿ ನಮ್ಮ ತಂದೆಯವರು ಹುಬ್ಬಳ್ಳಿಗೆ ಎರಡು ಕಾರು ತೆಗೆದುಕೊಂಡು ಹೋದದ್ದು ನಿಜವಾಗಿಯೂ ಸಾರ್ಥಕವಾಯಿತು. ಇಲ್ಲದಿದ್ದರೆ

ಭಾಗವತರಿಗೆ ಆದ ಪರಿಸ್ಥಿತಿ ಬೇರೆಯವರಿಗೆ ಬರಬಾರದೆಂದು ಮುಂದಾಲೋಚನೆ ಮಾಡಿ ಎರಡು ಕಾರ ತೆಗೆದುಕೊಂಡು ಹೋಗಿದ್ದರು. 1957 ರಲ್ಲಿ ನಮ್ಮ ತಂದೆಯವರು ಹೇಳಿದ ಮಾತು 1977 ರಲ್ಲಿ ಖಾತ್ರಿ ಆಯಿತು.

1977 ರಲ್ಲಿ ನಮ್ಮ ತಂದೆಯವರಿಗೆ ಜನತಾ ಪಕ್ಷದಿಂದ ಟಿಕೆಟ ಸಿಕ್ಕಿತ್ತು. ಹೊಟರ್ ಲಿಸ್ಟನಲ್ಲಿ ಶ್ರೀ ಶಂಕರಗೌಡಾ ಯಶವಂತಗೌಡಾ ಪಾಟೀಲ ಅನ್ನುವ ಬದಲು ಶ್ರೀ ಸಂಕರಗೌಡಾ ಯಶವಂತಗೌಡಾ ಪಾಟೀಲ ಅಂತಾ ಇತ್ತು. ಅದಕ್ಕೆ ನಮ್ಮ ತಂದೆಯವರು ನನ್ನ ಸೊಸೆ, ನಿನ್ನ ಧರ್ಮಪತ್ನಿ ಶ್ರೀ ಕಮಲಾಬಾಯಿ ಎಲ್ಲಿ ಎಂದು ಕೇಳಿದಾಗ, ಅವರು ಬೆಳಗಾಂವಿಗೆ ಹೋಗಿದ್ದಾರೆ ಎಂದೆ, ತಕ್ಷಣ ಸ್ಪೇಶಲ್ ಕಾರು ಕೊಟ್ಟು ಕಳಿಸಿ ಅವರನ್ನು ಕರೆಯಿಸಿ ಅವಳಿಂದ ಡಮ್ಮಿ ಕಾಂಡಿಡೇಟ್ ಎಂದು ಅರ್ಜಿ ಕೊಡಿಸಿದರು. ಹೊಟರ ಲಿಸ್ಟ ಪ್ರಕಾರ ಶ್ರೀ ಸಂಕರಗೌಡಾ ಪಾಟೀಲ ಇದೇ ಎಂದು ಇಲೆಕ್ಶಾನ್ ಕಮಿಶನರ ರಿಜೆಕ್ಟ ಮಾಡಿದರೆ ಹೇಗೆ ಎಂದು ತಿಳಿದು ನನ್ನ ಧರ್ಮಪತ್ನಿಯಿಂದ ಅರ್ಜಿ ಕೊಡಿಸಿದ್ದರು. ಆದರೆ ಅದು ರಿಜೆಕ್ಟ ಆಗಲಿಲ್ಲ. ಹೀಗೆ ಎಲ್ಲದಕ್ಕೂ ಮುಂದಾಲೋಚನೆ ಮಾಡುವ ಸ್ವಭಾವ ಅವರದು.

ಮಾನ್ಯ ವಿರೇಂದ್ರ ಪಾಟೀಲರು ಆಗಿನ ಕರ್ನಾಟಕದ ರಾಜ್ಯದ ಮುಖ್ಯ ಮಂತ್ರಿಗಳಾಗಿದ್ದರು. ಕೆಲವು ಕಾರಣದಿಂದ ಶ್ರೀ ವಿರೇಂದ್ರ ಪಾಟೀಲರ ಮಂತ್ರಿ ಮಂಡಳ ಬಿದ್ದು ಹೋಯಿತು. ಆಗ ಧರ್ಮವೀರರು ಗವ್ವರ್ನರಾಗಿ ನೇಮಕ ಹೊಂದಿದ್ದರು. ಒಮ್ಮೆ ಸಿಂದಗಿ ತಾಲೂಕಿಗೆ ಭೆಟ್ಟಿ ಕೊಡಲು ಸಿಂದಗಿಗೆ ಬರುವವರು ಇದ್ದರು. ಆಗ ನಮ್ಮ ತಂದೆಯವರು MLA ಇರಲಿಲ್ಲ. ಆದರೆ ಪಡಗಾನೂರನಿಂದ ನಮ್ಮ ತಂದೆಯವರಿಗೆ ಸಿಂದಗಿಗೆ ಸನ್ಮಾನ್ಯ ಗವ್ವರ್ನರಾದ ಶ್ರೀ ಧರ್ಮವೀರರ ಕಾರ್ಯಕ್ರಮಕ್ಕೆ ಹೋಗಬೇಕಾಗಿತ್ತು. ಆ ಕಾರ್ಯಕ್ರಮ ತಪ್ಪಿಸಬಾರದೆಂದು ಅವರು ಸರಕಾರಿ ಬಸ್ಸಿನಲ್ಲಿ ಕುಳಿತಿದ್ದರು. ಬಸ್ಸಿನ ಮೇಲೆ ಸೈಕಲ್ ಹಾಕಿಸಿದ್ದರು. ಅಲ್ಲದೇ ನನಗೆ ಬಸ್ಸಿನ ಹಿಂದೆ ಜಾವಾ ಸೈಕಲ್ ಮೋಟಾರ ತೆಗೆದುಕೊಂಡು ಹೊರಡಲು ಹೇಳಿದರು. ಹಾಗೆ ನಾನು ಬೆನ್ನು ಹತ್ತಿದೆನು. ಬಸ್ಸು ಕೆಟ್ಟರೂ, ಅಲ್ಲದೇ ಸೈಕಲ್ ಮೋಟಾರ ಬಂದು ಬಿದ್ದರೇ, ಆಗ ಅವರು ಸೈಕಲ್ ಮೇಲಿಂದ ಸಿಂದಗಿಗೆ ಹೋಗುವ ಮುಂದಾಲೋಚನೆ ಹೊಂದಿದ್ದರು. ಅವರದು ಸದಾ ಸೈಕಲ್ ಪ್ರವಾಸ. ಮೂರು ಸಾರೆ ಶಾಸಕರಾದರೂ ಅವರು ಸೈಕಲ್ ಮೇಲೆಯೆ ಪ್ರವಾಸ ಮಾಡುತ್ತಿದ್ದರು. ಆ ದಿವ್ಸ ಗವ್ವರ್ನರ ಕಾರ್ಯಕ್ರಮಕ್ಕೆ ಹಾಜರಾಗಿ ಸಭೆಗೆ ಶೋಭೆ ತಂದರು. ಧರ್ಮವೀರರನ್ನು ಮಹಾನುಭಾವ ಬಸವಣ್ಣನವರಿಗೆ ಹೊಲಿಸಿ ಮಾತನಾಡಿದರು. 12ನೇ ಶತಮಾನದಲ್ಲಿ ಧರ್ಮ ಕೆಟ್ಟಾಗ ಬಸವಣ್ಣನವರು ಅವತಾರ ತಾಳಿ ಬಂದು ಧರ್ಮ ಉದ್ಧಾರ ಮಾಡಿದರು. ಆದರೆ ವೀರೇಂದ್ರ ಪಾಟೀಲರ ಮಂತ್ರಿಮಂಡಳ ಬಿದ್ದು ಹೋದ ಪರಿಸ್ಥಿತಿಯಲ್ಲಿ ಸ್ವತಃ ಬಸವಣ್ಣನವರ ಅವತಾರ ತಾಳಿ ಶ್ರೀ ಧರ್ಮವೀರರು ಬಂದಿದ್ದಾರೆ ಎಂದು ಅವರನ್ನು ಹೊಗಳಿ ಮಾತನಾಡಿದರು. ತಂದೆಯವರ ಒಳ್ಳೆಯ ಭಾಷಣ ಕೇಳಿ ಗವ್ವರ್ನರರವರು I.B.ಗೆ ಬಂದಾಗ, ನಿಮ್ಮಂಥಹ ವ್ಯಕ್ತಿಯನ್ನು ನೋಡಿಲ್ಲ ಎಂದು ಎದೆಗು ಅಪ್ಪಿಕೊಂಡರು.

**ಊರೇ ಹೆಸರಾಯ್ತು –**

ನಮ್ಮ ತಂದೆಯವರು ಸಿಂದಗಿ ತಾಲೂಕಿನ ಸುರಗಿಹಳ್ಳಿಯಲ್ಲಿ ಹುಟ್ಟಿದರು. ಅವರ ತಂದೆಯ ಹೆಸರು ಶ್ರೀ ಅಣ್ಣಪ್ಪಗೌಡಾ ಪಾಟೀಲ ತಾಯಿ ಹೆಸರು ಶ್ರೀಮತಿ ಈರಮ್ಮ ಗೌಡತಿ. ನಾವು ಮೂಲತಹ: ಸುರಗಿಹಳ್ಳಿ ಗೌಡ್ರು ಮುಂದೇ ನಮ್ಮ ತಂದೆಯವರು. ಪಡಗಾನೂರಿನ ಯಶವಂತರಾಯಗೌಡ ಪಾಟೀಲರ ಮನೆಗೆ ದತ್ತಕ ಮಗನಾಗಿ ಬಂದು ಪವಿತ್ರವಾದ ಪಡಗಾನೂರಿನಲ್ಲಿ, ಪಡಗಾನೂರ ಶಂಕ್ರಗೌಡ್ರು ಎಂದು ಪ್ರಸಿದ್ಧರಾದರು. ಕುಬಸದ ಕಣ ಎಲ್ಲಿಯದು ಅಂದರೇ ಗುಳೇದಗುಡ್ಡದ ಖಣ. ಸಿರೆ ಅಂದರೆ ಇಲಕಲ್ ಸಿರೆ. ಯಾರಾದರೂ ಜನರಿಗೆ ನೀವು ಯಾವ ಊರಿನವರು ಎಂದು ಕೇಳಿದರೆ ಅವರು ಸಹಜವಾಗಿ ಪಡಗಾನೂರಿನವರು ಎಂದು ಹೇಳುವರು. ಆಗ ಅಲ್ಲಿಯ ಜನ ನೀವು ಶಂಕರಗೌಡರ ಪಡಗಾನೂರಿನವರೇ ಎಂದು ಕೇಳಿ ಸಂತೋಷಪಡುತ್ತಿದ್ದರು.

**ಒಮ್ಮೆ 06.10.1977 ರಲ್ಲಿ –**

ಪಡಗಾನೂರನಲ್ಲಿ ಜ್ಞಾನದಾಸೋಹ. ಪೂಜ್ಯಸ್ವಾಮಿಗಳ ಹಾಗೂ ಸತ್ಪುರುಷರ ಪೂಜಾ ಸಮಾರಂಭ ಕಾರ್ಯಕ್ರಮವಿತ್ತು. ಆಗ ಕರ್ನಾಟಕ ಎಲ್ಲ ಸತ್ಪುರುಷರನ್ನು ಕರೆಯಿಸಿದರು. ಜನಪದ ಸಾಹಿತ್ಯ ರತ್ನವಾದ ಶ್ರೀ ಹುಕ್ಕೇರಿ ಬಾಳಪ್ಪನವರನ್ನು, ಜಂಬಲದಿನ್ನಿ ಗವಾಯಿಗಳನ್ನು, ಅಲ್ಲದೆ ಇನ್ನು ಅನೇಕ ಪ್ರಸಿದ್ಧ ಕಲಾಕಾರರನ್ನು ಕರೆಯಿಸಿದ್ದರು. ವಿಶೇಷವಾಗಿ ಧಾರವಾಡದ ಜ್ಞಾನ ಕೋಗಿಲೆಯಾದ ಶ್ರೀ ಬಸವರಾಜ ರಾಜಗುರುರವರನ್ನು ಕರೆಸಿದ್ದರು. ಅವರನ್ನು ಕರೆದುಕೊಂಡು ಬರುವ ಕೆಲ್ಸ ನನಗೆ ಹಾಗೂ ರಾಜ್ಯ ಪ್ರಶಸ್ತಿ ವಿಜೇತ ಶಿಕ್ಷಕ ಶ್ರೀ ವೀರಣ್ಣ ಕರಭಂಟನಾಳ ನಮ್ಮಿಬ್ಬರಿಗೆ ಒಪ್ಪಿಸಿದ್ದರು. ಅವರು ಬರಬೇಕಾದರೆ ಒಂದು ಕರಾರು ಮಾಡಿದರು. ಅವರು ಧಾರವಾಡಕ್ಕೆ ತಿರುಗಿ ಬರುವವರೆಗೂ ಧಾರವಾಡದ ನೀರೇ ಬೇಕು ಎಂದರು. ಆಗ ನಾವು ಒಂದು ಕಾರಿನಲ್ಲಿ ಶ್ರೀ ಬಸವರಾಜ ರಾಜ ಗುರು ಅವರು ಇದ್ದರು. ಇನ್ನೊಂದು ಕಾರಿನಲ್ಲಿ ಅವರು ತಿರುಗಿ ಹೋಗುವವರೆಗೆ ಧಾರವಾಡ ನೀರಿನ ಕೊಡಗಳನ್ನು ತುಂಬಿಕೊಂಡು ಬಂದೆವು. ಆಗ ಅವರು ಪಡಗಾನೂರಿಗೆ ಬಂದು ತಮ್ಮ ಕಾರ್ಯಕ್ರಮ ನಡೆಸಿದರು.

**ನದಿಗಳ ಜೋಡಣೆ –**

1952 ರಲ್ಲಿ ಸಿಂದಗಿ ತಾಲೂಕಿನ ಮೊಟ್ಟ ಮೊದಲಿನ ಕಾಂಗ್ರೆಸ್ MLA ಆಗಿ ಆರಿಸಿ ಬಂದರು. ಆಗ ವಿಜಾಪುರ, ಧಾರವಾಡ, ಬೆಳಗಾಂವ ಹಾಗೂ ಗುಲಬರ್ಗಾ ಮೂರು ಜಿಲ್ಲೆಗಳು ಮುಂಬೈ ಕರ್ನಾಟಕಕ್ಕೆ ಸೇರಿದ್ದವು. ಮುಂಬೈ ಅಸೆಂಬ್ಲಿಯಲ್ಲಿ ಮೊಟ್ಟಮೊದಲನೆಯವರಾಗಿ ನದಿ ಜೋಡಣೆ ಬಗ್ಗೆ ಮಾತನಾಡಿದರು. ನಮ್ಮ ಜಿಲ್ಲೆಯಲ್ಲಿ 5 ಹೊಳೆಗಳು ಹರಿದಮ್ಲು ಅವುಗಳ ಜೋಡಣೆ ಯಾಕ ಮಾಡಬಾರದೆಂದು ಈ ವಿಷಯವಾಗಿ ಮೊದಲು ಮಾತಾಡಿದ ವ್ಯಕ್ತಿ, ಯಾರಾದರೂ ಆಗಿದ್ದರೆ ಅವರೇ ನಮ್ಮ ತಂದೆಯವರು. ವಿಜಾಪುರ ತಾಲೂಕಿನ ಹೊನವಾಡ ಗ್ರಾಮದಿಂದ

ಡೋಣಿ ನದಿ ಉಗಮವಾಗಿ ನಮ್ಮ ಜಿಲ್ಲೆಯಲ್ಲಿ ಬಹಳ ಪ್ರಮಾಣದ ನೀರಿನದಿಂದ ಕೂಡಿ ಹರಿದು ಹೋಗುತ್ತದೆ. ಆದರೆ ಡೋಣಿನದಿ ನೀರು ಉಪ್ಪು ಮಿಶ್ರಿತ ಇರುವುದರಿಂದ ಒಕ್ಕಲತನಕ್ಕೆ ಯಾವುದೇ ರೀತಿಯ ಉಪಯೋಗವಿರಲಿಲ್ಲ. ಆಗ ನಮ್ಮ ತಂದೆಯವರು ಕೃಷ್ಣಾನದಿ ನೀರನ್ನು ಡೋಣಿ ನದಿಗೆ ಏಕೆ ಕೂಡಿಸಬಾರದು ಇದರಿಂದ ನೀರಾವರಿಗೆ ಬಹಳ ಅನುಕೂಲವಾಗುವುದೆಂದು ವಿಚಾರ ಮಾಡುತ್ತಿದ್ದರು.

ನದಿ ಜೋಡಣೆ ಬಗ್ಗೆ ಮಾಜಿ ಪ್ರಧಾನಿ ಶ್ರೀ ಅಟಲ ಬಿಹಾರಿ ವಾಜಪೇಯವರು ಅಧಿಕಾರದಲ್ಲಿದ್ದಾಗ ಇದರ ವಿಚಾರ ಮಾಡಿದ್ದಾರೆ. ಆದರೆ ನಮ್ಮ ತಂದೆಯವರು 1952 ರ ಮುಂಬೈ ಅಸಂಬ್ಲಿಯಲ್ಲಿ ಮಾತನಾಡಿದ್ದರು ಅನ್ನುವ ಬಗ್ಗೆ ಮಾಜಿ ಇಂಡಿ ತಾಲೂಕಿನ ಶಾಸಕರಾದ ಶ್ರೀ ಆರ್.ಆರ್. ಕಲ್ಲೂರವರು ಪದೇ ಪದೇ ಜನರಿಗೆ ಹೇಳುತ್ತಿದ್ದರು. ಏನಂದರೆ, ಶ್ರೀ ವಾಜಪೇಯಿಯವರು ಈಗ ಹೇಳಿದ ನದಿಜೋಡಣೆ ಬಗ್ಗೆ, ನಮ್ಮ ಪಡಗಾನೂರ ಶಂಕ್ರಗೌಡರು ಮೊದಲೇ ಹೇಳಿದ್ದರು ಎಂದು ಜನರ ಮುಂದೆ ಹೇಳುತ್ತಾರೆ.

**ಬಯಲು ಸೀಮೆಯ ಸರ್ವಜ್ಞ –**

ಶ್ರೀ ಸಿ.ಎಸ್. ಜಗತಿ ಲ್ಯಾಮಿಂಗಟನ್ ಹಾಯಸ್ಕೂಲಿನ ಹೆಡ ಮಾಸ್ತರರು ತಮ್ಮ ಪುಸ್ತಕದಲ್ಲಿ ನಮ್ಮ ತಾಲೂಕಿನ ಅನೇಕ ಗಣ್ಯರ ಬಗ್ಗೆ ಬರೆದಿದ್ದರು ಆದರೇ ನಮ್ಮ ತಂದೆಯವರ ಬಗ್ಗೆ ಬಹಳ ವರ್ಣನೆ ಮಾಡಿ ಶ್ರೀ ಶಂಕರಗೌಡ್ರು ಅಂದರೆ ಬಯಲು ಸೀಮೆಯ ಸರ್ವಜ್ಞ ಎಂದು ಬರೆದಿದ್ದರು ನಿಜವಾಗಿಯೂ ಅವರೂ ಎಲ್ಲ ಜ್ಞಾನವನ್ನು ಹೊಂದಿದ್ದರು ಎಂದು ಅವರು ಅಭಿಪ್ರಾಯವ್ಯಕ್ತಪರಾಗಿದ್ದರು.

**ಚಾಪ್ಟರ ಕೇಸು –**

ಒಮ್ಮೆ ಪಡಗಾನೂರನಲ್ಲಿ, ಹಳ್ಳಿ ಸಣ್ಣ ಜಗಳದಿಂದ ಊರಲ್ಲಿಯ ಜನರಿಗೂ ಮತ್ತು ಹರಿಜನರಿಗೂ ಜಗಳವಾಗಿ ಚಾಪ್ಟರ ಕೇಸು ಆಯಿತು. ಚಾಪ್ಟರ ಕೇಸು ಅಂದರೆ ಕೋರ್ಟಿನವರು ಬರೆ ಮುದ್ದತ್ತು ಹಾಕುತ್ತಿದ್ದರು. ಅವರು ನಮ್ಮ ತಂದೆಯವರಿಗೆ ಇದರ ಬಗ್ಗೆ ಹೇಳಿಯೂ ಇರಲಿಲ್ಲ. ಊರಿನ ಜನ ಸಿಂದಗಿಗ ಮುದ್ದತ್ತಿಗೆ ತಿರುಗಾಡುವದನ್ನು ನೋಡಿ ನಮ್ಮ ಊರಿನ ಸಭ್ಯ ಉತ್ತಮ ಮನುಷ್ಯ ಶಿವಪ್ಪ ಜೋಗುರ ಇವನನ್ನು ಕರೆಯಿಸಿ ಕೇಳಿದರು. ಊರಿನ ಜನ ಯಾಕೆ ಸಿಂದಗಿಗೆ ಹೋಗಿ ಬರುತ್ತಾರೆ ಎಂದು. ಶಿವಪ್ಪ ಜೋಗುರ ಇದ್ದ ಸ್ಥಿತಿಯನ್ನು ನಮ್ಮ ತಂದೆಯವರಿಗೆ ಹೇಳಿದಾಗ, ಅವರು ಅದೇ ದಿವ್ಸ ಸಿಂದಗಿಗೇ ಹೋಗಿ ತಹಶಿಲ್ದಾರರನ್ನು ಭೆಟ್ಟಿಯಾಗಿ ಆ ಕೇಸನ್ನು ಮುಗಿಸಿಬಿಟ್ಟರು. ಆ ಎಲ್ಲ ಜನ ಇಲ್ಲಿಯವರೆಗೆ ನಮ್ಮ ತಂದೆಯವರನ್ನು ನೆನೆಸುವರು ಹೀಗೆ ಸದಾ ಪರರ ಕೆಲ್ಸಕ್ಕಾಗಿ ಕಷ್ಟಪಡುತ್ತಿದ್ದರು.

## ಹಣದ ವಿಷಯದಲ್ಲಿ –

ನಮಗೆ 2 ಹೊಲಗಳು ಮಾತ್ರ. ಒಂದು ಹೊಲವನ್ನು 1952 ರ ಇಲೆಕ್ಷನದಲ್ಲಿ ಬರೆದುಕೊಟ್ಟು ಸಾಲ ತೆಗೆದುಕೊಂಡದ್ದು. ಅದು ಹಾಗೇ ಇತ್ತು. ಮತ್ತೆ 1970 ರಲ್ಲಿ MP ಇಲೆಕ್ಷನ್‌ಗೆ ನಿಂತಾಗ ಇನ್ನೊಂದು ಹೊಲ ಬರೆದು ಕೊಟ್ಟು ಸಾಲ ತಗೊಂಡರು. ಮೊದಲು MLA ನಿಂತು ಸೋತರು. ಅನಂತರ M.P. ಗೆ ನಿಂತು ಸೋತರು. ಇದ್ದ ಎರಡೂ ಹೊಲಗಳು ಸಾಲದಲ್ಲಿ. ಪರಿಸ್ಥಿತಿ ಗಂಭೀರವಾಗಿ, ನಾನು ಇನ್ನು ಕಲಿಯುತ್ತಿದ್ದೆ. ಮನೆಯಲ್ಲಿ ಯಾರು 10 ಪೈಸೆ ಸಂಪಾದನೆಯವರು ಇರಲಿಲ್ಲ. ಅಂಥಹ ಪರಿಸ್ಥಿತಿಯಲ್ಲಿ ಸ್ವತಂತ್ರ ಅಭ್ಯರ್ಥಿಯಾಗಿ T.D.B. ಇಲೆಕ್ಷನ್‌ಗೆ ನಿಂತು ಆರಿಸಿ ಬಂದರು. ಆಗ ತಾನೇ T.D.B. ಅಸ್ತಿತ್ವದಲ್ಲಿ ಬಂದಿತ್ತು. ಒಟ್ಟು 18 ಜನ ಬೋರ್ಡ ಮೆಂಬರು ಆರಿಸಿದ್ದರು. ಆದರೆ ಒಂದು ವಿಶೇಷ ಕಾಯ್ದಿತ್ತು. ಪ್ರಿಸೆಡೆಂಟ್ ಇಲೆಕ್ಷನ್ ಬಹಳ ತುರಿಸಿನದಾಗಿತ್ತು. ಆಗ ಜಬರದಸ್ತ 2 ಪಾರ್ಟಿ ಇದ್ದವು. ನಮ್ಮ ತಂದೆಯವರಿಗೆ ಒಟ್ ಹಾಕಲು ನಮ್ಮ ಮನೆಗೆ 80,000=00 ರೂಪಾಯಿ ಕೊಟ್ಟು ಕಳುಹಿಸಿ ಇನ್ನು ಬೇಕಾದರೆ ಕೊಡುತ್ತೇವೆ. ಆದರೆ ಒಟ್ ಅವರಿಗೆ ಹಾಕಬೇಕೆಂದು ಅವರ ವಿಚಾರವಾಗಿತ್ತು. ನಮ್ಮಲ್ಲಿಯ ಆತ್ಮೀಯರೊಬ್ಬರಾದ ಹಿರಿಯ ಮನುಷ್ಯ ಏನು ಹೇಳಿದನೆಂದರೆ, ಆ ಹಣವನ್ನು ತೆಗೆದುಕೊಳ್ಳೋಣ ಎರಡೂ ಹೊಲಗಳನ್ನು ಸಾಲದಿಂದ ಬಿಡಿಸಿಕೊಳ್ಳೋಣ ಎಂದು ಸಲಹೆ ಮಾಡಿದರು. ಆದರೆ ನಮ್ಮ ತಂದೆಯವರು ಆ ಹಣವನ್ನು ತಿರಸ್ಕರಿಸಿ, ಬೇರೆಯವರಿಗೆ ಒಟ್ ಹಾಕಿ ಪ್ರಾಮಾಣಿಕ ವ್ಯಕ್ತಿಯನ್ನು ಪ್ರಿಸಿಡೆಂಟ್‌ನನ್ನಾಗಿ ಆರಿಸಿದರು. ಆಗ ಇಡೀ ತಾಲೂಕಿನ ಜನತೆ ಎಂಥಹ ಕಠಿಣ ಪರಿಸ್ಥಿತಿ ಬಂದರೂ ಗೌಡರು ಹಣಕ್ಕೆ ಆಸೆ ಪಡಲಿಲ್ಲ ಎಂದು ಮಾತಾಡಿದರು. ಮುಂದೆ 1972 ರಲ್ಲಿ ಸಂಸ್ಥಾ ಕಾಂಗ್ರೆಸ್ಸಿನ ಟಿಕೆಟ ಸಿಕ್ಕಿತು. ಆದರೆ ಇಲೆಕ್ಷನಗೆ ಹಣ ಇರಲಿಲ್ಲ. ವಾಯ್. ರಾಮಚಂದ್ರರಾವ ಆಗಿನ ಬೆಳಗಾಂವಿಯ ವಿಭಾಗೀಯ ಅಧಿಕಾರಿ ತಗಾಯಿ ರೂಪದಲ್ಲಿ ಹಣ ಮಂಜೂರು ಮಾಡಿದರು. ಆ ಹಣದಿಂದ ಆ ಇಲೆಕ್ಷನದಲ್ಲಿ ಗೆದ್ದು ಆರಿಸಿಬಂದರು.

## ಶಿಕ್ಷಣ ಪ್ರೇಮ –

ನಮ್ಮ ತಂದೆಯವರು ಆಗ ಯಾವ ಅಧಿಕಾರದಲ್ಲಿ ಇರಲಿಲ್ಲ. ಆದರೆ ಯಾವುದೇ ಬಡವಿದ್ಯಾರ್ಥಿ ಕಲಿಯುವ ಹಂಬಲ ಇದ್ದರೆ ಅವನಿಗೆ ಎಲ್ಲ ರೀತಿಯಿಂದ ಸಹಾಯ ಮಾಡಿ ಅವನಿಗೆ ಒಳ್ಳೆಯ ಶಿಕ್ಷಣ ಕೊಡಿಸುತ್ತಿದರು. 1952 ರ ಮೊದಲು ಯಾವ ಬೋರ್ಡಿಂಗ ವ್ಯವಸ್ಥೆ ಬಡ ವಿದ್ಯಾರ್ಥಿಗಳಿಗೆ ಇರಲಿಲ್ಲ. ಆಗ ನಮ್ಮ ತಂದೆಯವರು ಆ ವಿದ್ಯಾರ್ಥಿಗಳಿಗೆ ವಾರದ ಮನೆ ಮಾಡಿ ಶಿಕ್ಷಣ ಕೊಡಿಸುತ್ತಿದ್ದರು. ಆಗ ನಮ್ಮೂರಿನಲ್ಲಿ 7ನೆಯತ್ತೆ ವರೆಗೆ ಶಾಲೆ ಇತ್ತು. ಅಲ್ಲಿ ಲಿಂಬೆಪ್ಪಗೌಡಾ ಸೋಮಪ್ಪ ಗೌಡಾ ಪಾಟೀಲ ಎಂಬ ಹೆಸರಿನ ಒಳ್ಳೆಯ ಹೆಡ್ ಮಾಸ್ತರರು ಇದ್ದರು. ಅವರು 7ನೇ ಕ್ಲಾಸಿನ ವಿದ್ಯಾರ್ಥಿಗಳಿಗೆ ಗಣಿತ ವಿಷಯ ಬಹಳ ಚೆನ್ನಾಗಿ ಹೇಳುತ್ತಿದ್ದರು. ಅವರ ಕೈಯಲ್ಲಿ 7ನೇ ಕ್ಲಾಸು ಓದಿದ ವಿದ್ಯಾರ್ಥಿ ಪಾಸಾಗಿಯೇ ಬಿಡುತ್ತಿದ್ದನು. ಅಂಥಹ ವಿದ್ಯಾರ್ಥಿಗಳಿಗೆ ನಮ್ಮ ತಂದಯವರು ಶಿಕ್ಷಕ ನೌಕರಿ ಕೊಡಿಸಿ ಬಿಡುತ್ತಿದ್ದರು. ಈ ವಾರ್ತೆಯನ್ನು ಕೇಳಿ ಅನೇಕ ಜನ ಬಡವಿದ್ಯಾರ್ಥಿಗಳು ಪಡಗಾನೂರಿಗೆ ಬರುತ್ತಿದ್ದರು. ಒಮ್ಮೆ ಬಾಗಲಕೋಟೆ

ತಾಲೂಕಿನ ಶಿಶಿಮನಿ ಊರಿನ ವಿಠ್ಠಲ ಬಾರಿಕೇರಿ ಎಂಬ ವಿದ್ಯಾರ್ಥಿ 4ನೇ ಕ್ಲಾಸಿನವರೆಗೆ ಓದಿದ್ದ. ಮುಂದೆ ಓದುವ ಆಸೆ ಇತ್ತು. ಆದರೆ ಯಾವ ವ್ಯವಸ್ಥೆ ಇರಲಿಲ್ಲ. ಆ ವಿಠಲ ಬಾರಿಕೇರಿ ಎಂಬ ವಿದ್ಯಾರ್ಥಿಗೆ ಯಾರೋ ಜನ ನೀನು ಸಿಂದಗಿ ತಾಲೂಕಿನ ಪಡಗಾನೂರಿಗೆ ಹೋಗು ಅಲ್ಲಿ ಶ್ರೀ ಶಂಕರಗೌಡಾ ಪಾಟೀಲ ಅಂತಾ ಇರುವರು, ಇವರು ನಿನ್ನ ಶಿಕ್ಷಣದ ವ್ಯವಸ್ಥೆ ಮಾಡುವರು ಎಂದು ಹೇಳಿದರು. ಅದೇ ರೀತಿ ಆ ವಿದ್ಯಾರ್ಥಿ ಪಡಗಾನೂರಿಗೆ ಬಂದ 5ನೇ ಕ್ಲಾಸ ಒಂದು ವರ್ಷದಲ್ಲಿ ಪಾಸಾದ ಅನಂತರ 6ನೇ ಮತ್ತು 7ನೇ ಕ್ಲಾಸ ಒಂದೇ ವರ್ಷದಲ್ಲಿ ಪಾಸಾದ ಅವನು ಬಹಳ ಬುದ್ಧಿವಂತ ವಿದ್ಯಾರ್ಥಿ ಆಗಿದ್ದನು. ಮುಂದೆ ಅವನಿಗೆ ಹಾಯಸ್ಕೂಲ ಕಾಲೇಜ ಶಿಕ್ಷಣ ಕೊಡಿಸಿದರು. ಅದೇ ವಿದ್ಯಾರ್ಥಿ ಕರ್ನಾಟಕ ಯುನಿವರ್ಸಿಟಿಯಲ್ಲಿ ಸಂಸ್ಕೃತ ವಿಷಯದಲ್ಲಿ ಪಿಎಚ್.ಡಿ. ಪಡೆದು ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಸಂಸ್ಕೃತ ಪ್ರಾಧ್ಯಾಪಕನಾಗಿದ್ದನು.

**ಮಾತಿನ ಚಾಣಕ್ಷತೆ –**

1972 ರಲ್ಲಿ ಕಾಂಗ್ರೆಸ್ ಸರಕಾರ ಅಧಿಕಾರದಲ್ಲಿ ಬಂತು ಮಾನ್ಯ ದೇವರಾಜ ಅರಸುರವರು ಮುಖ್ಯ ಮಂತ್ರಿಗಳಾಗಿದ್ದರು. ಅದೊಂದು ದಿನ ಮಾನ್ಯ ಮುಖ್ಯಮಂತ್ರಿಗಳ ಕಾರ್ಯಕ್ರಮ ಸಿಂದಗಿಯಲ್ಲಿ ಇತ್ತು. ನಾನು ನಮ್ಮ ತಂದೆಯವರು ಪಡಗಾನೂರಿನ ಕ್ರಾಸನ ಹತ್ತಿರ ನಿಂತಾಗ ಮಾನ್ಯ ಮುಖ್ಯಮಂತ್ರಿಗಳು ಬಂದಾಗ ಮಾಲಾರ್ಪಣೆ ಮಾಡಿದೆವು. ನಂತರ ನಮ್ಮ ತಂದೆಯವರನ್ನು ಮುಖ್ಯಮಂತ್ರಿಗಳು ತಮ್ಮ ಕಾರಿನಲ್ಲಿ ಮಗ್ಗಲಲ್ಲಿಯೇ ಕೂಡ್ರಿಸಿಕೊಂಡು ಸಿಂದಗಿಗೇ ಹೋದರು. ಸಿಂದಗಿಯ ಕಾರ್ಯಕ್ರಮ ಪ್ರಾರಂಭವಾಯಿತು. ಕಾಂಗ್ರೆಸ್ ತಾಲೂಕಾ ಪ್ರಿಸಿಡೆಂಟರಾದ ಶ್ರೀ ವಾರದ ಗುರಸಂಗಪ್ಪಣ್ಣನವರು ದೊಡ್ಡದಾದ ಹಾರವನ್ನು ಮುಖ್ಯಮಂತ್ರಿಗಳಿಗೆ ಹಾಕಿದರು. ಹಾಗೇ ಮನವಿಯನ್ನು ಓದಿದರು. ಆ ಮೇಲೆ ಅದೇ ಸ್ಟೇಜಿನ ಮೇಲೆ ನಾನು ಮತ್ತು ನಮ್ಮ ತಂದೆಯವರು ಅಲ್ಲಿಯೇ ಇದ್ದೆವು. ನಮ್ಮ ತಂದೆಯವರ ಕೈಯಲ್ಲಿ ಅತಿ ಸಣ್ಣ ಹೂವಿನಹಾರ ಇತ್ತು. ಆಗ ಸ್ಟೇಜಿನ ಮೇಲೆ ಎದ್ದುನಿಂತು ಈಗಾಗಲೇ ಕಾಂಗ್ರೆಸ್ ಪ್ರಿಸಿಡೆಂಟರು ದೊಡ್ಡಹಾರ ಹಾಕಿದ್ದಾರೆ. ಆದರೆ ನನ್ನ ಕೈಯಲ್ಲಿ ಸಣ್ಣ ಹಾರ ಇದ್ದರೂ ಸಹಿತ ನಾನು ಬರೇ ಹಾರ ಹಾಕುವುದಿಲ್ಲ. ಹಾರ ರೂಪದಲ್ಲಿ ಇಡಿ ಸಿಂದಗಿ ತಾಲೂಕಿನ ಜನತೆಯನ್ನು ಅವರ ಉಡಿಯಲ್ಲಿ ಹಾಕುವೆ. ಇದು ಮೊದಲನೆಯ ಮಾತು. ಎರಡನೆಯದಾಗಿ – ಮಾನ್ಯ ಮುಖ್ಯಮಂತ್ರಿಗಳಿಗೆ ನಾನು ಎಷ್ಟು ತಗಾಯಿ ಕಣಕಿ ತಗಾಯಿ ಮಂಜೂರ ಮಾಡಲು ಕೇಳುವುದಿಲ್ಲ. ಕಾಲಕಾಲಕ್ಕೆ ಬರಗಾಲಕ್ಕೆ ತುತ್ತಾಗುವಂಥಹ ಇಂಡಿ ತಾಲೂಕ ಹಾಗೂ ಸಿಂದಗಿ ತಾಲೂಕ ಇವರೆಡನ್ನೂ Upper Krishna Project ನ್ನು ಮಾಡಿ ಉದ್ಧಾರ ಮಾಡಿರಿ ಎಂದು ಕೇಳುತ್ತೇನೆ ಎಂದು ಹೀಗೆ ಕೇವಲ 5 ಮಾತಿನಲ್ಲಿ ಇಡಿ ಸಭೆಯನ್ನು ತಲ್ಲಣಗೊಳಿಸಿದರು. ಇಡಿ ಜನ ಚಪ್ಪಾಳೆ ತಟ್ಟಿದರು. ಅಂಥಹ ಮಾತಿನ ಚಾಣಕ್ಷತೆ ಅವರಲ್ಲಿ ಇತ್ತು.

ನನ್ನ ಸಹೋದರ ರುದ್ರಗೌಡನ ಕುಟುಂಬದವರ ಊರು ಬಂಡರಕೋಟಿ. ಇದು ಸೋಲಾಪೂರ ಜಿಲ್ಲೆಯ 13ನೇ ಮೈಲಿನ ಕ್ರಾಸಿನಿಂದ 20 ಕಿಲೋ ಮೀಟರದಲ್ಲಿರುವ ಊರು.

ಅಲ್ಲಿ ಅದೊಂದು ದಿನ, ಅಲ್ಲಿಯ ರಾಜ್ಯದ ಮಂತ್ರಿಗಳ ಕಾರ್ಯಕ್ರಮವಿತ್ತು. ಆ ದಿವ್ಸ ನಮ್ಮ ತಂದೆಯವರು ಬಂಡರಕೋಟೆ ಗ್ರಾಮಕ್ಕೆ ಹೋದಾಗ ಆ ಕಾರ್ಯಕ್ರಮ ನೋಡಿ ಇಲ್ಲಿ ಏನು ನಡಿದಿದೆ ಎಂದು ಕೇಳಿದಾಗ ಮಂತ್ರಿಗಳು ಬಂದಿದ್ದಾರೆ. ಭಾಷಣ ಕಾರ್ಯಕ್ರಮವಿದೆ ಎಂದು ಹೇಳಿದರು. ಆಗ ನಮ್ಮ ತಂದೆಯವರು ಅಲ್ಲಿಗೆ ಹೋದಾಗ ಇವರಿಗೆ 5 ನಿಮಿಷ ಮಾತನಾಡಲು ಸಮಯ ಕೊಟ್ಟಿದ್ದಾರೆ, ಆದರೆ ಇವರು ಮಾತಾಡಿದ್ದು 3 ತಾಸು ಸೊಗಸಾಗಿ ಮಾತನಾಡಿದರು. ಇದು ಘಟಪ್ರಭಾ ನದಿಯ ದಡದಲ್ಲಿಯ ಫಲವತ್ತಾದ ಭೂಮಿ ಬಂಥಾರ ಕವಟೆ ಇದರ ಹೆಸರು. ನಿಮ್ಮ ಕೈಯಲ್ಲಿ ಸಿಕ್ಕಿ ಬಂಡರಕೋಟೆ ಆಗಿದೆ ಎಂದು ಆ ಊರಿನ ವರ್ಣನೆ ಮಾಡಿ ಹೇಳಿದಾಗ, ಎಲ್ಲ ಜನರು ಅತಿ ಸಂತೋಷಪಟ್ಟರು. ಈ ರೀತಿಯಾಗಿ ಒಳ್ಳೆಯ ಮಾರ್ಮಿಕವಾಗಿ ಮಾತಾಡುವ ಜಾಣಕ್ಷತೆ ಹೊಂದಿದ್ದರು.

**ಮುಂದಿಟ್ಟ ಹೆಜ್ಜೆ ಹಿಂದಿಡುವವರಲ್ಲ –**

1977 ರಲ್ಲಿ ಮಾನ್ಯ ನಿಜಲಿಂಗಪ್ಪನವರು ಮುಖ್ಯಮಂತ್ರಿಗಳಾಗಿದ್ದು ನಮ್ಮ ತಂದೆಯವರು ಜನತಾ ಪಕ್ಷದ ಟಿಕೆಟ ಕೇಳಿದಾಗ ನಿಜಲಿಂಗಪ್ಪನವರು ಟಿಕೆಟ ಕೊಡಲಿಲ್ಲ. ನಮ್ಮ ತಂದೆಯವರು ತಮ್ಮ ಆಪ್ತ ಸ್ನೇಹಿತನಿಗೆ ಹೇಳಿದ್ದೇನೆಂದರೆ ದುಂಡಪ್ಪ ಟಿಕೆಟ್ ನನ್ನ ಅಂಗಿ ಕಿಸೆಯ್ಯಿದೆ, ನಾನು ಈಗಿಂದೀಗಲೇ ದೆಹಲಿಗೆ ಹೋಗಿ ಟಿಕೆಟ ತರತ್ತೇನೆ ಎಂದರು. ನಾನು ಮತ್ತು ಸ್ವಾತಂತ್ರ್ಯ ಯೋಧ ಶ್ರೀ ಉಪ್ಪಾರ ದುಂಡಪ್ಪ ಕೂಡಿ ಬೆಂಗಳೂರಿನ ವಿಮಾನ ನಿಲ್ದಾಣಕ್ಕೆ ಬಂದೆವು. ಆದರೆ ದೆಹಲಿಗೆ ಹೋಗುವ ವಿಮಾನ ಸಿಟ ಭರ್ತಿ ಆಗಿದ್ದವು. ಆದರೆ ನಮ್ಮ ತಂದೆಯವರಿಗೆ ಅದೇ ವಿಮಾನದಿಂದ ದೆಹಲಿಗೆ ಹೋಗಬೇಕಾಗಿತ್ತು. ಕೌಂಟರನಲ್ಲಿ ಹೋಗಿ ಯಾರಾದರೂ ರಿಜರ್ವೆಷನ್ ಮಾಡಿದವರು ಇರುವರೊ ಹೇಗೋ ಎಂದು ವಿಚಾರಿಸಿ ಅವರ ಅಡ್ರೆಸ್ಸು ತೆಗೆದುಕೊಂಡು ಹೋಗಿ ಅವರಿಂದ ಮತ್ತೆ ಬೇರೆ ಸಮಯಕ್ಕೆ ಹೋಗುವದಾಗಿ ಬರೆಯಿಸಿಕೊಂಡು ಬಂದು ಅದೇ ವಿಮಾನ ಹತ್ತಿ ದೆಹಲಿಗೆ ಹೋಗಿ ಶ್ರೀ ಮುರಾರಜಿ ದೇಸಾಯಿ ಇವರಿಂದ ಟಿಕೆಟ ಪಡೆದುಕೊಂಡು ಬಂದೇ ಬಿಟ್ಟರು. ಅವರು ಮುಂದೆ ಇಟ್ಟ ಹೆಜ್ಜೆ ಹಿಂದೆ ಇಡುತ್ತಿದ್ದಿಲ್ಲ. ಅಂತೆಯೇ ಅವರು ಎಲ್ಲವನ್ನು ಸಾಧಿಸುತ್ತಿದ್ದರು.

**ಆಕರ್ಷಕ ವ್ಯಕ್ತಿತ್ವ –**

ನಮ್ಮ ತಾಯಿ ಶ್ರೀಮತಿ ಪಾರ್ವತಿಬಾಯಿ ಪಾಟೀಲ ಅವರ ತವರುಮನೆ ಬಬಲೇಶ್ವರ. ಅದೊಂದು ದಿನ ನಮ್ಮ ತಂದೆಯವರು ಬಬಲೇಶ್ವರಕ್ಕೆ ಹೋಗಿದ್ದರು. ನಮ್ಮ ಅಜ್ಜನ ಮನೆ ಬಜಾರದಲ್ಲಿಯೇ ಇದೆ. ಸಹಜವಾಗಿ ನಮ್ಮ ತಂದೆಯವರ ರುಚಿಯಾದ ಮಾತು ಕೇಳಲಿಕ್ಕೆ ಜನ ತಾವಾಗಿಯೇ ಗುಂಪು ಗುಂಪಾಗಿ ಬರುತ್ತಿದ್ದರು. ಹೀಗಾಗಿ ಬಹಳ ಜನ ನಿಂತು ನಮ್ಮ ತಂದೆಯವರ ಆಕರ್ಷಣೀಯವಾದ ಹಾಗೂ ರುಚಿಕರ ಮಾತುಗಳನ್ನು ಕೇಳುತ್ತಾ ನಿಂತಾಗ ಅಲ್ಲಿಯ ಪಿ.ಎಸ್.ಐ. ಶ್ರೀ ಹಸಬಿಯವರು ಬಂದ ತಕ್ಷಣ, ಜನ ಅಲ್ಲಿ ಅಷ್ಟೊಂದು ಏಕೆ ಕೂಡಿದ್ದಾರೆ? ಏನು ಗದ್ದಲ? ಎಂದು ಕೇಳಿದಾಗ ಮುಗ್ಧಜನ, ಸಾಹೇಬರೆ ಪಡಗಾನೂರ ಶಂಕರಗೌಡ್ರ ಬಂದಿರುವರು ಅದಕ್ಕಾಗಿ

ಜನ ಕೂಡಿದ್ದಾರೆ ಎಂದು ಹೇಳಿದರು. ಆಗ ಹಸಬಿ ಪಿ.ಎಸ್.ಐ.ರವರೂ ಅದೇ ಸ್ಥಳಕ್ಕೆ ಹೋಗಿ ನಮ್ಮ ತಂದೆಯವರ ಮಾತುಗಳನ್ನು ಕೇಳುತ್ತ ಒಂದು ತಾಸು ಅವರು ಅಲ್ಲಿಯೇ ನಿಂತು ಬಿಟ್ಟಿದ್ದರು. ಆದರಲ್ಲಿ ಒಬ್ಬ ಮಾತ್ರ ಪಿ.ಎಸ್.ಐ. ರವರನ್ನು ಕೇಳಿಯೇ ಬಿಟ್ಟ, ಅಲ್ರಿ ಸಾಹೇಬರ ನಿವ್ಯಾಕೆ ಒಂದು ತಾಸು ನಿಂತಿದ್ದೀರಿ ಎಂದಾಗ, ನನಗೇನು ಗೊತ್ತು ಮಹಾರಾಯ ಶ್ರೀ ಶಂಕರಗೌಡ್ರ ಹೀಗೆ ಇರುವರು ಅನ್ನುವದು ಎಂದು ಅಂದರಂತೆ.

## ಜನರೇ ಆಸ್ತಿ –

ಆಸ್ತಿ ಎಂದರೇ ಜಮೀನ, ಹಣ ಎನ್ನುವವರು ಬಹಳ ಜನ. ನಮ್ಮ ತಂದೆಯವರಿಗೆ ಎಂಥಹ ಕಷ್ಟ ಬಂದರೂ ಸಹಾಯ ಮಾಡುವ ಸಾಹುಕಾರರೆಂದರೆ, ಚಂದ್ರಾಮಪ್ಪ ಗಬ್ಬೂರ ಮುಳಸಾವಳಗಿ. ಇವರು ನಮ್ಮ ತಂದೆಯವರು ಇಲೆಕ್ಷನಲ್ಲಿ ನಿಂತಾಗ ಅವರಿಗೆ ಹಣದ ಸಹಾಯ ಮಾಡುತ್ತಿದ್ದರು. ನಮ್ಮ ತಂದೆಯವರ ಮೇಲೆ ಅಪಾರ ಪ್ರೇಮವುಳ್ಳವರು ಆಗಿದ್ದರು. ಅವರು ತಮ್ಮ ಪ್ರಾಣವನ್ನಾದರೂ ಒತ್ತಿ ಇಟ್ಟು ಇಲೆಕ್ಷನದಲ್ಲಿ ಸಹಾಯ ಮಾಡುತ್ತಿದ್ದರು. ಯಾರಾದರೂ ಹಣವಿಲ್ಲವೇ ಎಂದು ಕೇಳಿದರೆ, ನನಗೆಲ್ಲಿಯ ಹಣ, ಜನರೇ ನನ್ನ ಆಸ್ತಿ ಎನ್ನುತ್ತಿದ್ದರು.

ಅವರ ಸ್ನೇಹಿತರಲ್ಲಿ ಒಬ್ಬರಾದ ಶ್ರೀ ಸದಾಶಿವಯ್ಯ ಜಂಗಮಮೂರ್ತಿಯವರು. ನಮ್ಮ ತಂದೆಯ ಸಂಗಡ ಸದಾ ಇದ್ದು ಅವರ ಯಶಸ್ಸನ್ನು ಬಯಸುವವರು ಆಗಿದ್ದರು. ಇನ್ನೊಬ್ಬರು ತಾಳಿಕೋಟೆ ಅಣಪ್ಪಗೌಡ್ರು ಅವರಾದರೂ ಯಾವಾಗಲೂ ಅವರಿಗೆ ಹಣದ ರೂಪದಲ್ಲಿ ನೆರವಾಗುತ್ತಿದ್ದರು. ಬಾಗೇವಾಡಿ ತಾಲೂಕಿನ ಹೂಫಿನ ಹಿಪ್ಪರಗಿ ಗ್ರಾಮದ ಬ್ಯಾಕೋಡ ಗುರುಲಿಂಗಪ್ಪಣ್ಣನವರು ಮತ್ತು ಸಿಂದಗಿ ತಾಲೂಕಿನ ಬ್ಯಾಕೋಡ ಗ್ರಾಮದ ಅಂಣಪ್ಪಗೌಡ್ರು, ಸಿಂದಗಿಯಲ್ಲಿಯ ಶ್ರೀ ಶಂಕ್ರೆಪ್ಪಗೌಡ್ರು, ಶ್ರೀ ಗುರಣ್ಣ ಕುಲಕರ್ಣಿಯವರು, ಡಾ. ಬಾಪಿಕಟ್ಟಿಯವರು, ಕನ್ನವಳ್ಳಿಯ ಚನ್ನಪ್ಪಗೌಡ್ರು, ಬಮ್ಮನಜೋಗಿ ಗ್ರಾಮದ ಶ್ರೀ ಚಂದ್ರಶೇಪ್ಪಗೌಡ, ಬಮ್ಮನಜೋಗಿಯ ಶ್ರೀ ನೀಲಕಂಠಪ್ಪಗೌಡ್ರು, ಇಬ್ರಾಹಿಮಪ್ಪೂರದ ಜನ್ನಪ್ಪ ಸಾಹುಕಾರ, ಆಪ್ತಮಿತ್ರನಂತೆ ಸದಾ ಸಂಗಡ ಇರುತ್ತಿದ್ದ. ಪಡಗಾನೂರಿನ ಶಿವಪ್ಪ ಜೋಗುರ ಇವರಲ್ಲದೇ ಇಡಿ ತಾಲೂಕಿನ ತುಂಬ ಅವರ ಹಿತೈಷಿಗಳು ಇದ್ದರು. ಅಂತೆಯೇ ಅವರು ಪ್ರತಿ ಇಲೆಕ್ಷನದಲ್ಲಿ ಆರಿಸಿಬರುತ್ತಿದ್ದರು. ಇನ್ನೊಬ್ಬ ವ್ಯಕ್ತಿ ಚಿಕ್ಕರೂಗಿಯ ಲಕ್ಕಪ್ಪಣ್ಣ ಬೈರೊಡಗಿ ಇವರು ನಮ್ಮ ತಂದೆಯ ಸಲುವಾಗಿ ಎಲ್ಲವನ್ನು ತ್ಯಾಗ ಮಾಡುತ್ತಿದ್ದರು. ಅತಿ ಬಡತನದಲ್ಲಿ ಚಹಾದ ಅಂಗಡಿ ನಡೆಸುತ್ತಿದ್ದ ಶ್ರೀ ಬಸಪ್ಪ ದೇವಣಗಾಂವ ಅವರು ನಮ್ಮ ತಂದೆಯವರ ಮೇಲೆ ಅಪಾರ ಪ್ರೇಮವುಳ್ಳವರು. ದೇವರ ಹಿಪ್ಪರಗಿಯ ಮುಂಡಪ್ಪಗೌಡ ಯರನಾಳ, ಮಡಿವಾಳಪ್ಪಗೌಡಾ ಯರನಾಳ, ರುದ್ರಗೌಡಾ ಪಾಟೀಲ, ಬಸಗೊಂಡಪ್ಪಗೌಡಾ ಪಾಟೀಲ, ಕಲ್ಲಪ್ಪಾಗೌಡಾ ಜಟ್ಟಿಮನಿ, ಮಡಿವಾಳಪ್ಪಾಗೌಡ ಜಟ್ಟಿಮನಿ, ಬಾಳಾಸಾಹೇಬಗೌಡಾ ಪೊಲೀಸಪಾಟೀಲ, ಶ್ರೀ ಗದ್ದಿಗಮಠ ಸ್ವಾಮಿಗಳು, ಶ್ರೀ ಪರದೇಶಿಮಠದ ರೇಣುಕಾಚಾರ್ಯ ಸ್ವಾಮಿಗಳು ಮೇಲೆ ಹೇಳಿದ ಜನರನ್ನು ಎಷ್ಟೇ ನೆನೆಸಿದರು ಕಡಿಮೆ ಅಲ್ಲದೇ ಇನ್ನು 144 ಹಳ್ಳಿಗಳಲ್ಲಿಯ ಜನರು ಮಾಡಿದ ಉಪಕಾರವನ್ನು ಮರೆಯುವಂತಿಲ್ಲ. ನಮ್ಮ ತಂದೆಯವರು ಆಗರ್ಭ ಶ್ರೀಮಂತರಲ್ಲ.

ಅಪಾರ ಜನರ ಪ್ರೀತಿ ವಾತ್ಸಲ್ಯವೇ ಅವರಿಗೆ ರಕ್ಷಾಕವಚ. ಅವರ ಆಸ್ತಿ ಎಂದರೆ ಖಾದಿ ಧೋತರ, ಶರ್ಟ್, ಟೊಪ್ಪಿಗೆ (ರುಮಾಲು) ಮೇಲೆ ಕೋಟು ಅಥವಾ ಜಾಕೆಟು ಮತ್ತು ಇಡಿ ತಾಲೂಕಿನ ಜನತೆಯ ಅಪಾರ ಪ್ರೇಮ ಅಂತೆಯೇ ಮೂರು ಸಾರೇ ಇಲೆಕ್ಷನದಲ್ಲಿ ಆರಿಸಿಬಂದರು.

**ಆಪ್ತಕಾರ್ಯದರ್ಶಿಗಳು –**

ನಮ್ಮ ತಂದೆಯವರಿಗೆ ಯಾರೂ ಈಗಿನಂತೆ ಆಪ್ತ ಕಾರ್ಯದರ್ಶಿಗಳಿರಲಿಲ್ಲ. ನಮ್ಮೂರಿನ ಪ್ರೀತಿಯವರಾದ ಶ್ರೀ ಮಲ್ಲನಗೌಡಾ ಪಾಟೀಲ ತಲಾಟಿ, ಅಂಣಪ್ಪ ಬೆಲ್ಲುಬಗಿ ಸೊಸಾಯಟಿ ಸೆಕ್ರೆಟರಿ, ಶ್ರೀ ಸದಾಶಿವಯ್ಯನವರು, ಸಿದ್ರಾಮಪ್ಪ ಅಕಳವಾಡಿ ಶಿಕ್ಷಕರು. ಆಪ್ತಮಿತ್ರನಂತೆ ಇದ್ದ ಶಿವಪ್ಪ ಜೋಗುರ. ನಮ್ಮ ತಂದೆಯವರು ಬೆಂಗಳೂರಿನಿಂದ ಬಂದ ತಕ್ಷಣ ಮಾಡುವ ಕೆಲ್ಸವೆಂದರೆ ಈ ಮೇಲೆ ಹೇಳಿದ ಐದೂ ಜನರಿಗೆ ಬರಲು ಹೇಳುತ್ತಿದ್ದರು. ನಂತರ ಅವರ ಸಂಗಡ ವಿಚಾರ ವಿನಿಮಯ ಮಾಡುತ್ತಿದ್ದರು. ಈ ಮೇಲೆ ಹೇಳಿದ ಆಪ್ತ ಕಾರ್ಯದರ್ಶಿಗಳು ನಮ್ಮ ತಂದೆಯವರು ಹೇಳಿದ ಯಾವ ಕೆಲ್ಸವನ್ನು ಇಲ್ಲವೆಂದು ಅನ್ನುತ್ತಿದ್ದಿಲ್ಲ. ಅಂತೆಯೇ ಎಂಥೆಂಥ ಕಾರ್ಯಕ್ರಮಗಳು ಜರುಗುತ್ತಿದ್ದವು. ಸ್ವಾರ್ಥವಿಲ್ಲದ ಆಪ್ತರಿವರು.

ನಮ್ಮ ಊರು ಜಹಾಗಿರ ಊರು. ಊರಲ್ಲಿ ಬ್ರಾಹ್ಮಣರದೇ ಕಾರುಬಾರು. ಹೀಗಾಗಿ ಇಡಿ ಪಡಗಾನೂರಿನ ಸಮಗ್ರ (ಎಲ್ಲಾ) ಭೂಮಿಗಳು, ಜಹಗಿರದಾರರ ವಶದಲ್ಲಿ ಇತ್ತು. ಹೀಗಾಗಿ ಜನರು ಅವರು ಹೇಳಿದ ಹಾಗೇ ಕೇಳುತ್ತಿದ್ದರು. ಅಂದೊಂದು ದಿನ ಒಬ್ಬ ಜಹಗಿರದಾರ ಯಾರದೋ ಮಾತು ಕೇಳಿ ಆ ನಮ್ಮ ತಂದೆಯವರಿಗೆ ಬೇಜಾರಾಗುವಂತೆ ಮಾತನಾಡಿದ್ದ. ಅದು ಸಹಿಸಲಿಕ್ಕೆ ಆಗದ ರೀತಿಯಲ್ಲಿ ಇತ್ತು. ಆ ಪರಿಸ್ಥಿತಿಯಲ್ಲಿ ತಂದೆಯವರಿಗೆ ನೆನಪಾದ ನಂಬಿಗಸ್ತ ಮನುಷ್ಯ ಅವನೇ ಶಿವಗೊಂಡಪ್ಪಾ ಕೋಟಾರಗಸ್ತಿ. ಯಾವಾಗಲೂ ತಂದೆಯವರ ಕಷ್ಟಗಳಲ್ಲಿ ಪಾಲುದಾರನಾಗಿರುತ್ತಿದ್ದು, ಅವರು ಹೇಳಿದ ಮಾತು ಮೀರುತ್ತಿದ್ದಿಲ್ಲ. ಬೇಜಾರು ಆಗುವಂತೆ ಮಾತಾಡಿದ ಮನುಷ್ಯನನ್ನು ಹಿಡಿದು ತಂದು ಕೈ ಕಾಲು ಕಟ್ಟಿಹಾಕಿ ಕಣಕಿ ಹಾಕಲು ಶಿವಗೊಂಡಪ್ಪಾ ಕೋಟಾರಗಸ್ತಿಗೇ ಹೇಳಿದರು. ಅದೇ ರೀತಿ ಅವನು ಆ ಕೆಲ್ಸ ಮಾಡಿದನು. ಶಿವಗೊಂಡಪ್ಪಾ ಕೋಟಾರಗಸ್ತಿ ಅಂದರೆ ರಾಮನಭಕ್ತ ಹಣಮಂತನಂತೇ, ಯಾವಾಗಲೂ ಅವರ ಒಕ್ಕೆಯ ಶಿಷ್ಯನಾಗಿ ತನ್ನ ಪ್ರಾಣವನ್ನು ಕೊಡಲು ತಯಾರ ಆಗುತ್ತಿದ್ದನು.

**ಒಂದೇ ದಿನದಲ್ಲಿ ಪಡಗಾನೂರಿಗೆ ಲಾಯಟ –**

ನಮ್ಮ ತಂದೆಯವರು ಸರ್ವಧರ್ಮ ಸಮ್ಮೇಳನವನ್ನು ಇಟ್ಟುಕೊಂಡಿದ್ದರು. ಆದರೆ ನಮ್ಮೂರಿಗೆ ಲಾಯಟ ಬಂದಿರಲಿಲ್ಲ. ತಕ್ಷಣ ನಮ್ಮ ತಂದೆಯವರು ಸಿಂದಗಿಗೆ ಹೋಗಿ ಕೆಇಬಿ ಇಂಜನಿಯರಿಗೆ ಭೇಟಿಯಾದರು. ನಮ್ಮ ತಂದೆಯವರು ಮನೆಯಲ್ಲಿನ ಜೋಳ, ಶೆಜ್ಜಿ ಮಾರಿ ಆ ಹಣದಿಂದ ಡಿಪಾಜಿಟ್ ಕಟ್ಟಿದರು. ಆಗ Executive ಇಂಜನಿಯರಾದ ಶ್ರೀ ಹೊನ್ನತ್ತಿಯವರು ಒಂದು ದಿನದಲ್ಲಿ ಕಂಬಗಳನ್ನು ಹಾಕಿ ಲಾಯಿಟ ವ್ಯವಸ್ಥೆ ಮಾಡಿದರು. ಹೀಗೆ ಅನೇಕ ಕೆಲ್ಸಗಳನ್ನು ತಕ್ಷಣ ಮಾಡುತ್ತಿದ್ದರು.

## ದೇಶದ ಪ್ರಧಾನಿಗಳೊಂದಿಗೆ ಸಂಬಂಧ –

ನಮ್ಮ ತಂದೆಯವರ ಜನನ 1911. ಆಗ ಅವರಿಗೆ 17 ವರ್ಷಗಳು ಆಗಿದ್ದವು. ಉತ್ಸಾಹಿ ತರುಣರು ಆಗಿದ್ದರು. ಆಗ ಬ್ರಿಟಿಷ ಸರಕಾರ ನಮ್ಮ ದೇಶವನ್ನು ಆಳುತ್ತಿತ್ತು. ನಮ್ಮ ಊರು ಜಹಗಿರ ಊರು ಇದ್ದುದರಿಂದ ಸಾಮಾನ್ಯ ಜನರಿಗೆ ಬ್ರಿಟಿಷ ಸರಕಾರದ ಯಾವುದೇ ಕಾಲದ ಸವಲತ್ತುಗಳು ಇರಲಿಲ್ಲ. ಆಗ ಮುಂಬೈ ಸರಕಾರದಲ್ಲಿ ಶ್ರೀ ಮುರಾರಜಿ ದೇಸಾಯಿಯವರು ಡೆಪ್ಯೂಟಿ ಕಮಿಷನರ್ ಆಗಿದ್ದರು. ಒಮ್ಮೆ ನಮ್ಮೂರ ಮೇಲಿಂದ ವಿಜಾಪೂರಕ್ಕೆ ಹೋಗುವ ಕಾರ್ಯಕ್ರಮ ಶ್ರೀ ಮುರಾರಜಿ ದೇಸಾಯಿಯವರದು ಇತ್ತು. ಆಗ ಪಡಗಾನೂರ ರಸ್ತೆಯ ಮೇಲೆ ಮುರಾರಜಿಯವರನ್ನು ಭೇಟ್ಟಿಯಾಗಿ ನಮ್ಮೂರ ಪರಿಸ್ಥಿತಿ ಬಗ್ಗೆ ಹೇಳಿದರು. ಆಗ ಅವರು ಈಗ ಸಮಯವಿಲ್ಲ, ವಿಜಾಪೂರಕ್ಕೆ ಬರಲು ಹೇಳಿದರು. ನಮ್ಮ ತಂದೆಯವರು ತಕ್ಷಣ ವಿಜಾಪೂರಕ್ಕೆ ಹೋದರು. ಅಲ್ಲಿಯೂ ಸಹ ಅವರು ಸೋಲಾಪೂರಕ್ಕೆ ಬರಲು ಹೇಳಿದರು. ನಮ್ಮ ತಂದೆಯವರು ಸೋಲಾಪೂರಕ್ಕೆ ಹೋದರು. ಅಲ್ಲಿಯೂ ಸಹ ಅವರು ಮುಂಬೈಗೆ ಬರಲು ಹೇಳಿದರು. ಆಗ ನಮ್ಮ ತಂದೆಯವರು ಮುಂಬೈಗೆ ಹೋದರು ಅಲ್ಲಿ ಭೇಟಿಯಾಗಿ ಬಂದರು. ಅಂದಿನಿಂದ ನಮ್ಮ ತಂದೆಯವರ ಹಾಗೂ ಮುರಾರಜಿ ದೇಸಾಯಿಯವರ ಸ್ನೇಹ ಬೆಳೆಯಿತು. (ಅಂದರೆ 1928 ರಿಂದ ಸ್ನೇಹ ಬೆಳೆಯಿತು). ಹೀಗಾಗಿ 1977 ರಲ್ಲಿ ಮಾನ್ಯ ನಿಜಲಿಂಗಪ್ಪನವರು ನಮ್ಮ ತಂದೆಯವರಿಗೆ ಜನತಾ ಪಕ್ಷದ ಇಲೆಕ್ಷನ್ ಟಿಕೇಟ ಕೊಡದಿದ್ದಾಗ ತಕ್ಷಣವೇ ದೆಹಲಿಗೆ ಹೋಗಿ ಟಿಕೆಟ ಪಡೆದುಕೊಂಡೇ ಬಂದರು.

## ಕಾವ್ಯಕ್ಕೆ ವಸ್ತುವಾದರು –

1980 ನೇ ಇಸ್ವಿ ಜೂನ್ 26 ರಂದು ಸೈಕಲ್ ಮೇಲೆ ಕುಳಿತು ಶಿವಣಗಿಯಿಂದ ಪಡಗಾನೂರಿಗೆ ಬರುವಾಗ ನಮ್ಮೂರ ಸಮೀಪದಲ್ಲಿ ಗುಲಬರ್ಗಾದಿಂದ ಅಥಣಿಗೆ ಹೋಗುವ Express ಬಸ್ಸ ಡ್ರೈವ್ಹರನ ತಪ್ಪಿನಿಂದ ಸೈಕಲ್‌ಗೆ ಡಾಯಿಸಿದಾಗ ಅದೇ ಸ್ಥಳದಲ್ಲಿ ಪ್ರಜ್ಞೆ ತಪ್ಪಿ ಬಿದ್ದರು. ಮೆದುಳಿನಲ್ಲಿ ರಕ್ತಸ್ರಾವ ಆಗಿತ್ತು. ಹೀಗಾಗಿ ಅವರು ಶಿವಾಧೀನರಾದರು. ಇದನ್ನು ನೋಡಿ ದಶರಥ ಪರಸಪ್ಪ ನಾಟೀಕಾರ ಅನ್ನುವ ಒಬ್ಬ ಹರಿಜನ ವಿದ್ಯಾರ್ಥಿ ಈ ಹಾಡನ್ನು ಬರೆದನು. ಆ ಹಾಡಿನ ಹೆಸರು 'ಕೀರ್ತಿ ಕಳಸ'.

**– ಡಾ. ಸಾಹೇಬಗೌಡ ಎಸ್. ಪಾಟೀಲ**

ಪಡಗಾನೂರ

ಇವರೇ ನಮ್ಮ ಗೌಡರು । ಶ್ರೇಷ್ಠ ಶಂಕರಗೌಡರು ।
ನೋಡತಲೇ ಕಣ್ಮರೆಯಾಗಿ ಹೋದರು ಆ. ಆ.
॥ ನೋಡತಲೇ ಕಣ್ಮರೆಯಾಗಿ ಹೋದರು ॥ ಪ ॥

ಶಾಂತಿ ಹೃದಯ ಮನಸ್ಸುಳವರು । ಶ್ರೇಷ್ಠ ತತ್ವಜ್ಞಾನಿಗಳವರು !
ಶ್ರೇಷ್ಠ ತತ್ವಜ್ಞಾನಿಗಳವರುsss ಶ್ರೇಷ್ಠ ತತ್ವಜ್ಞಾನಿಗಳವರು !
ಸರಿಯಾದ ನ್ಯಾಯ ನೀಡುವವರು ॥ ॥ 1 ॥

ಜಾತಿಭೇದ ಅಳಿದವರು! ನೀತಿಭೋದವ ಕಲಿಸಿದವರು ।
ಶ್ರೇಷ್ಠ ರಾಜಕಾರಣಿ ಅವರು ॥ ॥ 2 ॥

ರಾಜ್ಯಶಾಸ್ತ್ರ ಅರಿತವರವರು । ರಾಜಕೀಯ ಬಲ್ಲವರು ।
ರಾಜಕಿಯ ಬಲ್ಲವರವರು । ರಾಜಕಿಯ ಬಲ್ಲವರವರು ।
ಕಾಯಿದೇ ಕಾನೂನ ತಿಳಿದವರವರು । ॥ 3 ॥

ಹರಿಜನರುದ್ಧಾರಕರವರು । ಕ್ಷೇತ್ರ ಸೇವೆ ಪರಿಪಾಲಕರವರು ।
ಕ್ಷೇತ್ರ ಸೇವೆ ಪರಿಪಾಕರವರು । ಕ್ಷೇತ್ರ ಸೇವೆ ಪರಿಪಾಲಕರವರು ।
ಕ್ಷೇತ್ರಕ್ಕೆ ದೊಡ್ಡ ಕೃಷಿಕರು ಅವರು ॥ 4 ॥

ಭಾಷಣಕಾರ ಅವರು । ಎಲ್ಲ ಹಳ್ಳಿ ತಿರುಗಿದವರು ।
ಎಲ್ಲ ಹಳ್ಳಿ ತಿರುಗಿದವರು। ಎಲ್ಲ ಹಳ್ಳಿ ತಿರುಗಿದವರು ।
ಬೆಂಗಳೂರ, ದಿಲ್ಲಿ ಅರಿತವರು ॥ 5 ॥

ಸಿಂದಗಿ ತಾಲೂಕಿನ ಮೂರು ಸಲದ ಶಾಸಕರವರು ।
ಮೂರು ಸಲದ ಶಾಸಕರವರು । ಮೂರು ಸಲದ ಶಾಸಕರವರು ।
ಮಂತ್ರಿಪದವಿ ಕಾಯುತಿತ್ತು ॥ 6 ॥

ಚಂದಚಲುವ ಶಂಕರಗೌಡರು । ನಮ್ಮ ನಿಮ್ಮೆಲ್ಲರಿಂದ
ನಮ್ಮ ನಿಮ್ಮೆಲ್ಲರಿಂದ । ನಮ್ಮ ನಿಮ್ಮೆಲ್ಲರಿಂದ ।
ನಮ್ಮ ನಿಮ್ಮೆಲ್ಲರಿಂದ । ಸತಿಯ ಸತ್ಪುತ್ರರಿಂದ ।
ಬೇಗನೇ ಅಗಲಿ ಹೋದವರು ॥ 7 ॥

ಪಾಟೀಲರ ಮನೆತನದಲ್ಲಿ ಭವ್ಯವಾದ ಕಳಸೊಂದಿತ್ತು
ಭವ್ಯವಾದ ಕಳಸೊಂದಿತ್ತು । ಭವ್ಯವಾದ ಕಳಸೊಂದಿತ್ತು
ಬೇಗನೇ ಕಳಸ ಮಾಯವಾಯಿತು ॥ 8 ॥

**ದಶರಥ ಪರಸಪ್ಪ ನಾಟಿಕಾರ**

ಪಡಗಾನೂರ

# ಸರಳ ಹಾಗೂ ಸಾದಾ ಬದುಕಿನ ಪಡಗಾನೂರ ಶಂಕರಗೌಡ್ರು

ಕೆಲವೊಂದು ಜನರು ಊರಿನಿಂದ, ಜಾತಿಯಿಂದ ಹೆಸರು ಪಡೆದುಕೊಂಡಿದ್ದರೆ, ಕೆಲವರಿಂದ ಊರಿಗೆ ಹೆಸರು ಬರುತ್ತದೆ. ಶಂಕರಗೌಡರಿಂದ ಸಿಂದಗಿ ತಾಲೂಕಿನ 'ಪಡಗಾನೂರ' ಹೆಸರು ಪಡೆದುಕೊಂಡಿದೆ. ಅಡ್ಡಹೆಸರು 'ಪಾಟೀಲ' ಅಂತಾ ಇದ್ದರೂ 'ಪಡಗಾನೂರ' ಶಂಕರಗೌಡರೆಂಬುದೇ ಮನೆಮಾತು.

ವಿಜಾಪುರ ತಾಲೂಕಿನ ಬಬಲೇಶ್ವರದ ಅಳಿಯಂದಿರು ಶಂಕರಗೌಡ್ರು. ಅದೇ ನನ್ನ ಹುಟ್ಟೂರು. ಹೀಗಾಗಿ ಅವರೊಂದಿಗೆ ಸಹಜ ಒಡನಾಟ ನನಗೆ ಲಭಿಸಿದೆ. ಬಬಲೇಶ್ವರದ ಶಾಂತವೀರ ಸ್ವಾಮಿಗಳಿಗೆ ಅತ್ಯಂತ ಪ್ರಿಯರು. ಬಬಲೇಶ್ವರದ ಮಠದಲ್ಲಿ ಪ್ರತಿವರ್ಷ ಶ್ರಾವಣ ಮಾಸದಲ್ಲಿ ಪುರಾಣ ಪ್ರವಚನ ಕಾರ್ಯಕ್ರಮಗಳು ನಡೆಯುತ್ತಿದ್ದವು. ಶಂಕರಗೌಡ್ರು ತಾವೇ ಪ್ರವಚನ ಮಾಡಿ ಜನರನ್ನು ರಂಜಿಸುತ್ತಿದ್ದರು. ಅಂದಿನ ದಿವಸ ಪುರಾಣಿಕರ ಕಾರ್ಯಕ್ರಮವೇ ನಡೆಯುತ್ತಿರಲಿಲ್ಲ. ಶಿಕ್ಷಣ, ಅಧ್ಯಾತ್ಮ ವಿಷಯದಲ್ಲಿ ಬಹಳ ಚೆನ್ನಾಗಿ ಮಾತನಾಡುತ್ತಿದ್ದರು.

ಶಂಕರಗೌಡ್ರು ಎಂ.ಎಲ್.ಎ. ಆಗಿದ್ದರೂ ಒಂದು ಸಾದಾ ಸೈಕಲ್ ಮೇಲೆ ತಿರುಗಾಡುತ್ತಿದ್ದರು. ಎಂದೂ ಹಮ್ಮು-ಬಿಮ್ಮುಗಳಿಂದ ತಿರುಗಾಡಿದವರಲ್ಲ, ನಡೆದುಕೊಂಡವರಲ್ಲ. ಎಲ್ಲರನ್ನೂ ಸರಳತೆಯಿಂದಲೇ ಮಾತನಾಡಿಸುವವರು. ಅಡತಿ ಅಂಗಡಿಗಳಲ್ಲಿನ ರೈತರ ಬುತ್ತಿಯಲ್ಲಿ ಊಟ ಮಾಡುತ್ತಿದ್ದರು.

ಒಮ್ಮೆ ನಾನು ಬಜಾರದಲ್ಲಿ ಭೆಟ್ಟಿಯಾದಾಗ, ಸದ್ಯ ನೀವು ಪಡಗಾನೂರಕ್ಕೆ ಬರಬೇಕೆಂದು ಕೇಳಿ, ಕಾರ ತೆಗೆದುಕೊಂಡು ಬಂದು ನನ್ನನ್ನು ಪಡಗಾನೂರಕ್ಕೆ ಕರೆದುಕೊಂಡು ಹೋಗಿ ಬಸವ ಜಯಂತಿಯಲ್ಲಿ ಪಾಲ್ಗೊಳ್ಳುವಂತೆ ಮಾಡಿದರು. ಹೀಗೆ ಹಲವಾರು ಸಲ ಪಡಗಾನೂರಿನ ಕಾರ್ಯಕ್ರಮಗಳಲ್ಲಿ ಭಾಗವಹಿಸಲು ಅವಕಾಶ ಮಾಡಿಕೊಟ್ಟರು. ಜನರ ಕಷ್ಟ ಕಾರ್ಪಣ್ಯಗಳಿಗೆ ಸ್ಪಂದಿಸುತ್ತಿದ್ದರು.

ಯಾರದಾದರೂ ಕೆಲಸವಿದ್ದರೆ, ಸ್ವತಃ ಅವರನ್ನು ಬೆಂಗಳೂರಿಗೆ ಕರೆದುಕೊಂಡು ಹೋಗಿ ಕೆಲಸ ಮಾಡಿಕೊಡುತ್ತಿದ್ದರು. ಲಂಚದ ಭಾವನೆಯೇ ಅವರಿಗಿರಲಿಲ್ಲ. ಸಾದಾ ಧೋತರ, ಅಂಗಿ, ಮೇಲೆ ಜಾಕೀಟು ಧರಿಸುತ್ತಿದ್ದರು. ಎಲ್ಲ ಕಾಗದ ಪತ್ರಗಳು, ಅರ್ಜಿಗಳು, ಆದೇಶಗಳು ಜಾಕೀಟದಲ್ಲಿಯೇ ಇರುತ್ತಿದ್ದವು. ಒಮ್ಮೊಮ್ಮೆ ರುಮಾಲು ಕೂಡಾ ಸುತ್ತುತ್ತಿದ್ದರು. ಖಾದೀ ಪ್ರಿಯರು, ಗಾಂಧೀವಾದಿಗಳೂ ಆಗಿದ್ದರಿಂದ ಯಾವಾಗಲೂ ಖಾದೀ ಧರಿಸುತ್ತಿದ್ದರು.

ಒಮ್ಮೆ ನಮ್ಮ ಮನೆಯಲ್ಲಿ 'ಮುಂಜಾನೆ' ಉಪ್ಪಿಟ್ಟಿನ ಉಪಹಾರ ನಡೆದಿತ್ತು. ಆಗ ಶಂಕರಗೌಡರು ಮನೆಗೆ ಬಂದರು. ಅವರಿಗೂ 'ಉಪ್ಪಿಟ್ಟು' ಕೊಡಲು, ಛೀ ಛೀ ನಾನು ಉಪ್ಪಿಟ್ಟು

ತಿನ್ನುವುದಿಲ್ಲ. ನನ್ನ ಉಪಹಾರ ಎರಡು ಜೋಳದ ರೊಟ್ಟಿ, ಹಿಂಡಿ, ಮೊಸರು ಎಂದು ಹೇಳಿ ಅದನ್ನು ಪಡೆದು ತಿಂದರು. ರೊಟ್ಟಿ ತಿಂದ ಮೇಲೆ ಉಪ್ಪಿಟ್ಟು ಕೊಡಲು ಹೇಳಿದಾಗ ಎಲ್ಲರೂ 'ಗೊಳ್ಳೆಂದು' ನಕ್ಕರು. ಸರಳತೆ, ಸೌಜನ್ಯತೆ, ಮೂರ್ತರೂಪಗೊಂಡಿದ್ದವು.

ಗ್ರಾಮೀಣ ಪ್ರದೇಶದಲ್ಲಿದ್ದುಕೊಂಡು, ಶಾಸಕರಾಗಿ ಜನತೆಯ ಸೇವೆ ಮಾಡಿದ್ದಲ್ಲದೇ ಎಂದೂ ಹಣ ಮಾಡಲಿಲ್ಲ. 'ಹಣ' ಗಳಿಸಬೇಕೆಂಬ ಆಸೆಯೂ ಇರಲಿಲ್ಲ. ಇಂದು ಇಂದಿಗೆ, ನಾಳೆ ನಾಳೆಗೆ ಎಂದು ಬದುಕಿದವರು. ಸೈಕಲ್ ಮೇಲೆ ಸಂಚರಿಸುವಾಗಲೇ ಆಕಸ್ಮಿಕ ಅಪಘಾತದಲ್ಲಿ ಮರಣಾಧೀನರಾದರು. ಜೀವನದಲ್ಲಿ ಇನ್ನೂ ಆಸೆ –ಆಕಾಂಕ್ಷೆಗಳನ್ನು ಇಟ್ಟುಕೊಂಡಿದ್ದರು. ಆದರೆ ವಿಧಿಯ ಕೈವಾಡವೇ ಬೇರೆ.

**– ಶ್ರೀ ಶಂ.ಗು. ಬಿರಾದಾರ**

'ಕಮಲ ಕುಂಜ' ಶಾಸ್ತ್ರಿ ನಗರ, ವಿಜಾಪುರ

# ಅಪರೂಪದ ವ್ಯಕ್ತಿ ಪಡಗಾನೂರ ಶ್ರೀ ಶಂಕರಗೌಡರು

ಬಡತನ ಬರಗಾಲಕ್ಕೆ ಹೆಸರಾದ ಜಿಲ್ಲೆ ವಿಜಾಪುರ. ಆದರೆ ಇಲ್ಲಿ ಪ್ರತಿಭೆಗೇನು ಕೊರತೆ ಇಲ್ಲ, ಕ್ರಾಂತಿ ಪುರುಷ ಬಸವಣ್ಣನಿಗೆ ಜನ್ಮ ಕೊಟ್ಟ ಊರು ಬಸವನ ಬಾಗೇವಾಡಿ, ಕಲ್ಯಾಣ ಕ್ರಾಂತಿಯ ನಂತರ ಶರಣರನ್ನು ಹಾಗೂ ಅವರು ರಚಿಸಿದ ವಚನ ಸಾಹಿತ್ಯದ ರಾಶಿಯನ್ನು ರಕ್ಷಣೆ ಮಾಡಿ ಉಳವಿಗೆ ಮುಟ್ಟಿಸಿದ ವೀರ ಶರಣ ಮಡಿವಾಳ ಮಾಚಯ್ಯನಿಗೆ ಜನ್ಮ ಕೊಟ್ಟ ಊರು ಸಿಂದಗಿ ತಾಲ್ಲೂಕಿನ ದೇವರ ಹಿಪ್ಪರಗಿ. ಪತ್ರಿಕಾ ಪ್ರಪಂಚಕ್ಕೆ ಮೊಹರೆ ಹಣಮಂತರಾಯ ಹಾಗೂ ಪಿ.ಬಿ. ನಾಯಕರಂಥ ಮಹಾವ್ಯಕ್ತಿಗಳನ್ನು ಕೊಟ್ಟದ್ದು ದೇವರ ಹಿಪ್ಪರಗಿಯ ನಾಯಕರ ಮನೆತನ. ನಟ ಸಾರ್ವಭೌಮ ಕಲಾರತ್ನ ಹಂದಿಗನೂರ ಸಿದ್ಧರಾಮಪ್ಪನವರು ಸಿಂದಗಿ ತಾಲೂಕಿನವರು. 'ಸಿಂದಗಿಯ ಮಹಿಮೆ ಬಿಂದಗಿಯಲ್ಲಿ' ಎಂಬ ಪ್ರತೀತಿಯಿಂದ ಪ್ರಸಿದ್ಧಿಯನ್ನು ಪಡೆದ ಜಕ್ಕಪ್ಪಯ್ಯನವರ ಮಠ ಹಾಗೂ ಧಾರ್ಮಿಕ, ಶೈಕ್ಷಣಿಕ, ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ಸಾಧನೆಯ ಸೋಪಾನಗಳನ್ನೇರಿ ಸಿದ್ಧಿಯ ಶಿಖರವನ್ನು ಮುಟ್ಟಿದ ಶ್ರೀ ಸಾರಂಗದೇವ ಶಿವಾಚಾರ್ಯರ ಸಾರಂಗ ಮಠ ಸಿಂದಗಿಯಲ್ಲಿವೆ.

ಪಡಗಾನೂರು ಸಿಂದಗಿ ತಾಲ್ಲೂಕಿನ ಜಹಗೀರಿಯ ಒಂದು ಚಿಕ್ಕ ಹಳ್ಳಿ. ಅದು ಇಂದು ಶಂಕರಗೌಡರ ಪಡಗಾನೂರೆಂದೇ ಪ್ರಸಿದ್ಧಿಯನ್ನು ಪಡೆದಿದೆ. ಶಂಕರಗೌಡರು ಸುಕ್ಷೇತ್ರ ಬಂಥನಾಳದ ಸಮೀಪದಲ್ಲಿರುವ ಸುರಗೀ ಹಳ್ಳಿಯಲ್ಲಿ 1911 ನೇಯ ಇಸ್ವಿಯಲ್ಲಿ ಜನಿಸಿದರು. ಶಿವಣಗಿ ಗ್ರಾಮದಲ್ಲಿ ಪ್ರಾಥಮಿಕ ಶಿಕ್ಷಣದ ಒಂದನೇಯ, ಎರಡನೆಯ ಹಾಗೂ ಮೂರನೇಯ ತರಗತಿಯವರೆಗೆ ಅಭ್ಯಾಸ ಪೂರೈಸಿಕೊಂಡು ನಾಲ್ಕನೆಯ ತರಗತಿಯನ್ನು ಹುನಗುಂದದ ಶ್ರೀ ಮಠ ಮಾಸ್ತರರ ಉಚಿತ ಪ್ರಸಾದ ನಿಲಯದಲ್ಲಿದ್ದುಕೊಂಡು ಕಲಿತರು. ಮುಂದೆ ಐದು, ಆರು ಹಾಗೂ ಏಳನೇಯ ತರಗತಿಗಳನ್ನು ಸುಕ್ಷೇತ್ರ ಲಚ್ಯಾಣದಲ್ಲಿ ತಮ್ಮ ಆಪ್ತರ ಮನೆಯಲ್ಲಿದ್ದುಕೊಂಡು ಕಲಿತರು. ಸ್ಕಾಲರಶಿಪ್ ಪರೀಕ್ಷೆ ಹಾಗೂ ಮುಲ್ಕೀ ಪರೀಕ್ಷೆ ಎರಡಕ್ಕೂ ಫಾರ್ಮ ತುಂಬಿದ್ದರು. ಆದರೆ ಎರಡೂ ಪರೀಕ್ಷೆಗಳು ಏಕ ಕಾಲಕ್ಕೆ ನಡೆಯುವವೆಂದು ವೇಳಾಪತ್ರಿಕೆ ಬಂದಾಗ ತಿಳಿದು ಬಂತು. ಆಗ ಬಾಲಕ ಶಂಕರಗೌಡರು ಶಿಕ್ಷಣಾಧಿಕಾರಿಗಳಿಗೆ ಭೆಟ್ಟಿಯಾಗಿ 'ನಾನು ಮುಲ್ಕೀ ಪರೀಕ್ಷೆ ಹಾಗೂ ಸ್ಕಾಲರಶಿಪ್ ಪರೀಕ್ಷೆಗಳಿಗೆರಡಕ್ಕು ಕೂಡುತ್ತೇನೆ ವೇಳಾ ಪತ್ರಿಕೆಯ ಸಮಯದಲ್ಲಿ ಬದಲಾವಣೆ ಮಾಡಿಕೊಡಬೇಕೆಂದು' ಕೇಳಿಕೊಂಡಾಗ, ಈ ಬಾಲಕನ ಬೇಡಿಕೆ ನ್ಯಾಯ ಸಮ್ಮತವಾದೆಂದು ತಿಳಿದು ವೇಳಾ ಪತ್ರಿಕೆಯಲ್ಲಿ ಸೂಕ್ತ ಬದಲಾವಣೆ ಮಾಡಿಕೊಟ್ಟು ಅವರಿಗೆ ಎರಡೂ ಪರೀಕ್ಷೆಗಳಿಗೆ ಕೂಡಲು ಅಧಿಕಾರಿಗಳು ಅನುಕೂಲ ಮಾಡಿಕೊಟ್ಟರು. 'ಬೆಳೆಯ ಸಿರಿ ಮೊಳಕೆಯಲ್ಲಿ' ಎಂಬಂತೆ ಧೈರ್ಯ ಸಾಹಸಗಳಿಗೆ ಬಾಲಕ ಶಂಕರಗೌಡರು ಹೆಸರಾಗಿದ್ದರು. ಮುಂದೆ ಹೈಸ್ಕೂಲ ಶಿಕ್ಷಣಕ್ಕಾಗಿ ವಿಜಾಪುರದಲ್ಲಿ ಹೆಸರು ಹಚ್ಚಲಾಗಿತ್ತು. ದೇಶದ ಸ್ವಾತಂತ್ರ್ಯ ಹೋರಾಟದ ಸಲುವಾಗಿ ಹೈಸ್ಕೂಲನ್ನು ತೊರೆದು ಸ್ವಾತಂತ್ರ್ಯ ಚಳವಳಿಯಲ್ಲಿ ತೊಡಗಿದರು. ಆಗ ಅವರನ್ನು ಕಂಡಲ್ಲಿ ಹಿಡಿಯಬೇಕೆಂದು ವಾರಂಟ್ ಇದ್ದರೂ ಸಹ ಸಾಧುಗಳ ವೇಷ ಹಾಕಿಕೊಂಡು ತಿರುಗುತ್ತಾ

ಭಾಷಣ ಮಾಡಿ ಜನರನ್ನು ಚಳವಳಿಯಲ್ಲಿ ಭಾಗವಹಿಸುವಂತೆ ಹುರಿದುಂಬಿಸುತ್ತಿದ್ದರು. ಕ್ವಿಟ್ ಇಂಡಿಯಾ ಚಳವಳಿಯ ಬಿರುಗಾಳಿ ದೇಶದ ತುಂಬೆಲ್ಲಾ ರಭಸದಿಂದ ಬೀಸುತ್ತಿದ್ದಾಗ ಶ್ರೀ ಶಂಕರಗೌಡರು ಜನರ ಸಂಘಟನೆಗಾಗಿ ಕೋರವಾರದಲ್ಲಿ ಭಾಷಣ ಮಾಡುತ್ತಿದ್ದರು. ಪೋಲಿಸರು ಅವರನ್ನು ಬಂಧಿಸಿದರು. ಆಗ ಅವರನ್ನು ಎರಡು ವರುಷ ಬೀಸಾಪೂರ ಹಾಗೂ ವರಾಡ ಸೆರೆಮನೆಗಳಲ್ಲಿಟ್ಟರು. ಆ ಸಂದರ್ಭದಲ್ಲಿ ಛಟಿಗಿ ಶಿಕ್ಷೆಯನ್ನು ಕೂಡ ಅನುಭವಿಸಿದರು. ತನ್ನ ಸಾಮರ್ಥ್ಯದಿಂದ ಒಬ್ಬ ವ್ಯಕ್ತಿ ಹೇಗೆ ಶಕ್ತಿಯಾಗಿ ಬೆಳೆಯುತ್ತಾನೆಂಬುದನ್ನು ಸಮಾಜಕ್ಕೆ ತೋರಿಸಿಕೊಟ್ಟರು.

1952 ರ ಪ್ರಥಮ ಚುನಾವಣೆಯಲ್ಲಿ ಸಿಂದಗಿ ತಲ್ಲೂಕಿನ ಅರ್ಧ ಭಾಗ ಹಾಗೂ ಬಾಗೇವಾಡಿ ತಾಲೂಕಿನ ಅರ್ಧ ಹಳ್ಳಿಗಳನ್ನೊಳಗೊಂಡ ಮತ ಕ್ಷೇತ್ರದಿಂದ ಮುಂಬೈ ಅಸೆಂಬ್ಲಿಗೆ ಕಾಂಗ್ರೆಸ್ ಪಕ್ಷದಿಂದ ಆಯ್ಕೆಯಾದರು.

1957–62 ರ ಅವಧಿಯಲ್ಲಿ ಮೈಸೂರು ರಾಜ್ಯದ ಶಾಸಕರಾಗಿ ಎರಡನೆಯ ಭಾರಿಗೆ ಆಯ್ಕೆಯಾದರು. ಮಾನ್ಯ ಶ್ರೀ ಬಿ.ಡಿ. ಜತ್ತಿಯವರು ಮುಖ್ಯ ಮಂತ್ರಿಯಾಗಿದ್ದಾಗ ಶ್ರೀ ಮಲ್ಲಪ್ಪಣ್ಣ ಸುರಪೂರ ಹಾಗೂ ಶ್ರೀ ಶಂಕರಗೌಡರು ಅವರ ಕಟ್ಟಾ ಅಭಿಮಾನಿಗಳೆಂದೇ ಗುರುತಿಸಲ್ಪಟ್ಟರು. ಆದರೆ ಮುಂದಿನ ಚುನಾವಣೆಯಲ್ಲಿ ಕಾಂಗ್ರೇಸ್ ಪಕ್ಷದಿಂದ ಟಿಕೆಟ್ ದೊರೆಯದ್ದಕ್ಕಾಗಿ ಕಾಂಗ್ರೇಸ್ ಪಕ್ಷವನ್ನು ತೊರೆದರು. 1971 ರಲ್ಲಿ ನಡೆದ ತಾಲೂಕಾ ಅಭಿವೃದ್ಧಿ ಮಂಡಳಿಯ ಚುನಾವಣೆಯಲ್ಲಿ ಜನ ಅವರನ್ನು ಹುರಿದುಂಬಿಸಿ ಸ್ವತಂತ್ರ ಅಭ್ಯರ್ಥಿಯನ್ನಾಗಿ ಆರಿಸಿ ತಂದರು. ಮುಂದೆ 1972 ರಲ್ಲಿ ಸಂಸ್ಥಾ ಕಾಂಗ್ರೆಸ್ ಟಿಕೆಟ್ ಪಡೆದು ವಿಧಾನ ಸಭೆಯ ಸದಸ್ಯರಾಗಿ ಆಯ್ಕೆಯಾದರು. 1978 ರಲ್ಲಿ ಜನತಾ ಪಕ್ಷದಿಂದ ವಿಧಾನ ಸಭೆಗೆ ಸ್ಪರ್ಧಿಸಲು ಬೆಂಗಳೂರಿನಲ್ಲಿ ಅವರಿಗೆ ಟಿಕೆಟ್ ದೊರೆಯಲಿಲ್ಲ. ಆಗ ಮಾನ್ಯ ಮುರಾರ್ಜಿ ದೇಸಾಯಿಯವರು ಪ್ರಧಾನ ಮಂತ್ರಿಯಾಗಿದ್ದರು. ಆಗ ಗೌಡರು ದೆಹಲಿಗೆ ಹೋಗಿ ಅವರ ಹಳೆಯ ಸ್ನೇಹದ ಬಲದಿಂದ ಜನತಾ ಪಕ್ಷದ ಟಿಕೆಟ್ ಪಡೆದರು. ಆದರೆ ಅವರಿಗೆ ಜಯ ದೊರೆಯಲಿಲ್ಲ. ಈ ರೀತಿ ಅವರು ರಾಜಕೀಯ ಜೀವನದಲ್ಲಿ ಸೋಲು ಗೆಲುವುಗಳನ್ನನುಭವಿಸಿದರೂ ಸಾಮಾಜಿಕ ಸೇವೆಯನ್ನು ಅತಿ ಆಸಕ್ತಿಯಿಂದ ಮಾಡುತ್ತಿದ್ದರು.

'A tree is known by its fruit' ಒಂದು ಮರದ ಯೋಗ್ಯತೆ ಗೊತ್ತಾಗುವುದು ಅದರ ಹಣ್ಣಿನಿಂದ ಎಂಬುದೊಂದು ಗಾದೆ ಆ ರೀತಿಯಲ್ಲಿ ಶ್ರೀ ಶಂಕರಗೌಡರು ಫಲಪ್ರದವಾದ ಪರೋಪಕಾರಿ ಕೆಲಸಗಳನ್ನು ಸಾಕಷ್ಟು ಮಾಡಿದ್ದಾರೆ. ಇನ್ನೊಬ್ಬರ ಕಷ್ಟ ನೋವು ದುಃಖಗಳಿಗೆ ಸ್ಪಂದಿಸುವ ಸಹಾನುಭೂತಿಯ ಸೆಲೆ ಅವರ ಹೃದಯದಲ್ಲಿ ಸದಾ ಚಿಮ್ಮುತ್ತಿತ್ತು. ಮೊದಲಿಗೆ ಪಡಗಾನೂರಲ್ಲಿ ಐದನೆಯ ತರಗತಿಯವರೆಗೆ ಮಾತ್ರ ಕಲಿಯಲು ಅವಕಾಶವಿತ್ತು. ಆರನೆಯ ಮತ್ತು ಏಳನೆಯ ತರಗತಿಯವರೆಗೆ ಕಲಿಯುವ ವಿದ್ಯಾರ್ಥಿಗಳು ದೇವರ ಹಿಪ್ಪರಗಿಗೆ ಹೋಗಬೇಕಾಗುತ್ತಿತ್ತು. ಈ ತೊಂದರೆಯನ್ನು ತಪ್ಪಿಸಲು ಏಳನೆಯ ತರಗತಿಯವರೆಗೆ ಕಲಿಯಲು ಶಿಕ್ಷಣ ಇಲಾಖೆಯಿಂದ ಪರವಾನಿಕೆ ತಂದರು. ಆದರೆ ವಿದ್ಯಾರ್ಥಿಗಳ ಸಂಖ್ಯೆ ಕಡಿಮೆ ಇದ್ದ ಸಲುವಾಗಿ ಜಿಲ್ಲೆಯ ನಾನಾ ಭಾಗಗಳಿಂದ ಹುಡುಗರನ್ನು ಕರೆತಂದರು. ಅವರಿಗೆ ಉಚಿತ ಪ್ರಸಾದ

ನಿಲಯ ಹಾಗೂ ವಾರದ ಮನೆಯ ವ್ಯವಸ್ಥೆ ಮಾಡಿದರು. ಹಿರೇಗುಳಬಾಳದ ವಿಠ್ಠಲ ಹಾಲಪ್ಪ ಬಾರಿಕೇರಿ ಎಂಬ ಬಡ ವಿದ್ಯಾರ್ಥಿ ಬಡತನದಿಂದ ಕಲಿಯುವದನ್ನು ಬಿಟ್ಟು ಕೂಲಿ ಕೆಲಸ ಮಾಡುತ್ತಿದ್ದ. ಅವನನ್ನು ನಮ್ಮೂರಿಗೆ ಕರೆತಂದು ಆರನೆಯ ವರ್ಗಕ್ಕೆ ಹೆಸರು ಹಚ್ಚಿದರು ಅವನು ಪ್ರತಿಭಾವಂತನಿದ್ದ ಕಾರಣ ಒಮ್ಮೆಲೆ ಮುಲ್ಕೀ ಪರೀಕ್ಷೆಗೆ ಕೂಡಲು ವಿಶೇಷ ಪರವಾನಿಕೆ ತಗಿಸಿಕೊಟ್ಟರು. ಅವನು ಪರೀಕ್ಷೆಯಲ್ಲಿ ಹೆಚ್ಚಿನ ಅಂಕಗಳನ್ನು ಪಡೆದು ಉತ್ತೀರ್ಣನಾದ ಕಾರಣ ತಾಳಿಕೋಟೆಯ ಎಸ್.ಕೆ. ಹೈಸ್ಕೂಲಿನಲ್ಲಿ ಕಲಿಯಲು ಉಚಿತ ಪ್ರಸಾದ ನಿಲಯದ ವ್ಯವಸ್ಥೆ ಮಾಡಿಕೊಟ್ಟರು. ಹೈಸ್ಕೂಲ ಶಿಕ್ಷಣದ ನಂತರ ಬಾಗಲಕೋಟೆಯ ಶ್ರೀ ಬಸವೇಶ್ವರ ಕಾಲೇಜಿನಲ್ಲಿ ಬಿ.ಎ. ಪದವಿಯವರೆಗೆ ಕಲಿಯಲು ಅನುಕೂಲವಾಯಿತು. ಪ್ರಥಮ ಶ್ರೇಣಿಯಲ್ಲಿ ಬಿ.ಎ. ಪಾಸಾದದ್ದರಿಂದ ಶ್ರೀ ಬಾರಿಕೇರಿಯವರು ವಿದ್ಯಾರ್ಥಿ ವೇತನ ಪಡೆದು ಕರ್ನಾಟಕ ವಿಶ್ವವಿದ್ಯಾಲಯದಿಂದ ಸಂಸ್ಕೃತ ವಿಷಯವನ್ನು ತೆಗೆದುಕೊಂಡು ಎಂ.ಎ. ಪದವಿಯನ್ನು ಪಡೆದುಕೊಂಡರು. ಮುಂದೆ ಬಿ.ಎಲ್.ಡಿ.ಇ. ಸಂಸ್ಥೆಯ ಶ್ರೀ ಸಂಗನ ಬಸವೇಶ್ವರ ಕಲಾ ಮಹಾವಿದ್ಯಾಲಯದಲ್ಲಿ ಸಂಸ್ಕೃತ ವಿಷಯದ ಉಪನ್ಯಾಸಕರಾದರು. ಪಿಎಚ್.ಡಿ ಪದವಿಯನ್ನು ಪಡೆದುಕೊಂಡು ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಸಂಸ್ಕೃತ ವಿಷಯದ ಪ್ರಾಧ್ಯಾಪಕರಾದರೆಂದರೆ ಸಾಮಾನ್ಯ ಮಾತಲ್ಲ. ಪ್ರೊ. ವ್ಹಿ.ಎಚ್. ಬಾರಿಕೇರಿಯವರು ನನ್ನ ಸ್ನೇಹಿತರು. ನನಗೆ ಭೆಟ್ಟಿಯಾದಾಗೊಮ್ಮೆ 'ಶ್ರೀ ಶಂಕರಗೌಡರ ಪುಣ್ಯದಿಂದ ಈ ಎತ್ತರಕ್ಕೆ ನಾನು ಬೆಳೆದೆ ಅವರ ಉಪಕಾರವನ್ನು ಎಷ್ಟು ಸ್ಮರಿಸಿದರೂ ಕಡಿಮೆ. ನನ್ನ ಬದುಕಿನ ಭಾಗ್ಯದ ಬಾಗಿಲನ್ನು ತೆರೆದ ಪಡಗಾನೂರು ಸದಾ ನನ್ನ ಸ್ಮರಣೆಯಲ್ಲಿರುತ್ತದೆ' ಎಂದು ಹೇಳುತ್ತಾರೆ. ನಮ್ಮ ಊರಿನ ಉಚಿತ ಪ್ರಸಾದ ನಿಲಯದಲ್ಲಿ ಕಲಿತವರಲ್ಲಿ ಕೆಲವರು ಪ್ರಾಥಮಿಕ ಶಾಲೆಯ ಶಿಕ್ಷಕರಾಗಿದ್ದಾರೆ. ಇನ್ನು ಕೆಲವರು ವಿವಿಧ ಇಲಾಖೆಗಳಲ್ಲಿ ಉನ್ನತ ಹುದ್ದೆಯಲ್ಲಿದ್ದು ಸೇವೆ ಸಲ್ಲಿಸುತ್ತಿದ್ದಾರೆ. ಅವರಲ್ಲಿ ಆದಪ್ಪ ಸೋಲಾಪುರ, ಬಸಪ್ಪ ತಳವಾರ, ಹನುಮಂತ ಅಂಬಿಗೇರ, ಮಲ್ಲಿಕಾರ್ಜುನ ವಾಲಿ ಮುಂತಾದವರು 'ಶ್ರೀ ಶಂಕರಗೌಡರ ಪುಣ್ಯದಿಂದ ನೌಕರಿ ಪಡೆದು ತಮ್ಮ ಕಾಲ ಮೇಲೆ ತಾವು ನಿಂತಿದ್ದೇವೆಂದು ಬಲು ಅಭಿಮಾನದಿಂದ ಹೇಳುತ್ತಾರೆ.

ಒಬ್ಬೊಬ್ಬರು ಒಂದೊಂದು ಬಗೆಯ ಹವ್ಯಾಸ ಹಚ್ಚಿಕೊಂಡಿರುತ್ತಾರೆ. ಆ ಹವ್ಯಾಸವು ಅವರಿಗೆ ಅನಿರ್ವಚನೀಯ ಆನಂದವನ್ನು ತಂದುಕೊಟ್ಟಿರುತ್ತದೆ. ಜಗತ್ತು ತಮಗೆ ನೀಡಬಲ್ಲ ಸಂತೋಷಗಳಲ್ಲಿ ಅದೇ ಹೆಚ್ಚಿನದೆಂದು ಅವರು ಭಾವನೆ ಮಾಡಿಕೊಂಡಿರುತ್ತಾರೆ. ಆ ರೀತಿಯಲ್ಲಿ ಶ್ರೀ ಶಂಕರಗೌಡರಿಗೆ ದೊಡ್ಡ ದೊಡ್ಡ ಸಭೆ ಸಮ್ಮೇಳನಗಳನ್ನು ಹಮ್ಮಿಕೊಂಡು ನಾಡಿನ ಹೆಸರಾಂತ ಸಾಹಿತಿಗಳನ್ನು ಶ್ರೇಷ್ಠ ಶಿಕ್ಷಣ ತಜ್ಞರನ್ನು, ಸ್ವಾಮಿಗಳನ್ನು, ಮಂತ್ರಿ ಮಹೋದಯರನ್ನು ಹಾಗೂ ಸಂಗೀತಗಾರರನ್ನು ಕೂಡಿಸುವುದು ಹವ್ಯಾಸವಾಗಿತ್ತು. ಅವರು ಬಹು ದೊಡ್ಡ ಪಂಡಿತರೇನೂ ಅಲ್ಲ, ಜನರನ್ನು ರಂಜಿಸುವಂತೆ ಮಾತನಾಡುವ ಕಲೆ ಅವರಿಗೆ ಕರತಲಾಮಲಕವಾಗಿದ್ದಿತು. ಅವರು ಕೀರ್ತನೆವನ್ನು ಕೂಡ ಮಾಡುತ್ತಿದ್ದರು. ಕೀರ್ತನ ಶೈಲಿಯ ಅವರ ಮಾತು ಹಳ್ಳಿಯ ಜನರ ಹೃದಯಕ್ಕೆ ನೇರವಾಗಿ ಹೋಗುತ್ತಿದ್ದವು. ತಮ್ಮ ವಾಗ್ವೈಖರಿಯಿಂದ ಜನರ ಹೃದಯಗಳನ್ನು ಬೆಸೆಯುತ್ತಿದ್ದರು. ತಮ್ಮ ಮಾತುಗಾರಿಕೆಯ ಚಮತ್ಕಾರದಿಂದ ಸಭೆಯನ್ನೇ ಚಕಿತಗೊಳಿಸುವ ಚತುರರಾಗಿದ್ದರು.

ಸರಳತೆ – ಪರಿಶ್ರಮ – ಪರೋಪಕಾರಗಳ ತ್ರಿವೇಣಿ ಸಂಗಮ ಶ್ರೀ ಶಂಕರಗೌಡರು! ಅವರ ಮಾತುಗಳಲ್ಲಿ ಗಾಂಭೀರ್ಯ ಹಾಸ್ಯಲಹರಿ ಸಮನಾಗಿ ಲಾಸ್ಯವಾಡುತ್ತಿದ್ದವು. ಶ್ರೀ ಶಂಕರಗೌಡರು ಸಂಘಟನಾ ಚತುರರು. ಒಮ್ಮೆ ದೇವರ ಹಿಪ್ಪರಗಿಯಲ್ಲಿ ಶಿಕ್ಷಣ ಸಮ್ಮೇಳನ, ಮಹಿಳಾ ಸಮ್ಮೇಳನ, ಹಾಗೂ ರೈತ ಸಮ್ಮೇಳನಗಳನ್ನೂ ಮೂರು ದಿನಗಳವರೆಗೆ ದೊಡ್ಡ ಪ್ರಮಾಣದಲ್ಲಿ ಹಮ್ಮಿಕೊಂಡಿದ್ದರು. ಆ ಸಮಯದಲ್ಲಿ ಶ್ರೀಮತಿ ಕಮಲಾಬಾಯಿ ಚಟ್ಟೋಪಾಧ್ಯಾಯ, ಶ್ರೀ.ತಿ.ರು. ನೇತ್ರಿ, ಶ್ರೀ ಅಂದಾನೆಪ್ಪ ದೊಡ್ಡಮೇಟಿ ಮುಂತಾದ ಗಣ್ಯರು ಭಾಗವಹಿಸಿದ್ದು ನನಗೆ ನೆನಪಿದೆ. ಆಗ ನಾನಿನ್ನೂ ಬಾಲಕನಾಗಿದ್ದೆ. ಪಡಗಾನೂರಲ್ಲಿ ಅನೇಕಸಲ ಸರ್ವಧರ್ಮ ಸಮ್ಮೇಲನಗಳನ್ನು ಮಾಡಿದ್ದಾರೆ. ಆ ಸಮಯದಲ್ಲಿ ಶ್ರೀ ಮುಘೋಳ ಮೃತ್ಯುಂಜಯ ಸ್ವಾಮಿಗಳು, ಬಂಥನಾಳದ ಶ್ರೀ ಸಂಗನ ಬಸವೇಶ್ವರ ಮಹಾ ಸ್ವಾಮಿಗಳು, ಡಾ. ಜ.ಚ.ನಿ, ಶ್ರೀ ಮಲ್ಲಿಕಾರ್ಜುನ ಮಹಾಸ್ವಾಮಿಗಳು, ಶ್ರೇಷ್ಠ ಶಿಕ್ಷಣ ತಜ್ಞ ಪ್ರೊಫೆಸರ್ ಎಸ್.ಆರ್. ರೋಹಿಡೇಕರ, ರಾಣೆಬೆನ್ನೂರಿನ ಪ್ರೊ. ಸಂಗಮದ, ಸೋಲಾಪುರದ ಶ್ರೀ ವರ್ಧಮಾನ ಶಾಸ್ತ್ರಿಗಳು, ಕೃಷಿ ತಜ್ಞ ಶ್ರೀ ಬಿ.ಎಮ್. ಹೊರಕೇರಿ, ಶ್ರೀ ವೆಂಕಟೇಶ ಮಾಗಡಿ ಅವರ ಧರ್ಮ ಪತ್ನಿ ಶ್ರೀಮತಿ ಲೀಲಾವತಿ ಮಾಗಡಿ, ಸಾವಿರ ಹಾಡಿನ ಸರದಾರ ಸಭಾ ಭೂಷಣ ಶ್ರೀ ಹುಕ್ಕೇರಿ ಬಾಳಪ್ಪನವರು, ಶ್ರೀ ಮಲ್ಲಾಬಾದಿ ವೀರಭದ್ರಪ್ಪನವರು, ಪ್ರೊ. ವೃಷಭೇಂದ್ರಸ್ವಾಮಿ ಹಾಗೂ ಅವರ ಧರ್ಮಪತ್ನಿ ಶ್ರೀಮತಿ ಲಲಿತಾಂಬಾ ವೃಷಭೇಂದ್ರಸ್ವಾಮಿ, ದಾನಶೂರ ಬಸರೀಗಿಡದ ವೀರಪ್ಪನವರು, ರಾವಬಹದ್ದೂರ ಆಲಮೇಲ ದೇಶಮುಖರು, ಪ್ರೊ. ಎಚ್.ಟಿ. ಸಾಸನೂರ ಮುಂತಾದ ಗಣ್ಯ ಮಾನ್ಯ ವ್ಯಕ್ತಿಗಳು ಬಂದಿದ್ದರೆಂದರೆ ಬಲು ಆಶ್ಚರ್ಯದ ಹಾಗೂ ಆನಂದದ ಸಂಗತಿ.

ಶ್ರೀ ಸಿಂಹಾಸನ ಮಾಮಲೇದಾರರು ಬಲು ಪ್ರಾಮಾಣಿಕ ಹಾಗೂ ದಕ್ಷ ಅಧಿಕಾರಿ. ಅವರು ಬಸವನ ಬಾಗೇವಾಡಿಯಲ್ಲಿ ಮಾಮಲೇದಾರರಾಗಿದ್ದಾಗ ಶ್ರೀ ಬಸವೇಶ್ವರ ದೇವಾಲಯದ ಜೀರ್ಣೋದ್ಧಾರ ಮಾಡುವ, ಮಹಾದ್ವಾರ ಕಟ್ಟಿಸುವ ಹಾಗೂ ಸುತ್ತೆಲ್ಲ ಸುಂದರವಾದ ಕಟ್ಟಡಗಳನ್ನು ನಿರ್ಮಿಸುವ ಮಹಾಕಾರ್ಯವನ್ನು ಕೈಗೆತ್ತಿಕೊಂಡರು. ಆಗ ಅವರು ಶ್ರೀ ಶಂಕರಗೌಡರನ್ನು ಜೊತೆಯಲ್ಲಿ ಕರೆದುಕೊಂಡು ಜಿಲ್ಲೆಯ ಪ್ರತಿ ಹಳ್ಳಿಗೂ ಹೋಗಿ ಹಣ ಸಂಗ್ರಹಿಸಿ ಆ ಕಾರ್ಯ ಪೂರ್ಣಗೊಳಿಸಿದರು. ಆ ಸಂದರ್ಭದಲ್ಲಿ ಶ್ರೀ ಏಣಗಿ ಬಾಳಪ್ಪನವರು ಜಗಜ್ಯೋತಿ ಬಸವೇಶ್ವರ ನಾಟಕ ಆಡುತ್ತಿದ್ದರು. ಶ್ರೀ ಬಸವೇಶ್ವರ ಪಾತ್ರದಲ್ಲಿಯೇ ಏಣಗಿ ಬಾಳಪ್ಪನವರು ನಾಟಕ ಮುಗಿದ ಮೇಲೆ ಜೋಳಿಗೆಯನ್ನು ಹಿಡಿದು ಗೇಟಿನಲ್ಲಿ ನಿಂತು ಮನೆಗೆ ಹೋಗುವ ಪ್ರೇಕ್ಷಕರಿಂದ ಸಂಗ್ರಹಿಸಿದ ಹಣವನ್ನು ಶ್ರೀ ಬಸವೇಶ್ವರ ದೇವಸ್ಥಾನಕ್ಕೆ ಕಳಿಸಿಕೊಡುತ್ತಿದ್ದರು. ಶ್ರೀ ಬಸವೇಶ್ವರ ದೇವಾಲಯದ ಈ ಮಹಾಕಾರ್ಯವನ್ನು ಮಾಡಿದ ಶ್ರೀ ಸಿಂಹಾಸನ ಮಾಮಲೇದಾರರನ್ನು ಗೌಡರು ನಮ್ಮೂರ ಸಮ್ಮೇಲನದಲ್ಲಿ ಸನ್ಮಾನಿಸಿದರು. ಶ್ರೀ ಸಿಂಹಾಸನ ಮಾಮಲೇದಾರರು ತಮ್ಮ ಆಸ್ತಿಯನ್ನು ಕೂಡ ಶ್ರೀ ಬಸವೇಶ್ವರ ಸಂಸ್ಥೆಗೆ ಕೊಟ್ಟರೆಂದು ಹೇಳುತ್ತಾರೆ. ಇಂತಹ ತ್ಯಾಗ ಮೂರ್ತಿ. ಶ್ರೀ ಸಿಂಹಾಸನ ಮಾಮಲೇದಾರರ ಮೂರ್ತಿಯನ್ನು ನಿಲ್ಲಿಸುವಂತೆ ಬಸವನ ಬಾಗೇವಾಡಿಯ ಸ್ಥಳಿಕ ಮುಖಂಡರಿಗೆ ಶ್ರೀ ಶಂಕರಗೌಡರು ಪ್ರೇರಣೆ ನೀಡಿದರು. ಉಪಕಾರ ಮಾಡಿದವರನ್ನು ಸ್ಮರಿಸುವ ಸದ್ಭಾವ ಅವರಲ್ಲಿ ಮನೆ ಮಾಡಿತ್ತು. ಅವರ ಪ್ರಯತ್ನದ ಫಲವಾಗಿ ದೇವಾಲಯದ ಹೊರಗಡೆ ಮಾಮಲೇದಾರರ ಮೂರ್ತಿ ನಿಂತಿದೆ.

ನಾಲ್ಕು ಜನರ ಮಧ್ಯದಲ್ಲಿ ಕೀರ್ತಿವಂತನಾಗಿ ಬಾಳಬೇಕೆಂಬ ಆಸೆ ಮಾನವನಲ್ಲಿ ಇರುವದು ಸಹಜ. ಕೀರ್ತಿಯ ಹಸಿವು ಮನುಷ್ಯನ ಮೂಲಭೂತ ಪ್ರವೃತ್ತಿಗಳಲ್ಲಿ ಒಂದು ಎನ್ನುತ್ತಾರೆ ಮನಃಶಾಸ್ತ್ರ ಪರಿಣತರು. 'ಕೀರ್ತಿಯನ್ನು ನಾನು ಅಲಕ್ಷ್ಯ ಮಾಡುವುದಿಲ್ಲ. ಅದನ್ನೇ ಹುಡುಕಿಕೊಂಡು ಹೋಗುವುದಿಲ್ಲ. ಅದು ಬರುವುದಾದರೆ ನಮ್ಮನ್ನು ಕೇಳದೆಯೇ ಬರುತ್ತದೆ ಎಂಬುದು ಅಲೆಕ್ಸಾಂಡರ್ ಪೋಪರ ಮಾತು. ಕೀರ್ತಿಯ ಆಶೆಗೆ ಮೋಣದಂತೆ ಅಂಟಿಕೊಳ್ಳದೆ ಕೆಲಸವನ್ನು ಕರಿದೆನ್ನದೆ ಈ ಹಿನ್ನೆಲೆಯಲ್ಲಿ ಶ್ರೀ ಶಂಕರಗೌಡರು ಕೀರ್ತಿಶನಿಯ ಬೆನ್ನು ಹತ್ತದೆ ಜನತೆಯ ಹೃದಯವನ್ನು ಮುಟ್ಟುವ, ತಟ್ಟುವ, ತಬ್ಬುವ ಕಾರ್ಯಗಳನ್ನು ಮಾಡುತ್ತ ಬಂದವರು. ಅದಕ್ಕಾಗಿಯೇ ಅವರ ಹೆಸರು ಜನರ ನಾಲಿಗೆಯ ಮೇಲೆ ಶಾಶ್ವತವಾಗಿ ನಿಲ್ಲುವಂತಾಗಿ, ಜನ ಮನ ಗೆಲ್ಲುವಂತಾಗಿದೆ.

ಶ್ರೀ ಶಂಕರಗೌಡರದು ಹೋರಾಟದ ಬದುಕು. ಸಾರ್ವಜನಿಕ ಜೀವನದ ಮಧ್ಯದಲ್ಲಿದ್ದರೂ ಕೂಡ ತಮ್ಮ ವೈಯಕ್ತಿಕ ಪ್ರಯತ್ನದಿಂದ ಮ್ಯಾಟ್ರಿಕುಲೇಶನ್ ಮುಗಿಸಿಕೊಂಡು ಕಾಲೇಜಿಗೆ ಹೆಸರು ಹಚ್ಚಿ ಬಿ.ಎ. ಪದವಿಯನ್ನು ಕೂಡ ಪಡೆದುಕೊಂಡರು. ಇದಕ್ಕೆ ಕಾರಣ ಮುಂದೆ ಶಾಸಕನಾಗಬೇಕಾದರೆ ಕನಿಷ್ಠ ಪಕ್ಷ ಪದವೀಧರನಾಗಿರಬೇಕೆಂಬ ನಿಯಮಾವಳಿ ಬಂದರೂ ಬರಬಹುದೆಂಬುದು ಅವರ ದೂರದೃಷ್ಟಿ.

ಅರಭಾವಿಯ ಶ್ರೀ ಮಹಾಂತ ಶಿವಯೋಗಿಗಳು ಮಹಾತಪಸ್ವಿಗಳು, ಶತಾಯುಷಿಗಳಾಗಿ 105 ವರ್ಷದ ತುಂಬು ಜೀವನ ಬಾಳಿದವರು. ಅವರನ್ನು ಭೆಟ್ಟಿಯಾಗಿ ಶ್ರೀ ಶಂಕರಗೌಡರು 'ಅಪ್ಪಾ ನಿಮ್ಮ ದರ್ಶನದ ಲಾಭ ನನಗೊಬ್ಬನಿಗಾದರೆ ಸಾಲದು ನಮ್ಮ ಭಾಗದ ಜನಕ್ಕೆಲ್ಲ ನಿಮ್ಮ ದರ್ಶನ ಆಗಬೇಕು. ನಮ್ಮ ಜನರನ್ನು ಇಲ್ಲಿಗೆ ಕರೆತರಲು ಆಗುವುದಿಲ್ಲ. ನೀವೇ ನಮ್ಮಲ್ಲಿಗೆ ಬರಬೇಕು. ನೀವು ಬಂದರೆ ಕೈಲಾಸವೇ ನಮ್ಮ ಊರಿಗೆ ಬಂದಂತಾಗುತ್ತದೆ' ಎಂದು ಹೇಳಿದಾಗ ಆ ತಪಸ್ವಿಗಳು ಎರಡು ಸಲ ನಮ್ಮೂರಿಗೆ ಬಂದಿದ್ದರು. ಒಮ್ಮೆ ನಮ್ಮ ಮನೆಯಲ್ಲಿಯೇ ಇಳಿದುಕೊಂಡಿದ್ದರು. ಅದು ನಮ್ಮ ಸೌಭಾಗ್ಯ. ಶ್ರೀ ಮಹಾಂತ ಶಿವಯೋಗಿಗಳ ಆಶೀರ್ವಾದದಿಂದ ಮೈಸೂರಿನ ಮಹಾರಾಜ ಶ್ರೀ ಜಯಚಾಮರಾಜೇಂದ್ರ ಒಡೆಯರು ಪುತ್ರ ಸಂತಾನ ಪಡೆದರೆಂದ ಮೇಲೆ ಅವರ ಆಶೀರ್ವಾದ ಫಲ ಎಂಥದೆನ್ನುವದನ್ನು ಬೇರೆ ಹೇಳಬೇಕಾಗಿಲ್ಲ. ಅವರು ಮಾತನಾಡುವ ಸ್ವಾಮಿಗಳಲ್ಲ. ಅವರು ಪೂಜಾ ನಿಷ್ಠರು ಹಾಗೂ ತಪೋನಿಷ್ಠರು. ಅಂಥ ಮಹಾನುಭಾವರ ದರ್ಶನಾಶೀರ್ವಾದ ಮಾಡಿಸಿದಾಗ ನಮ್ಮ ಭಾಗದ ಜನ ಶ್ರೀ ಶಂಕರಗೌಡರು ಸರ್ವಧರ್ಮ ಸಮ್ಮೇಲನ ಮಾಡಿದ್ದು ಸಾರ್ಥಕವಾಯಿತೆಂದು ಅವರನ್ನು ಮನಸಾರೆ ಕೊಂಡಾಡಿದರು.

ನಾನು ದೇವರ ಹಿಪ್ಪರಗಿಯಲ್ಲಿ ಹೈಸ್ಕೂಲ ಮುಖ್ಯಾಧ್ಯಾಪಕನಾಗಿದ್ದಾಗ ಹಿರಿಯರಾದ ಶ್ರೀ ಶಂಕರಗೌಡರು ಕಿರಿಯನಾದ ನನ್ನನ್ನು ಸಮ್ಮೇಲನದ ಸಮಯದಲ್ಲಿ ಕರೆದುಕೊಂಡು ಹೋಗುತ್ತಿದ್ದರು. ಅದಕ್ಕೆ ಕಾರಣ ನಾನೊಬ್ಬ ಅವರ ಪ್ರೋತ್ಸಾಹದಿಂದ ನಾಟಕಕಾರನಾಗಿ ಕವಿಯಾಗಿ, ನಟನಾಗಿ, ಹಾಸ್ಯ ಭಾಷಣಕಾರನಾಗಿ ಬೆಳೆದದ್ದನ್ನು ಕಂಡು ಹೆಮ್ಮೆ ಪಡುತ್ತಿದ್ದುದೇ ಇರಬೇಕೆಂದು ಭಾವಿಸುತ್ತೇನೆ. ಅವರು ಎಲ್ಲಿಗಾದರೂ ಹೋಗುವಾಗ ಕಾರಿನಲ್ಲಿ ನಾನು ಜೊತೆಯಲ್ಲಿ ಇರುತ್ತಿದ್ದೆ. ವಿಜಾಪುರದಲ್ಲಿ ಅನೇಕ ಜನ ಶ್ರೀಮಂತರನ್ನು ಹಾಗೂ ಅಧಿಕಾರಿಗಳನ್ನು ಭೆಟ್ಟಿಯಾಗಿ ತಾವು ಹಮ್ಮಿಕೊಂಡ ಕಾರ್ಯಕ್ರಮಕ್ಕೆ ಹಣ ಸಂಗ್ರಹಿಸುವಾಗ ಹಣವನ್ನು ಅವರೇ ಕೊಡುವಂತೆ

ಮಾಡುತ್ತಿದ್ದರು. ಒಮ್ಮೆ ರೆಡ್ಡಿ ಇಂಜನೀಯರ್ ಸಾಹೇಬರ ಆಫೀಸಿಗೆ ಹೋದಾಗ ಅವರು ಗೌಡರನ್ನು ಪ್ರೀತಿಯಿಂದ ಸ್ವಾಗತಿಸಿ ಬಂದ ಸಮಾಚಾರ ಕೇಳಿದರು. ಆಗ ಶಂಕರಗೌಡರು 'ಸಾಹೇಬರೇ ನಮ್ಮ ಊರಲ್ಲಿ ಸಮ್ಮೇಲನ ಹಮ್ಮಿಕೊಂಡಿದ್ದೇವೆ ಆಗ ಸ್ವಾಮಿಗಳು ಬರುತ್ತಾರೆ. ಒಬ್ಬರನ್ನು ನಿಮ್ಮ ಮನೆಯಲ್ಲಿ ಇಳಿಸುತ್ತೇವೆ. ಅವರ ಪೂಜೆ ಪ್ರಸಾದದ ವ್ಯವಸ್ಥೆ ಮಾಡಿ ಭಕ್ತಿ ಸೇವೆ ಸಲ್ಲಿಸಬೇಕೆಂದು' ಹೇಳಿದರು. ಆಗ ರೆಡ್ಡಿ ಸಾಹೇಬರು 'ಗೌಡರೆ ಸ್ವಾಮಿಗಳ ವ್ಯವಸ್ಥೆ ಮಾಡಲು ನಮ್ಮ ಮನೆಯಲ್ಲಿ ಸ್ವಲ್ಪ ತೊಂದರೆ ಇದೆ. ನಿಮ್ಮಲ್ಲಿ ಬಂದಾಗ ಸ್ವಾಮಿಗಳಿಗೆ ನಮಸ್ಕರಿಸಿ ಕಾಣಿಕೆ ಇಟ್ಟು ಆಶೀರ್ವಾದ ಪಡೆಯುತ್ತೇವೆ. ನಿಮ್ಮ ಕಾರ್ಯಕ್ರಮಕ್ಕೆ ವಂತಿಗೆ ಎಷ್ಟು ಕೊಡಬೇಕೆಂಬುದನ್ನು ಹೇಳಿರಿ' ಎಂದರು. 'ಆಗ ಗೌಡರು ಎರಡು ಸಾವಿರ ರೂಪಾಯಿ ಕೇಳಿದರೆ ನಿಮ್ಮ ಯೋಗ್ಯತೆಗೆ ಕಡಿಮೆ ನೀವೇ ತಿಳಿದಿದ್ದನ್ನು ಕೊಡಿರಿ' ಎಂದರು. ಆಗ ಸಾಹೇಬರು 'ಆಗಲಿ ಗೌಡರೆ ನಾನು ನಾಲ್ಕು ಸಾವಿರ ಕೊಡುತ್ತೇನೆ. ನಾಳೆ ಮನೆಗೆ ಬಂದು ತೆಗೆದುಕೊಂಡು ಹೋಗಿರೆಂದು ಹೇಳಿದರು'. ಆಗ ಗೌಡರು 'ನಮ್ಮ ಮೇಲೆ ದೊಡ್ಡ ಉಪಕಾರ ಮಾಡಿದಿರಿ ಬಹಳ ಸಂತೋಷ ಬರುತ್ತೇನೆ' ಎಂದು ಹೇಳುವಷ್ಟರಲ್ಲಿ ಕಾಫಿ ಬಂದಿತು. ಕಾಫಿ ಕುಡಿದು ಧನ್ಯವಾದ ಹೇಳಿ ತಿರುಗಿ ಬಂದೆವು. ಹೀಗೆ ಅವರು ಮಾತಿನಿಂದ ಮನ ಗೆಲ್ಲುತ್ತಿದ್ದರು.

ಶ್ರೀ ಶಂಕರಗೌಡರು ಸಂಗೀತರತ್ನ ಪಂಡಿತ ಬಸವರಾಜರಾಜಗುರು ಅವರನ್ನು ಆಮಂತ್ರಿಸಿದರು. ಅವರ ಒಂದು ಕಾರ್ಯಕ್ರಮ ಬಿಜಾಪುರದಲ್ಲಿ, ಇನ್ನೊಂದು ಕಾರ್ಯಕ್ರಮ ಪಡಗಾನೂರಲ್ಲಿ ಆಯೋಜಿಸಿದರು. ಅವರ ವ್ಯವಸ್ಥೆಯನ್ನು ನನಗೂ ಮತ್ತು ಅವರ ಹಿರಿಯ ಮಗ ಡಾಕ್ಟರ ಸಾಹೇಬ ಗೌಡರಿಗೂ ಒಪ್ಪಿಸಿ ನನ್ನ ಕಡೆಗೆ ಐದು ಸಾವಿರ ರೂಪಾಯಿ ಕೊಟ್ಟಿದ್ದರು. ಅವರನ್ನು ಬಿಜಾಪುರದ ಪ್ರವಾಸಿ ಬಂಗಲೆಯಲ್ಲಿ ಇಳಿಸಲಾಗಿತ್ತು. ಕುಡಿಯುವ ನೀರನ್ನು ಮಾತ್ರ ಅವರು ದೊಡ್ಡ ಫಿರಕೀ ತಂಬಿಗೆಯಲ್ಲಿ ಧಾರವಾಡದಿಂದಲೇ ತಂದಿದ್ದರು. ಸಂಗೀತ ಸರಂಜಾಮು-ಸಿಬ್ಬಂದಿಯನ್ನು ಪಡಗಾನೂರಿಗೆ ಬಹಳ ಕಾಳಜಿಯಿಂದ ಕರೆದುಕೊಂಡು ಹೋದೆವು. ಬಸವರಾಜ ರಾಜಗುರು ಅವರ ಶಾಸ್ತ್ರೀಯ ಸಂಗೀತ ಕಾರ್ಯಕ್ರಮ ಬಹಳ ಅದ್ದೂರಿಯಿಂದ ನಡೆಯಿತು. ಪಡಗಾನೂರಂಥ ಗ್ರಾಮದಲ್ಲಿ ಸಭಿಕರು ಬಂದಂಥ ಅತಿಥಿಗಳು ಶಾಸ್ತ್ರೀಯ ಸಂಗೀತವನ್ನು ಶಾಂತ ಚಿತ್ತದಿಂದ ಕೇಳಿ ಆಶ್ಚರ್ಯ ಪಟ್ಟು ಆನಂದದಿಂದ ಚಪ್ಪಾಳೆಗಳ ಸುರಿಮಳೆ ಸುರಿಸಿದರು. ಪ್ರೊ. ಎಸ್.ಆರ್. ರೋಹಿಡೇಕರ ಸಾಹೇಬರು ನನ್ನ ಗುರುಗಳು. ಕಾರ್ಯಕ್ರಮದಲ್ಲಿ ಭಾಗವಹಿಸಿ ಅಮೋಘ ಭಾಷಣ ಮಾಡಿದರು. ಹೋಗುವಾಗ ಬಹಳ ಸಂತೋಷ ವ್ಯಕ್ತಪಡಿಸಿ ಈ ರೀತಿ ಹೇಳಿದರು. 'ಶ್ರೀ ಶಂಕರಗೌಡರು ನನ್ನ ಪರಮಸ್ನೇಹಿತರು ಅವರ ಅಂತಃಕರಣದ ಆಮಂತ್ರಣಕ್ಕೆ ನಾನು ತಪ್ಪದೇ ಬರುತ್ತೇನೆಂದು ಅವರಿಗೆ ವಚನ ಕೊಟ್ಟಿದ್ದೆ ಆ ಪ್ರಕಾರ ಬಂದಿದ್ದೇನೆ. ನಿಮ್ಮೂರ ಕಾರ್ಯಕ್ರಮ ಬಹಳ ವೈವಿಧ್ಯಮಯವಾಗಿತ್ತು' ಎಂದು ಆನಂದದಿಂದ ಮತ್ತೊಮ್ಮೆ ಸಂತೋಷದ ಮಾತನ್ನಾಡಿ ಹೊರಟು ನಿಂತಾಗ ಅವರ ಪಾದದಲ್ಲಿ ಹಣೆ ಇಟ್ಟು ನಮಸ್ಕರಿಸಿ ಗುರುಗಳನ್ನು ಪೂಜ್ಯ ಭಾವನೆಯಿಂದ ಬೀಳ್ಕೊಟ್ಟೆ. ಶ್ರೀ ಶಂಕರಗೌಡರು ಎಲ್ಲ ಕಾರ್ಯಕ್ರಮ ಮುಗಿದ ಮೇಲೆ ನನಗೆ ಈ ರೀತಿ ಕೇಳಿದರು 'ವೀರಣ್ಣ ನಿನ್ನ ಕಡೆ ಕೊಟ್ಟಿದ್ದ ಹಣದಲ್ಲಿ ಏನಾದರೂ ಸ್ವಲ್ಪ ಹಣ ಉಳಿದಿದ್ದರೆ ಕೊಡು, ಹೆಚ್ಚು ಖರ್ಚಾಗಿದ್ದರೆ ಕೇಳ ಬೇಡ' ಎಂದರು. ನನ್ನ ಮೇಲೆ ಬಹಳಷ್ಟು ಪ್ರೀತಿ ವಿಶ್ವಾಸ ಇಟ್ಟಿದ್ದರೆನ್ನುವದಕ್ಕೆ ಈ ಮಾತೇ ಸಾಕ್ಷಿ.

ಎದ್ದೆದ್ದು ಬೀಳುತಿಹೆ ಗುದ್ದಾಡಿ ಸೋಲುತಿಹೆ
ಗದ್ದಲದ ತುಂಬಿ ಪ್ರಸಿದ್ಧನಾಗುತಿಹೆ
ಉದ್ಧರಿಸುವೆನು ಜಗವನೆನ್ನುವ ಸಬಬಿನೆ
ನಿಸ್ಸದ್ವಾರವಹ್ಯಂಕೃತಿಗೆ—ಮಂಕುತಿಮ್ಮ ಎಂದು ಡಿ.ವಿ.ಜಿ.ಯವರು 'ಏನಕೇನ ಪ್ರಕಾರೇಣ' ಪ್ರಸಿದ್ಧಿ ಪಡೆಯಬೇಕೆನ್ನುವ ಜನರ ಬಗ್ಗೆ ಆಡಿದ ಮಾತು ಅರ್ಥಪೂರ್ಣ. ಇಂದಿನ ದಿನಮಾನಗಳಲ್ಲಿ ಜಗತ್ತಿನ ಉದ್ಧಾರದ ಹೆಸರು ಹೇಳುತ್ತ ಗದ್ದಲ ಮಾಡುತ್ತ ಪ್ರಸಿದ್ಧಿ ಪಡೆಯಲು ಗುದ್ದಾಡುತ್ತಾರೆ. ಆದರೆ ಶಂಕರಗೌಡರು ಪ್ರಸಿದ್ಧರಾಗಿ ಹಪಹಪಿಸಿದವರಲ್ಲ 'Service is the- rent we have to pay for our room an earth'. ಎಂಬ ಆಂಗ್ಲ ನುಡಿಯಂತೆ ಭೂಮಿಯ ಮೇಲೆ ಹುಟ್ಟಿ ಬಂದ ಮೇಲೆ ಅವರ ಭೂ ಬಾಡಿಗೆಯನ್ನು ಕೊಡಬೇಕಾದರೆ ಸೇವೆಯೊಂದೇ ತಾರಕಮಂತ್ರ ಎಂಬುದನ್ನರಿತು ಜೀವನದುದ್ದಕ್ಕೂ ಸೇವೆ ಮಾಡುತ್ತ ಬಂದವರು. ಅಧಿಕಾರ ಎನ್ನುವುದು ಅಸ್ತ್ರವಲ್ಲ, ದೇವರು ನಮಗೆ ಹೆಚ್ಚಿನ ಸೇವೆಯನ್ನು ಮಾಡಲು ಒದಗಿಸಿಕೊಟ್ಟ ಅವಕಾಶ ಎಂದು ಭಾವಿಸಿ ಶಾಸಕರಾದವರು. ಚುನಾವಣೆ ಬಂದರೆ ಹೊಲ ಒತ್ತಿ ಹಾಕಿ ಹಣ ತಂದವರು. ಸಾರ್ವಜನಿಕರಿಂದ ಹಣ ಎತ್ತಿ ಹಾಕಿದವರಲ್ಲ. ಮೂರು ಸಲ ಶಾಸಕರಾಗಿದ್ದರೂ ಸಹ ಸಾಯುವಾಗ ಮೂರು ಜನ ಗಂಡು ಮಕ್ಕಳ ಪಾಲಿಗೆ ಸಾಲವನ್ನಿಟ್ಟಿದ್ದರೆಂದರೆ ಅದು ಅವರ ಪ್ರಾಮಾಣಿಕ ರಾಜಕೀಯ ಜೀವನಕ್ಕೆ ಸಾರ್ವಜನಿಕರು ಕೊಟ್ಟ ಪ್ರಮಾಣ ಪತ್ರವೆಂದರೆ ತಪ್ಪಾಗಲಾರದು.

ಅವರು ತಮ್ಮ ಆರ್ಥಿಕ ತೊಂದರೆಯನ್ನು ಅನುಭವಿಸುವ ವಿಷಯ ಕೆಲ ಜನ ಅಭಿಮಾನಿಗಳಿಗೆ ಗೊತ್ತಾಗಿ ಅವರ ಷಷ್ಟ್ಯಬ್ದಿ ಸಮಾರಂಭವನ್ನು ಬಂಥನಾಳ ಮಠದಲ್ಲಿ ಸರಳ ರೀತಿಯಲ್ಲಿ ಆಚರಿಸಿ ಅವರಿಗೆ ಅರವತ್ತು ಸಾವಿರ ರೂಪಾಯಿಗಳ ಹಮ್ಮಿಣಿಯನ್ನು ಅರ್ಪಿಸಿ ವೃಕ್ಷಭಲಿಂಗ ಮಹಾಸ್ವಾಮಿಗಳ ಅಮೃತ ಹಸ್ತದಿಂದ ಶಾಲು ಹೊದಿಸಿ ಸನ್ಮಾನಿಸಿದರು. 'ಸಮಾಜ ತಮ್ಮ ಸಾರ್ವಜನಿಕ ನಿಸ್ವಾರ್ಥ ಸೇವೆಯನ್ನು ಗುರುತಿಸಿ ಶ್ರೀಗಳ ಸಮ್ಮುಖದಲ್ಲಿ ಗೌರವ ಪೂರ್ಣವಾಗಿ ಸನ್ಮಾನಿಸಿದ್ದಕ್ಕಾಗಿ ಶ್ರೀ ಶಂಕರಗೌಡರು ಸಂತೋಷದಿಂದ ಹೃದಯ ತುಂಬಿ ಭಾವಪೂರ್ಣ ಮಾತುಗಳಿಂದ ಸಮಾಜದ ಹಿರಿಯರಿಗೆ ಕೃತಜ್ಞತೆ ಸಲ್ಲಿಸಿದರು.

ಸದಾಕಾಲ ಪರೋಪಕಾರದ ಪ್ರತಿಭೆಯನ್ನು ಬೀರಿದ ಪುಣ್ಯ ಜ್ಯೋತಿ ಕಣ್ಮರೆಯಾದಂತಾಗಿದೆ. 'ಕಾಯ ಅಳಿದರೂ ಕೀರ್ತಿ ಶಾಶ್ವತವಾಗಿ ಉಳಿಯುವುದು' ಎಂಬುದನ್ನು ಹೇಳುವಂತೆ ಅವರು ಮಾಡಿದ ಪರೋಪಕಾರದ ಕಾರ್ಯಗಳು ಅವರ ಕೀರ್ತಿಯನ್ನು ಸದಾ ಸಾರುತ್ತವೆ.

'ಒರೆಸುವವರು ಯಾರಾದರೂ ಇದ್ದರೆ
ಕಣ್ಣು ತುಂಬಿ ಬರುವುದಕ್ಕೆ ಅರ್ಥವಿದೆ
ಯಾರ ಕಣ್ಣು ತುಂಬಿ ಬರದಿದ್ದರೆ
ಮರಣ ಕೂಡಾ ವ್ಯರ್ಥವಿದೆ.'

ಎಂಬ ಕಪಿ ವಾಣಿಯಂತೆ ತಮ್ಮ ತೊಂದರೆಯನ್ನು ಕೇಳುವಂತಹ ಕೆಲವರ ಮುಂದೆ ಹೇಳಿಕೊಂಡು ಹೃದಯ ಹಗುರು ಮಾಡಿಕೊಳ್ಳುತ್ತಿದ್ದರು. ಅವರ ಅಂತ್ಯ ಸಂಸ್ಕಾರದಲ್ಲಿ ಜನ ದುಃಖ ಸಾಗರದಲ್ಲಿ ಮುಳುಗಿದ್ದನ್ನು ಕಂಡಾಗ ಅವರು 'ಮರಣವೇ ಮಹಾನವಮಿ' ಎನ್ನುವಂತೆ ಅರ್ಥಪೂರ್ಣವಾಗಿ ಬಾಳಿ 'ಶರಣರ ಮಹತ್ವ ಮರಣ'ದಲ್ಲಿ ಎನ್ನುವದನ್ನು ತೋರಿಸಿಕೊಟ್ಟಿದ್ದಾರೆ. ಇಂದಿನ ನಮ್ಮ ಯುವ ಪೀಳಿಗೆಗೆ ಅವರ ಆದರ್ಶಗಳು ಸಾಧನೆ-ಸಿದ್ಧಿಗಳು ದಾರಿ ದೀಪವಾಗಿಲಿ ಸ್ಫೂರ್ತಿಯನ್ನೀಯಲಿ!

**– ವೀರಣ್ಣ ಕರಭಂಟನಾಳ**

**ಪಡಗಾನೂರ**

1439-16

# ಶೃದ್ಧಾಂಜಲಿ

ಶೃದ್ಧಾಂಜಲಿ ಶೃದ್ಧಾಂಜಲಿ
ಜನತೆಯ ನಾಯಕ ಜನಪ್ರೀಯ ಶಾಸಕ
॥ ಶಂಕರಗೌಡರಿಗೆ ಶೃದ್ಧಾಂಜಲಿ ॥ ॥ ಪ॥

ದೇಶ ಪ್ರೇಮದ ಜ್ಯೋತಿ ಮೂಡಿತು
ಬಾಲ್ಯದ ಬದುಕಿನ ಆತ್ಮದಲಿ ।
ಆಂಗ್ಲರ ಆಳಿಕೆ ಅಲ್ಲಗಳೆದು
ಉಗ್ರ ಹೋರಾಟ ನಡೆಯಿತಲ್ಲಿ ।
ದೇಶ ಸೇವೆಗಾಗಿ ಸೆರೆಮನೆ ವಾಸ ಸಿಕ್ಕಿತಾಗಲ್ಲಿ ॥
॥ ಗೌಡರಿಗೆ ಸಿಕ್ಕಿತಾಗ ಅಲ್ಲಿ ॥ ॥ 1 ॥

ಬೆಂದ ಬದುಕಿನ ನೊಂದ ಮನಸ್ಸಿನ
ಜನತೆ ಜೀವದ ಉಸಿರಾಗಿ।
ಆಂಗ್ಲ ಆಳಿಕೆಯ ಅರೆಹೊಟ್ಟೆ ಬದುಕಿನ
ಕಣ್ಣೆರ್ಹಾಕುವ ದೀನರ ಧ್ವನಿಯಾಗಿ ।
ದೀನ ದಲಿತರ ಬಡವರ ಸೇವೆ ಮಾಡಿದರು ಸಂತಸದಿ ॥
॥ ಗೌಡರು ಮಾಡಿದರು ಸಂತಸದಿ ॥ ॥ 2 ॥

ದ್ವೇಷ ಮತ್ಸರ ಮತ ಪಂಥವ
ಸುಳಿಲಿಲ್ಲ ರಾಜಕಿ ಜೀವದಲಿ ।
ಧರ್ಮದಣತಿಯಂತೆ ರಾಜಕಾರ್ರಣ
ನಡೆಸಿದಿರು ಅಖಂಡ ಜನತೆಯಲಿ ।
ಹಂಸಕ್ಷೀರ ನ್ಯಾಯದಂತೆ ಜೀವನ ನಡೆಸಿದಿರಿ ॥
॥ ಗೌಡರೆ ಜೀವನ ನಡೆಸಿದಿರಿ ॥ ॥ 3 ॥

– ಶ್ರೀ ಬಿ. ಎಸ್. ಪಾಟೀಲ
ಶಿಕ್ಷಕರು, ಪಡಗಾನೂರ

## ಜೀವನದ ಪ್ರಮುಖ ಘಟನಾವಳಿಗಳು

1. 1911 – ಜನನ, ಗುಬ್ಬೇವಾಡ ತಾ. ಇಂಡಿ, ಜಿ. ಬಿಜಾಪೂರ
2. 1952 – ಶಾಸಕರಾಗಿ ಮುಂಬಯಿ ಅಸೆಂಬ್ಲಿಗೆ ಆಯ್ಕೆ
3. 1957 – ಮೈಸೂರು ಅಸೆಂಬ್ಲಿಗೆ ಶಾಸಕರಾಗಿ ಆಯ್ಕೆ
4. 1958 – ಎಸ್.ಎಸ್.ಎಲ್.ಸಿ. ಉತ್ತೀರ್ಣ
5. 1962 – ಚುನಾವಣೆಯಲ್ಲಿ ಸೋಲು
6. 1967 – ಚುನಾವಣೆಯಲ್ಲಿ ಪರಾಜಯ
7. 1970 – ತಾಲೂಕಾ ಅಭಿವೃದ್ಧಿ ಮಂಡಳಿಯ ಸದಸ್ಯರಾಗಿ ಸ್ವತಂತ್ರ ಅಭ್ಯರ್ಥಿಯೆಂದು ಆಯ್ಕೆ
8. 1972 – ಸಂಸ್ಥಾ ಕಾಂಗ್ರೆಸ್ ಅಭ್ಯರ್ಥಿಯಾಗಿ ವಿಧಾನ ಸಭೆಗೆ ಮೂರನೆ ಬಾರಿ ಆಯ್ಕೆ
9. 1977 – ಜನತಾ ಪಕ್ಷದಿಂದ ಸ್ಪರ್ಧಿಸಿ ಸೋಲು
10. 1980 ಜೂನ್ 26 – ಮರಣ

## ಗಾದೆ ಮಾತಿನ ಅನುಭವದ ನುಡಿಗಳು

1. ರೋಗಿಯಾದ ತಾಯಿಯಿಂದ ನಿರೋಗಿಯಾದ ಮಕ್ಕಳು ಹೇಗೆ ಜನಿಸುವುದಿಲ್ಲವೋ! ಹಾಗೆ ಕರಕಿ ಭೂಮಿಯಿಂದ ಉತ್ತಮ ಬೆಳೆ ಸಾಧ್ಯವೆ?
2. ವಿಜಾಪುರ ಜಿಲ್ಲೆ ಬರಗಾಲದ ತವರಮನೆ.
3. ನಮ್ಮ ದೇಶದ ರೈತನ ಸ್ಥಿತಿ ತಂದೆ – ತಾಯಿಯಿಲ್ಲದ ಪರದೇಶಿ ಕೂಸಿನಂತಾಗಿದೆ.
4. ಎಲ್ಲರನ್ನೂ ಸಾಕುವ ರೈತನ ಬಗ್ಗೆ ಉದಾಸೀನ ಬೇಡ.
5. ಪಾರತಂತ್ರದ ಇಂದ್ರಭವನಕ್ಕಿಂತ, ಸ್ವಾತಂತ್ರದ ಗುಡಿಸಲು ಲೇಸು.
6. ಬಡನಕ್ಕಿಂತಲೂ, ಅಜ್ಞಾನ ಅಪಾಯ.
7. ಶರೀರದ ಬಹುಭಾಗ ಕೆಟ್ಟು ಹೋಗಿ, ಕೆಲವು ಭಾಗಗಳು ಮಾತ್ರ ಉತ್ತಮವಾಗಿದ್ದರೆ, ಆ ಶರೀರ ನಾಶವಾಗುವುದು ಖಂಡಿತ.
8. ಯಂತ್ರವೆಂದರೆ ಸಾವಿರಾರು ಜನರ ಉದ್ಯೋಗವನ್ನು ನುಂಗಿ ನೀರು ಕುಡಿಯುವ ಬಕಾಸುರನಿದ್ದಂತೆ.
9. ಭಿಕ್ಷಾಟನೆ ವೃತ್ತಿಯ ತಾಯಿ, ಬಡತನ.
10. A man without Religion is like a horse without a bridal.
11. ದಾನವೆಂದರೆ ಇಲ್ಲದವರಿಗೆ ಇದ್ದವರು ಸಹಾಯ ಮಾಡುವ ನ್ಯಾಯ ಪದ್ಧತಿ.
12. ಕಳ್ಳ ಪೇಟೆಯ ತಾಯಿ, ನಿಯಂತ್ರಣ.
13. ರೈತರ ಕಲ್ಯಾಣದ ಬಗ್ಗೆ ಭಾಷಣ ಮಾಡುವುದು ಅತಿ ಸುಲಭ, ಕಾರ್ಯರೂಪದಲ್ಲಿ ತರುವುದು ಕಷ್ಟ.
14. ಹೊಳೆ ಕಟ್ಟ ಬೇಕು, ಅನ್ನವನ್ನು ಉಣಬೇಕು.

15. ದುರ್ದೈವ, ವಿಜಾಪೂರದಲ್ಲಿ ಹುಟ್ಟಿದ್ದೆ ತಪ್ಪು.
16. ವಿಜಾಪೂರ ಜಿಲ್ಲೆಯ ನೇಕಾರಿಕೆ ಬಂದಾದರೆ, ಆ ಜನ ಭಿಕ್ಷೆ ಬೇಡಬೇಕು.
17. ಅನ್ಯಾಯ ಮಾಡಿಸಿಕೊಳ್ಳುವವರು ಇರುವವರೆಗೆ, ಅನ್ಯಾಯ ಮಾಡುವವರು ಇರುವರೆ.
18. ದೇಶ ಸುಧಾರಣೆಗೆ ಶಿಕ್ಷಣವೇ ರಾಮಬಾಣ.
19. ಜಗತ್ತು ದಿನ ದಿನಕ್ಕೆ ಸಮೀಪವಾಗುತ್ತ ನಡೆದಿದೆ.
20. ದಾನ ಕೊಡುವವರಿಗೆ ಶಾಸನ ಮಾಡಬೇಕು.
21. ನನ್ನ ಒಂದು ಸ್ವಭಾವ ಏನೆಂದರೆ, ಬಿಜಾಪೂರಕ್ಕೆ ಏನು ಉಪಯೋಗವಾಗುತ್ತದೆ, ಅದನ್ನು ಸ್ವಾರ್ಥ ಮಾಡಿಕೊಳ್ಳುವ ಮನುಷ್ಯ.
22. ನಾನು ಎದ್ದ ಕೊಡಲೇ ದುಷ್ಕಾಲದ ಬಗ್ಗೆ ಮಾತಾಡುತ್ತಾನೆ ಎಂಬ ಹೆಸರು ಕೂಡಾ ಆಗಿದೆ.
23. ಎಂ.ಎಲ್.ಎ.ಗಳ ಬಗ್ಗೆ ಯೋಚನೆ ಮಾಡುವ ಬದಲು, ಬಡವನು ಬದುಕುವ ಕಡೆ ಅವನನ್ನು ಉದ್ಧಾರ ಮಾಡುವ ಯೋಚನೆ ಮಾಡಿರಿ ಎಂದು ಹೇಳುತ್ತೇನೆ.
24. ಚಪ್ಪಲಿಯನ್ನಾದರೂ ತಯಾರಿಸಿದರೆ, ನಾವು ಅಲ್ಲಿ ಹುಟ್ಟಿದ್ದಕ್ಕೆ ನಮ್ಮನ್ನು ಹೊಡೆದುಕೊಳ್ಳುವುದಕ್ಕಾದರೂ ಬರುತ್ತದೆ.
25. ಇಲ್ಲಿ ಕೂತುಕ್ಕೊಂಡು ಸುಳ್ಳು ಹೇಳಬೇಡಿರಿ.
26. ನೀವು ಲಂಬಾಣಿ ಸಮಾಜದಿಂದ ಆರಿಸಿ ಬಂಧಂಥವರು, ಅವರ ಅಭಿವೃದ್ಧಿಗಾಗಿ ಯಾವ ಕೆಲಸವನ್ನು ಮಾಡಿಲ್ಲ.
27. ಸಾಯುವ ಬಗ್ಗೆ ರೂಲ್ಸ್ ಏನೂ ಅಡ್ಡಿ ಮಾಡುವುದಿಲ್ಲ.
28. ಅನ್ನ, ನೀರು ಬಿಟ್ಟು, ವಿಧಾನಸೌಧವನ್ನು ಕಟ್ಟಿಕೊಂಡು ಏನು ಮಾಡಬೇಕು?
29. ಲಗ್ನವೇ ಆಗದೆ, ಮಕ್ಕಳು ಎಲ್ಲಿಂದ ಹುಟ್ಟುತ್ತವೆ.
30. ನಾನು ಈಗ ಮಾತನಾಡುವುದು ಭಾಷಣವಲ್ಲ, ನನ್ನ ಜನತೆಯ ಗೋಳಿನ ಬಗ್ಗೆ ಇರುವ ದುಃಖದ ವರ್ಣನೆ.
31. ಮೊಲೆ ಕುಡಿಸದ ತಾಯಿಯನ್ನು ತಕ್ಕೊಂಡು ಏನು ಮಾಡಬೇಕು.
32. ಬೆಂಗಳೂರಿನಲ್ಲಿ ನನಗೆ ಇಂಡಿ, ಸಿಂದಗಿ ದುಷ್ಕಾಲದ ಎಂ.ಎಲ್.ಎ. ಎಂದು ಚಾಷ್ಟಿ ಮಾಡುವರು.
33. ಈ ಬಜೆಟ್‌ನಲ್ಲಾದರೂ ವಿಧವೆ ಹೆಣ್ಣುಮಕ್ಕಳು ಸಾಯುವುದಕ್ಕಾದರೂ ಅವಕಾಶ ಮಾಡಿಕೊಡಿ ಎಂದು ಹೇಳುತ್ತೇನೆ.
34. ಏನಾದರೂ ಒಂದು ದಾರಿ ತೋರಿಸಿ ಕೊಡಿ; ಇಲ್ಲವೇ ನಮ್ಮ ಜನರಿಗೆ ಸಾಯುವಷ್ಟು ವಿಷವನ್ನು ಒದಗಿಸಲು ಸಪ್ಲಿಮೆಂಟರಿ ಡಿಮ್ಯಾಂಡ್‌ನಲ್ಲಿ ಹಣ ಒದಗಿಸಿ.
35. ರಾಜ ಮಹಾರಾಜರನ್ನೇ ಮನೆಗೆ ಕಳುಹಿಸಿದ ಮೇಲೆ ಪಾನ ನಿರೋಧವನ್ನು ಜಾರಿಗೆ ತರುವುದು ಅಷ್ಟೇನೂ ಕಷ್ಟದ ಕೆಲಸವಾಗುವುದಿಲ್ಲ.
36. ನೀವು ಪ್ರವಾಸಕ್ಕಾಗಿ ಖರ್ಚು ಮಾಡುವ ಹಣದಲ್ಲಿ 40 ಬಾವಿಗಳಾದರೂ ಆಗುತ್ತವೆ.
37. ಅಳಲಿಕ್ಕಾದರೂ ದಯಮಾಡಿ ಅವಕಾಶ ಮಾಡಿಕೊಡಿ.
38. ದೊಡ್ಡ ಮೀನುಗಳು ಸಣ್ಣ ಮೀನುಗಳನ್ನು ನುಂಗುತ್ತವೆ.



ಸುಪ್ರೀಮ್ ಕೋರ್ಟ್ ಜಡ್ಜ್ ಗಜೇಂದ್ರ ಗಡಕರ್ ಅವರೊಂದಿಗೆ



ಶ್ರೀ ಜವಾಹರಲಾಲ ನೆಹರು, ಶ್ರೀ ಹಳ್ಳಿಕೇರಿ ಗುಡ್ಲೆಪ್ಪ, ಶ್ರೀ ಜಯಚಾಮರಾಜ ಒಡೆಯರ,
ಅವರೊಂದಿಗೆ ಶ್ರೀ ಶಂಕರಗೌಡ ಪಾಟೀಲ



ಶ್ರೀ ಶರಣಗೌಡ ಪಾಟೀಲರೊಂದಿಗೆ ರಜಾಕಾರ ವಿರೋಧಿ ಚಳುವಳಿಗಾರರು ಹಾಗೂ ಶ್ರೀ ಶಂಕರಗೌಡ ಪಾಟೀಲ



1952ರಲ್ಲಿ ಬಾಬು ಅಸ್ಲೆಂಬಿ ಸಂದರ್ಭ: ಶ್ರೀಮತಿ ಇಂದಿರಾಗಾಂಧಿ, ಆರ್.ಜಿ. ದುಬೇ, ಶ್ರೀ ಮುರಾರ್ಜಿ ದೇಸಾಯಿ, ಶ್ರೀ ಜವಾಹರಲಾಲ ನೆಹರು, ಶ್ರೀ ಶಂಕರಗೌಡ ಪಾಟೀಲ



1972ರಲ್ಲಿ ಕಾಂಗ್ರೆಸ್ ಇಬ್ಭಾಗದ ಸಂದರ್ಭ: ಶ್ರೀಮತಿ ವಿಜಯರಾಜೇ ಸಿಂಧ್ಯ,
ಶ್ರೀ ಅಶೋಕ್ ಮೆಹ್ತಾ ಹಾಗೂ ಶ್ರೀ ಶಂಕರಗೌಡ



ಸೊಲ್ಲಾಪುರ ಲಾ ಕಾಲೇಜಿನಲ್ಲಿ ಶ್ರೀ ಗಜೇಂದ್ರಗಡಕರ್ ಅವರರೊಂದಿಗೆ



ಶ್ರೀ ಶಂಕರಗೌಡ, ಸಿಂಹಾಸನ ತಹಶೀಲ್ದಾರ (ಬಾಗೇವಾಡಿ), ಆಲಮೇಲದೇಶಮುಖರ, ಮತ್ತಿತರೊಂದಿಗೆ



8ನೇ ತಮಾನದ ಚಾವುಂಡರಾಯನ ಕಾಲದ ಸೋಮೇಶ್ವರ ದೇಗುಲ ಪಡಗಾನೂರ

# ಪ್ರತಿಭಾವಂತ ಸಂಸದೀಯ ಪಟು ಪುಸ್ತಕ ಮಾಲಿಕೆ

## ಪ್ರಕಟಗೊಂಡ ಪುಸ್ತಕಗಳು

| ಕ್ರ.ಸಂ. | ಪುಸ್ತಕದ ಹೆಸರು | ಲೇಖಕರ ಹೆಸರು | ದರ |
|---|---|---|---|
| 1. | ಕೆ. ಹನುಮಂತಯ್ಯ | ಪ್ರೊ ಎನ್.ಜಿ. ಪಂಗಣ್ಣಾಯ್ಯ ಹಾಗೂ ಇತರರು | 20.00 |
| 2. | ಎಸ್. ನಿಜಲಿಂಗಪ್ಪ | ಡಾ|| ಸಂದೀಪ್ ಶಾಸ್ತ್ರಿ | 15.00 |
| 3. | ಶಾಂತವೇರಿ ಗೋಪಾಲ ಗೌಡ | ಪ್ರೊ|| ಎನ್.ಜಿ. ಪಂಗಣ್ಣಾಯ್ಯ | 15.00 |
| 4. | ವೈಕುಂಠ ಬಾಳಿಗಾ | ಡಾ|| ಪಿ. ಜೀವನ್ ಕುಮಾರ್ | 20.00 |
| 5. | ವೀರೇಂದ್ರ ಪಾಟೀಲ್ | ಡಾ|| ಎಸ್.ಹೆಚ್. ಕವಂಟೆ ಹಾಗೂ ಇತರರು | 20.00 |
| 6. | ಕಡಿದಾಳ್ ಮಂಜಪ್ಪ | ಡಾ|| ಎಸ್.ಹೆಚ್. ಕವಂಟೆ ಹಾಗೂ ಇತರರು | 15.00 |
| 7. | ಜಿ.ಪಿ. ಹಳ್ಳಿಕೇರಿ | ಡಾ|| ಆರ್.ಎಂ.ಎಲ್. ಪಾಟೀಲ್ | 15.00 |
| 8. | ಕೆ.ಎಸ್. ನಾಗರತ್ನಮ್ಮ | ಪ್ರೊ|| ಎಸ್.ಜಿ. ಪಂಗಣ್ಣಾಯ್ಯ ಹಾಗೂ ಇತರರು | 15.00 |
| 9. | ಡಿ. ದೇವರಾಜ ಅರಸು | ಜೆ.ಎಸ್. ಸದಾನಂದ | 15.00 |
| 10. | ಕೆ.ಟಿ. ಭಾಷ್ಯಂ | ಡಾ|| ವಿಘ್ನೇಶ್ ಎನ್. ಭಟ್ | 15.00 |
| 11. | ಕೆ. ಪುಟ್ಟಸ್ವಾಮಿ | ಜಿ. ದಕ್ಷಿಣಾ ಮೂರ್ತಿ | 15.00 |
| 12. | ಟಿ. ಸಿದ್ದಲಿಂಗಯ್ಯ | ಜಿ. ದಕ್ಷಿಣಾ ಮೂರ್ತಿ | 20.00 |
| 13. | ಜಗಳೂರು ಇಮಾಂ | ಜೆ.ಎಸ್. ಸದಾನಂದ | 15.00 |
| 14. | ಕೆ.ಸಿ. ರೆಡ್ಡಿ | ಡಾ|| ಸಂಧ್ಯಾರೆಡ್ಡಿ | 20.00 |
| 15. | ಬಿ.ಪಿ. ಕಕ್ಕಿಲ್ಲಾಯ | ಎಂ.ಕೆ. ಭಂಡಿ | 20.00 |

